

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ.

ಟೀಕಾ ತಾತ್ಪರ್ಯ ಸಹಿತ

# ಭರ್ತೃಹರಿ ಸುಭಾಷಿತದಲ್ಲಿನ

## ನೀತಿಶತಕವು.

೧ ನೇ ಭಾಗ.

ಶ್ಲೋಕ || ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ |
ಅವಿಘ್ನಂ ಕುರುಮೇದೇವ ಸರ್ವಕಾರ್ಯೇಷು ಸರ್ವದಾ ||

ಶ್ಲೋ|| ದಿಕ್ಕಾಲಾದ್ಯನವಚ್ಛಿನ್ನಾನಂತ ಚಿನ್ಮಾತ್ರ ಮೂರ್ತ
ಯೇ || ಸ್ವಾನುಭೂತ್ಯೇಕಮಾನಾಯ ನಮಶ್ಶಾಂತಾ
ಯ ತೇಜಸೇ || ೧ ||

ಟೀಕು|| ದಿಕ್ಕಾಲಾದ್ಯನವಚ್ಛಿನ್ನಾನಂತ ಚಿನ್ಮಾತ್ರಮೂರ್ತಯೇ-ದಿಕ್-ಪೂರ್ವ ಮೊದಲಾದ ದಿಕ್ಕುಗಳೇನು, ಕಾಲ- ಭೂತಭವಿಷ್ಯದ್ವರ್ತಮಾನಗಳೇನು, ಆದಿ-ಮೊದಲಾಗಿ ಉಳ್ಳಂಥಾವುಗಳಲ್ಲಿ, ಅನವಚ್ಛಿನ್ನ- ವ್ಯಾಪ್ತವಾಗದಂಥಾ, ಅನಂತ-ನಾಶರಹಿತವಾದ, ಚಿನ್ಮಾತ್ರ-ಚಿತ್ಸ್ವರೂಪವಾದ, ಮೂರ್ತಯೇ-ಆಕಾರವುಳ್ಳಂಥಾ, ಸ್ವಾನುಭೂತ್ಯೇಕಮಾನಾಯ-ಸ್ವ- ತನ್ನ, ಅನುಭೂತಿಃ-ಅನುಭವವೇ, ಏಕ - ಮುಖ್ಯವಾದ, ಮಾನಾಯ - ಪರಿಮಾಣವುಳ್ಳಂಥಾ (ಅಥವಾ) ಪ್ರಮಾಣವುಳ್ಳಂಥಾ, ಶಾಂತಾಯ ಶಾಂತಮಾದಂಥಾ (ಅಥವಾ) ಅವಿದ್ಯಾ ಸಂಬಂಧರಹಿತವಾದ, ತೇಜಸೇ-ಕಾಂತಿಗೋಸ್ಕರ, ನಮಃ- ನಮಸ್ಕಾರವು || ( ವೃತ್ತಮಾನುಷ್ಟುಭಂ | ) ||೧||

ತಾತ್ಪರ್ಯ || ಗ್ರಂಥಕರ್ತನು ತಾನು ಮಾಡುವ ಗ್ರಂಥವು ನಿರ್ವಿಘ್ನ ಪರಿಸಮಾಪ್ತಿ ಆಗುವದಕ್ಕೋಸ್ಕರ ಶಿಷ್ಟಾಚಾರ ಸಂಪ್ರದಾಯವನ್ನು ಅನುಸರಿಸಿ ಆಶೀರ್ ನಮಸ್ಕ್ರಿಯಾ ವಸ್ತುನಿರ್ದೇಶಗಳೆಂಬ ತ್ರಿವಿಧ ಮಂಗಳಗಳಲ್ಲಿ

ನಮಸ್ಕಾರಾತ್ಮಕವಾದ ಮಂಗಳವನ್ನು ಆಚರಿಸಿ ಇರುತ್ತಾನೆ. ಎಂದರೆ ಯಾವ ಭಗವಂತನು ಪೂರ್ವಾದಿ ದಿಕ್ಕುಗಳಲ್ಲಿಯೂ, ಸೂರ್ಯಚಕ್ರ ರಥವೇಗದಿಂದ ಹುಟ್ಟುವ ಕಾಲಗಳಲ್ಲಿಯೂ, ಎಂದರೆ ಭೂತಭವಿಷ್ಯದ್ವರ್ತಮಾನ ಕಾಲವೇ ಮೊದಲಾಗಿವುಳ್ಳ ಇತರ ಪ್ರಮಾಣಗಳಲ್ಲಿಯೂ ವ್ಯಾಪ್ತನಾಗಿ ಸ್ವಾತ್ಮಾನುಭವ ಪ್ರಮಾಣದಿಂದ ಧ್ಯೇಯನಾಗಿ ಇರುವ ಅವಿದ್ಯಾರಹಿತನಾಗಿ ಚಿನ್ಮಾತ್ರಸ್ವರೂಪನಾಗಿ ಇರುವ ತೇಜೋರೂಪನಾದ ಭಗವಂತನಿಗೋಸ್ಕರ ನಮಸ್ಕಾರಮಾಡಿ ಗ್ರಂಥವನ್ನು ಆರಂಭಿಸಿದನೆಂದು ಭಾವವು. ||೧||

ಶ್ಲೋ || ಬೋದ್ಧಾರೋ ಮತ್ಸರಗ್ರಸ್ತಾಃ ಪ್ರಭವಃ ಸ್ಮಯ
ದೂಷಿತಾಃ || ಅಬೋಧೋಪಹತಾಶ್ಚಾನ್ಯೇ ಜೀರ್ಣ
ಮಂಗೇಸುಭಾಷಿತಂ || ೨ ||

ಟೀಕು|| ಬೋದ್ಧಾರಃ-ಪಂಡಿತರು, ಮತ್ಸರಗ್ರಸ್ತಾಃ- ಮತ್ಸರ-ಅಸೂಯೆಯಿಂದ, ಗ್ರಸ್ತಾಃ- ಕೂಡಿದಂಥಾವರುಗಳು, (ಭವಂತಿ- ಆಗುತ್ತಾರೆ) ಪ್ರಭವಃ-ರಾಜರು (ಅಥವಾ) ದೊರೆಗಳು, ಸ್ಮಯದೂಷಿತಾಃ- ಸ್ಮಯ- ಗರ್ವದಿಂದ, ದೂಷಿತಾಃ - ದುರ್ವಿನಯರಾದಂಥಾವರುಗಳು, ಭವಂತಿ ಆಗುತ್ತಾರೆ. ಅನ್ಯೇ- ಮತ್ತೆ ಕೆಲವರು, ಅಬೋಧೋಪಹತಾಃ- ಅಬೋಧ- ತಿಳಿಯದೇ ಇರುರೋಣದರಿಂದ, ಉಪಹತಾಃ- ಹೊಡೆಯಲ್ಪಟ್ಟಂಥಾವರುಗಳು, (ಭವಂತಿ) ಆಗುತ್ತಾರೆ ತಸ್ಮಾತ್- ಆ ಕಾರಣದ ದೆಸೆಯಿಂದ, ಸುಭಾಷಿತಂ- ಸು-ಸಮೀಚೀನವಾದಂಥಾ, ಭಾಷಿತಂ-ವಾಕ್ಯ. ಅಂಗೇ-ಶರೀರದಲ್ಲಿ, ಜೀರ್ಣಂ- ಅಂತರ್ಗತವಾದದ್ದು, (ಭವತಿ ಆಗುತ್ತದೆ.) ತಥಾಪಿ- ಹಾಗಾದಾಗ್ಯೂ, ವಕ್ಷ್ಯಾಮಿ- ಹೇಳುತ್ತೇನೆ. (ವೃತ್ತ ಮಾನುಷ್ಟುಭಂ.) ||೨||

ತಾತ್ಪರ್ಯ|| ತಿಳಿದಂಥಾ ವಿದ್ವಾಂಸರುಗಳು ವಿದ್ಯಾವಂತನಲ್ಲಿ ಮತ್ಸರವನ್ನು ಮಾಡುತ್ತಾರೆ ರಾಜರು ಐಶ್ವರ್ಯಮದದಿಂದ ಗರ್ವಿಷ್ಠರಾಗಿ ವಿದ್ವಾಂಸರ ವಾಕ್ಯವನ್ನು ಕೇಳುವದೇ ಇಲ್ಲ. ಇವರಲ್ಲದ ಮತ್ತೆ ಕೆಲವರು ಇದರ (ಅಂದರೆ) ಗೀರ್ವಾಣವಾಣೀರಸ ಜ್ಞಾನವಾದವರು ಬುದ್ಧಿಹೀನರಾಗಿ ಇದ್ದಾರೆ. ಆದಕಾರಣದ ದೆಸೆಯಿಂದ ಸಮೀಚೀನವಾದ ಗೀರ್ವಾಣವಾಕ್ಯ ನನ್ನ ಶರೀರದಲ್ಲಿಯೇ ಜೀರ್ಣವಾಗುತ್ತೆಂದು ಯೋಚಿಸಿ ಪಶ್ಚಾತ್ತಾಪದಿಂದ ಹೇಳುತ್ತಾನೆಂದು ಗ್ರಂಥಕರ್ತನ ಅಭಿಪ್ರಾಯ ||೩||

ಶ್ಲೋ॥ ಅಜ್ಞಃ ಸುಖಮಾರಾಧ್ಯಃ ಸುಖತರಮಾರಾಧ್ಯತೇ
ವಿಶೇಷಜ್ಞಃ ॥ ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ
ನರಂನರಂಜಯತಿ ॥ ೩ ॥

ಟೀ॥ ಅಜ್ಞಃ-ಮೂಢಮನುಷ್ಯನು, ಸುಖಂಯಥಾತಥಾ- ಸುಖವಾಗೋಣ ಹೇಗೋ ಹಾಗೆ, (ಅಥವಾ) ಕ್ಲೇಶವಿಲ್ಲದೆ, ಆರಾಧ್ಯಃ- ಸಮಾಧಾನಪಡಿಸುವದಕ್ಕೆ ಯೋಗ್ಯನಾಗುತ್ತಾನೆ. ವಿಶೇಷಜ್ಞಃ-ಪಂಡಿತನಾದವನು, ಸುಖತರಂ- ಅತಿಸುಲಭವಾಗಿ, ಆರಾಧ್ಯತೇ-ಸಮಾಧಾನಪಡಿಸಲ್ಪಡುತ್ತಾನೆ. ಕಿಂತು- ಮತ್ತೇನೆಂದರೆ, ಜ್ಞಾನಲವದುರ್ವಿದಗ್ಧಂ-ಜ್ಞಾನ- ಶಾಸ್ತ್ರಜ್ಞಾನದ, ಲವ-ಲೇಶದಿಂದ, ದುರ್ವಿದಗ್ಧಂ- ಪಂಡಿತಮಾನಿಯಾದ, ನರಂ-ಮೂರ್ಖಮನುಷ್ಯನನ್ನು ಬ್ರಹ್ಮಾಪಿ-ಚತುರ್ಮುಖಬ್ರಹ್ಮನೂಕೂಡ, ನರಂಜಯತಿ- ಸಮಾಧಾನವನ್ನು ಪಡಿಸುವಂಥಾವನು ಆಗುವದಿಲ್ಲ (ವೃತ್ತಮಾರ್ಯಾಭೇದಃ-ಅತಿಶಯೋಕ್ತ್ಯಲಂಕಾರಭೇದಃ, ) ॥ ೩ ॥

ತಾತ್ಪರ್ಯ॥ ಪ್ರಸಂಗಸಂಗತಿಯಿಂದ ಮೂರ್ಖಪದ್ಧತಿಯನ್ನು ಅನುಸರಿಸುತ್ತಿರುವ ಗ್ರಂಥಕರ್ತನು ಮೂರ್ಖಮನುಷ್ಯನ ವಿಷಯವನ್ನು ಕುರಿತು ಹೇಳುತ್ತಾನೆ— ತಿಳಿಯದ ಮನುಷ್ಯನಿಗೆ ಸುಖದಿಂದ ಬೋಧಿಸಬಹುದು. ತಿಳಿದ ಮನುಷ್ಯನು ಅತಿಸುಲಭವಾಗಿ ಹೇಳಿದ ವಿಷಯಗಳನ್ನು ಗ್ರಹಿಸೋಣದರಿಂದ ಹೇಳುವರಿಗೆ ಅತ್ಯಂತ ಸೌಲಭ್ಯವಾಗಿ ಇರುತ್ತದೆ. ಯತ್ಕಿಂಚಿತ್ ತಿಳಿದ ಪಂಡಿತನೋಪಾಯಲ್ಲಿ ಆಚರಿಸುತ್ತಿರುವ ಮೂರ್ಖ ಮನುಷ್ಯನನ್ನು ಚತುರ್ಮುಖಬ್ರಹ್ಮನೂಕೂಡ ಸಮಾಧಾನಪಡಿಸಲಾರನೆಂದು ಭಾವವು

ಶ್ಲೋ॥ ಪ್ರಸಹ್ಯ ಮಣಿಮುದ್ಧರೇನ್ಮಕರವಕ್ತ್ರ ದಂಷ್ಟ್ರಾಂ
ತರಾತ್ಸಮುದ್ರಮಪಿ ಸಂತರೇತ್ಪ್ರಚಲದೂರ್ಮಿ
ಮಾಲಾಕುಲಂ ॥ ಭುಜಂಗಮಪಿ ಕೋಪಿತಂ ಶಿರಸಿ
ಪುಷ್ಪವದ್ಧಾರಯೇನ್ನತು ಪ್ರತಿನಿವಿಷ್ಟ ಮೂರ್ಖಜನ
ಚಿತ್ತಮಾರಾಧಯೇತ್ ॥ ೪ ॥

ಟೀಕು॥ ಮಕರವಕ್ತ್ರದಂಷ್ಟ್ರಾಂತರಾತ್- ಮಕರ- ಮೊಸಳೆಯ, ವಕ್ತ್ರ- ಮುಖದಲ್ಲಿರುವ, ದಂಷ್ಟ್ರ-ಕೋರೆಹಲ್ಲುಗಳ, ಅಂತರಾತ್- ಮಧ್ಯಪ್ರದೇಶದ ದೆಸೆಯಿಂದ, ಮಣಿಂ-ವಜ್ರಮಣಿಯನ್ನು, ಪ್ರಸಹ್ಯ-ಬಲಾತ್ಕಾರವಾಗಿ, ಉದ್ಧ

ರೇತ್-ತೆಗೆಯಬಹುದು. ಪ್ರಚಲದೂರ್ಮಿ ಮಾಲಾಕುಲಂ-ಪ್ರಚಲತ್-ಹೆಚ್ಚಾಗಿ ಚಲಿಸುತ್ತಾಇರುವ, ಊರ್ಮಿ- ತೆರೆಗಳ, ಮಾಲಾ- ಪರಂಪರೆಗಳಿಂದ, ಆಕುಲಂ-ಕೂಡಿರುವ, ಸಮುದ್ರಮಪಿ-ಸಮುದ್ರವನ್ನಾದರೂ, ಪ್ರತರೇತ್ ಹಾರಬಹುದು. ಕೋಪಿತಂ-ರೋಷೋದ್ದೀಪಿತವಾಗಿ ಮಾಡಲ್ಪಟ್ಟ, ಭುಜಂಗಮಪಿ-ಸರ್ಪವನ್ನಾದರೂ, ಶಿರಸಿ-ಶಿರಸ್ಸಿನಲ್ಲಿ, ಪುಷ್ಪವತ್ ಹೂವಿನೋಪಾದಿಯಲ್ಲಿ ಧಾರಯೇತ್- ಧಾರಣೆ ಮಾಡಬಹುದು. ಪ್ರತಿನಿವಿಷ್ಟಮೂರ್ಖಜನಚಿತ್ತಂ-ಪ್ರತಿನಿವಿಷ್ಟ-ದುರಾಗ್ರಹದಿಂದ ಕೂಡಿದ, ಮೂರ್ಖಜನ-ಮೂರ್ಖಮನುಷ್ಯರ, ಚಿತ್ತಂತು-ಮನಸ್ಸನ್ನಾದರೋ, ನಾರಾಧಯೇತ್- ಸಮಾಧಾನಪಡಿಸುವದಕ್ಕೆ ಆಗುವದಿಲ್ಲ. ॥೪॥

ತಾತ್ಪರ್ಯ॥ ಮೊಸಳೆಯ ಬಾಯಿಯಲ್ಲಿ ಇರುವ ಕೋರೆ ಹಲ್ಲುಗಳ ಮಧ್ಯದಲ್ಲಿರುವ ರತ್ನವನ್ನಾದರೂ ಯಾವದಾದರೊಂದು ಉಪಾಯಾಂತರದಿಂದ ಬಲಾತ್ಕಾರವಾಗಿಯೂ ಈಚೆಗೆ ತೆಗೆಯಬಹುದು. ಹೆಚ್ಚಾಗಿ ಚಲಿಸುತ್ತಾ ಇರುವ ತೆರೆಗಳ ಪಙ್ಕ್ತಿಗಳಿಂದ ಕೂಡಿಕೊಂಡು ಇರುವ ಸಮುದ್ರವನ್ನಾದರೂ ಹೇನಾದರೂ ಪ್ರಯತ್ನದಿಂದ ದಾಟಬಹುದು. ಸರ್ಪವನ್ನು ಕೆಣಕಿ ಕೋಪವುಂಟುಮಾಡಿ ಅಂಥಾ ಸರ್ಪವನ್ನಾದರೂ ಮಹಾಮಂತ್ರಗಳಿಂದ ಸಾಧುಮಾಡಿಕೊಂಡು ಹೂವಿನಂತೆ ತಲೆಯಲ್ಲಿ ಮುಡಿದುಕೊಳ್ಳಬಹುದು. ದುರಾಗ್ರಹದಿಂದ ಕೂಡಿದ ಮೂರ್ಖಜನ ಚಿತ್ತವನ್ನಾದರೋ ಸಮಾಧಾನಪಡಿಸುವದಕ್ಕೆ ಆಗುವದಿಲ್ಲ. ಅಂದರೆ ಆಗಲಾರದ ಅಸಾಧ್ಯವಾದ ಕೆಲಸಗಳನ್ನಾದರೂ ಒಂದುವೇಳೆ ಯಾವ ಉಪಾಯಾಂತರಗಳಿಂದಲಾದರೂ ಸಾಧಿಸಬಹುದು. ದುರ್ಜನರನ್ನು ಸಮಾಧಾನಪಡಿಸಲು ಆಗುವದಿಲ್ಲವೆಂಬ ಭಾವವು (ಅತಿಶಯೋಕ್ತ್ಯಲಂಕಾರ) ॥೪॥

ಶ್ಲೋ॥ ಲಭೇತ ಸಿಕತಾಸು ತೈಲ ಮಪಿ ಯತ್ನತಃ ಪೀಡಯನ್
ಪಿಬೇಚ್ಚ ಮೃಗತೃಷ್ಣಿಕಾಸು ಸಲಿಲಂ ಪಿಪಾಸಾ
ರ್ದಿತಃ ॥ ಕದಾಚಿದಪಿ ಪರ್ಯಟನ್ ಶಶವಿಷಾಣ ಮಾಸಾ
ದಯೇನ್ನತು ಪ್ರತಿನಿವಿಷ್ಟ ಮೂರ್ಖಜನ ಚಿತ್ತಮಾ
ರಾಧಯೇತ್ ॥ ೫ ॥

ಟೀಕು॥ ಸಿಕತಾಸ್ವಪಿ- ಮರಳಿನಲ್ಲಿಯೂ ಕೂಡ, ಯತ್ನತಃ-ಪ್ರಯತ್ನದ ಪಸೆಯಿಂದ, ತೈಲಂ-ಎಣ್ಣೆಯನ್ನು, ಪೀಡಯನ್-ಹಿಂಡಿದಂಥಾವನಾಗಿ, ಲಭೇತ-

ಹೊಂದುವನು. ಪಿಪಾಸಾರ್ದಿತಃ-ಪಿಪಾಸಾ- ಬಾಯಾರಿಕೆಯಿಂದ, ಅರ್ದಿತಃ-ಒಳಲಿದಂಥಾ ಮನುಷ್ಯನು, ಮೃಗತೃಷ್ಣಿಕಾಸು-ಬಿಸಿಲ ಝುಳದಲ್ಲಿ, ಸಲಿಲಂ-ನೀರನ್ನು ಆದರೂ, ಪಿಬೇತ್-ಪಾನಮಾಡುವನು. ಪರ್ಯಟನ್-ತಿರುಗುತ್ತಲಿರುವ (ಅಥವಾ) ಸಂಚರಿಸುತ್ತಲಿರುವ ಮನುಷ್ಯನು. ಕದಾಚಿದಪಿ- ಒಂದಾನೊಂದು ಕಾಲದಲ್ಲಾದರೂ, ಶಶವಿಷಾಣಂ ಶಶ-ಮೊಲದ, ವಿಷಾಣಂ-ಶೃಂಗವನ್ನು ಆಸಾದಯೇತ್-ಹೊಂದುವನು. ಪ್ರತಿನಿವಿಷ್ಟಮೂರ್ಖಜನಚಿತ್ತಂ-ಪ್ರತಿನಿವಿಷ್ಟ-ದುರಾಗ್ರಹದಿಂದ ಕೂಡಿದಂಥಾ, ಮೂರ್ಖಜನ- ಮೂರ್ಖಮನುಷ್ಯರ, ಚಿತ್ತಂತು-ಮನಸ್ಸನ್ನಾದರೋ, ನಾರಾಧಯೇತ್-ಸಮಾಧಾನಪಡಿಸುವದಕ್ಕೆ ಆಗುವದಿಲ್ಲ. ಪೃಥ್ವೀವೃತ್ತಂ॥ ಅತಿಶಯೋಕ್ತ್ಯಲಂಕಾರಭೇದಃ ॥

ತಾತ್ಪರ್ಯ॥ ಅಸಾಧ್ಯವಾದ ಕೆಲಸವನ್ನಾದರೂ ಮಾಡಬಹುದು. ಮೂರ್ಖಮನುಷ್ಯರ ಮನಸ್ಸನ್ನು ಸಮಾಧಾನಪಡಿಸುವದಕ್ಕೆ ಆಗುವದಿಲ್ಲವೆಂಬ ಅಭಿಪ್ರಾಯವನ್ನೇ ಈ ಶ್ಲೋಕದಲ್ಲಿ ಹೇಳುತ್ತಾನೆ. ಯಂತ್ರ ಮೊದಲಾದ ಉಪಾಯಗಳಿಂದ ಹಿಂಡಿ ಮರಳಿನಲ್ಲಿಯಾದರೂ ಎಣ್ಣೆಯನ್ನು ತೆಗೆಯಬಹುದು. ಬಾಯಾರಿಕೆಯಿಂದ ಬಳಲಿದವನು ಬಿಸಿಲು ಝುಳಗಳಲ್ಲಾದರೂ ನೀರನ್ನು ಕುಡಿದಾನು, ಅಡವಿಯಲ್ಲಿ ಯಾವಾಗಲೂ ತಿರುಗುತ್ತಾ ಇರುವ ಮನುಷ್ಯನು ಒಂದಾನೊಂದ ಸಮಯದಲ್ಲಿಯಾದರೂ ಮೊಲದ ಕೊಂಬನ್ನು ಹೊಂದಿಯಾನು. ಇಂಥಾ ಅಸಾಧ್ಯವಾದ ಕೆಲಸಗಳನ್ನು ಮಾಡಿದರೂ ಮೂರ್ಖಜನಗಳ ಮನಸ್ಸನ್ನು ಸಮಾಧಾನಪಡಿಸುವದಕ್ಕೆ ಆಗುವದಿಲ್ಲವೆಂಬ ಭಾವವು. ॥೫॥

ಶ್ಲೋ॥ ವ್ಯಾಳಂ ಬಾಲ ಮೃಣಾಲ ತಂತುಭಿರ ಸೌರೋದ್ಧುಂ
ಸಮುಜ್ಜೃಂಭತೇ । ಭೇತ್ತುಂವಜ್ರಮಣಿಂ ಶಿರೀಷಕು
ಸುಮ ಪ್ರಾಂತೇನ ಸನ್ನಹ್ಯತಿ ॥ ಮಾಧುರ್ಯಂ ಮಧು
ಬಿಂದುನಾ ರಚಯಿತುಂ ಕ್ಷಾರಾಂಬುಧೇರೀಹತೇ ।
ಮೂರ್ಖಾನ್ಯಃ ಪ್ರತಿನೇತು ಮಿಚ್ಛತಿ ಬಲಾ ತ್ಸೂ
ಕ್ತೈಃ ಸುಧಾಸ್ಯಂದಿಭಿಃ ॥೬॥

ಟೀ॥ ಯಃ-ಯಾವ ಮನುಷ್ಯನು, ಬಾಲಮೃಣಾಳತಂತುಭಿಃ-ಬಾಲ-ಎಳದಾದ, ಮೃಣಾಳು-ಕಮಲದದಂಟಿನ, ತಂತುಭಿಃ-ದಾರಗಳಿಂದ, ವ್ಯಾಳಂ-ಮದ

ಹಿಡಿದ ಆನೆಯನ್ನು, ರೋದ್ಧುಂ-ಕಟ್ಟಿಹಾಕುವದಕ್ಕೋಸ್ಕರ, ಸಮುಜ್ಜೃಂಭತೇ-ಪ್ರಯತ್ನಮಾಡುತ್ತಾನೋ, ಯಃ- ಯಾವ ಮನುಷ್ಯನಾದರೆ, ವಜ್ರಮಣಿಂ-ವಜ್ರಾಖ್ಯಮಣಿ ವಿಶೇಷವನ್ನು, ಶಿರೀಷಕುಸುಮಪ್ರಾಂತೇನ-ಶಿರೀಷಕುಸುಮ-ಬಾಗೆಹುವ್ವಿನ, ಪ್ರಾಂತೇನ-ಅಂಚಿನಿಂದ, ಭೇತ್ತುಂ ಸೀಳುವದಕ್ಕೋಸ್ಕರ, ಸಂನಹ್ಯತಿ- ಉದ್ಯುಕ್ತನಾಗುತ್ತಾನೋ, ಯಃ- ಯಾವ ಮನುಷ್ಯನು. ಕ್ಷಾರಾಂಬುಧೇಃ-ಲವಣಸಮುದ್ರಕ್ಕೆ, ಮಧುಬಿಂದುನಾ-ಮಧು-ಜೇನುತುಪ್ಪದ, ಬಿಂದುನಾ-ಒಂದು ಹನಿಯಿಂದ, ಮಾಧುರ್ಯಂ- ಮಧುರಗುಣವನ್ನು, ರಚಯಿತುಂ-ಉಂಟುಮಾಡುವದಕ್ಕೋಸ್ಕರ, ಈಹತೇ- ಇಚ್ಛಿಸುತ್ತಾನೋ ಅಸೌ ಆಮನುಷ್ಯನು, ಸುಧಾಸ್ಯಂದಿಭಿಃ- ಸುಧಾ-ಅಮೃತವನ್ನು, ಸ್ಯಂದಿಭಿಃ-ಸುರಿಸುತ್ತಲಿರುವ, ಸೂಕ್ತಿಭಿಃ-ಸವಿಮಾತಿನವಾದಮಾತಿನಿಂದ, ಮೂರ್ಖಾನ್-ಮೂರ್ಖಮನುಷ್ಯರನ್ನು, ಬಲಾತ್-ಬಲಾತ್ಕಾರವಾಗಿ, ಪ್ರತಿನೇತುಂ ಸಮಾಧಾನಪಡಿಸುವದಕ್ಕೋಸ್ಕರ, ಇಚ್ಛತಿ- ಆಸೆಪಡುತ್ತಾನೆ. ||೬||

ವಾಕ್ಯಾರ್ಥವೃತ್ತಿನಿದರ್ಶನಾಲಂಕಾರಃ ಶಾರ್ದೂಲವಿಕ್ರೀಡಿತಂವೃತ್ತಂ ||

ತಾತ್ಪರ್ಯ|| ಮೂರ್ಖಮನುಷ್ಯರಿಗೆ ಬುದ್ಧಿವಾದಗಳಿಂದ ಸಮಾಧಾನಪಡಿಸತಕ್ಕವರು ಹೆಚ್ಚಾದ ಅವಿವೇಕಿಗಳೆಂಬುವ ಭಾವವನ್ನು ತೋರಿಸುತ್ತಾನೆ. ಯಾವ ಮನುಷ್ಯನಾದರೂ ಎಳೆದಾದ ತಾವರೆದಂಟಿನ ದಾರದಿಂದ ಮದಗಜವನ್ನು ಕಟ್ಟಿಹಾಕುವದಕ್ಕೆ ಉದ್ಯೋಗವಾಡುತ್ತಾನೋ, ವಜ್ರಮಣಿಯನ್ನು ಬಾಗೆಹುವ್ವಿನ ಅಂಚಿನಿಂದ ಕೊಯ್ಯುತ್ತಾನೋ, ಮತ್ತು ಉಪ್ಪಿನ ಸಮುದ್ರವನ್ನು ಒಂದುತೊಟ್ಟು ಜೇನುತುಪ್ಪದಿಂದ ಮಧುರವಾಗಿ ಮಾಡುವದಕ್ಕೆ ಇಚ್ಛಿಸುತ್ತಾನೋ, ಅಂಥಾ ಮನುಷ್ಯನು ಮೂರ್ಖಜನಗಳನ್ನು ಒಳ್ಳೆ ಮಾತಿನಿಂದ ಸಂತೋಷಪಡಿಸುವದಕ್ಕೆ ಹೋಗುತ್ತಾನೆ. ಅಂದರೆ ಆಗದೇ ಇರುವ ಕೆಲಸವನ್ನು ಮಾಡುವದಕ್ಕೆ ಹೋದವನು ಮೂರ್ಖಮನುಷ್ಯನಿಗಿಂತ ಅವಿವೇಕಿ ಎನ್ನಿಸಿಕೊಳ್ಳುತ್ತಾನೆಂದು ಭಾವವು ||೬||

ಶ್ಲೋ|| ಸ್ವಾಯತ್ತಮೇಕಾಂತ ಹಿತಂ ವಿಧಾತ್ರಾ | ವಿನಿರ್ಮಿತಂ ಛಾದನಮಜ್ಞತಾಯಾಃ || ವಿಶೇಷತಸ್ಸರ್ವವಿದಾಂಸಮಾಜೇ | ವಿಭೂಷಣಂಮೌನಮಪಂಡಿತಾನಾಂ

ಟೀಕು|| ವಿಧಾತ್ರಾ-ಬ್ರಹ್ಮದೇವರಿಂದ, ಸ್ವಾಯತ್ತಂ-ಆತ್ಮಾಧೀನವಾದ, ಏಕಾಂತಹಿತಂ ಏಕಾಂತ- ಅತ್ಯಂತವಾಗಿ, ಹಿತಂ- ಹಿತಕಾರಿಯಾದ, ಅಜ್ಞತಾ

ಯಾಃ-ಅಜ್ಞತ ಕ್ಕೆ, ಛಾದನಂ-ಆಚ್ಛಾದನಕರವಾದ, ವಿಶೇಷತಃ- ಅತ್ಯಂತವಾಗಿ ಸರ್ವವಿದಾಂ-ಸರ್ವ-ಸಮಸ್ತವನ್ನು, ವಿದಾಂ- ತಿಳಿದಂಥಾವರುಗಳ, ಸಮಾಜೇ- ಗುಂಪಿನಲ್ಲಿ, ಅಪಂಡಿತಾನಾಂ- ಅವಿದ್ವಾಂಸರಿಗೆ. ಮೌನಂ ಮೌನವು, ವಿಭೂಷಣಂ- ಅಲಂಕಾರವಾಗಿ, ವಿನಿರ್ಮಿತಂ- ನಿರ್ಮಾಣಮಾಡಲ್ಪಟ್ಟಿತು (ಉತ್ಪ್ರೇಕ್ಷಾಲಂಕಾರಭೇದಃ ॥ ವೃತ್ತಮುಪಜಾತಿಃ ॥ ಇಂದ್ರೋಪೇಂದ್ರವಜ್ರಮಿಂತಿಚ ॥) ।೭॥

ತಾತ್ಪರ್ಯ॥ ಮೂರ್ಖಜನರ ಸ್ವಭಾವವನ್ನು ಹೇಳುತ್ತಾನೆ.—ಮೂರ್ಖಜನಗಳಿಗೆ ವಿದ್ವಾಂಸರ ಸಮಾಜದಲ್ಲಿ ಮಾತನಾಡುವುದಕ್ಕೆ ಆಗದಹಾಗೆ ಬ್ರಹ್ಮದೇವರು ಮೌನವಾಗಿ ಇರುವದನ್ನೇ ಅಲಂಕಾರವಾಗಿ ನಿರ್ಮಾಣಮಾಡಿ ಇಟ್ಟಾನೆ. ಏಕೆಂದರೆ— ವಿದ್ವಾಂಸರ ಸಮಾಜದಲ್ಲಿ ಅವಿದ್ವಾಂಸನು ಮಾತನಾಡಿದರೆ ಹಾಸ್ಯಕ್ಕೆ ಕಾರಣವಾಗುತ್ತಾದ್ದರಿಂದ ಇವರುಗಳು ಮೌನವಾಗಿ ಕೂತುಕೊಂಡು ಇರುವದೇ ಗೌರವವೆಂದು ಭಾವವು. ।೭॥

ಶ್ಲೋ॥ ಯದಾ ಕಿಂಚಿಜ್ಜ್ಞೋಹಂ ಗಜ ಇವ ಮದಾಂಧಃ ಸಮ
ಭವಂ ತದಾ ಸರ್ವಜ್ಞೋಸ್ಮೀತ್ಯಭವದವಲಿಪ್ತಂ
ಮಮ ಮನಃ ॥ ಯದಾ ಕಿಂಚಿತ್ಕಿಂಚಿದ್ಬುಧಜನಸ
ಕಾಶಾದವಗತಂ ತದಾ ಮೂರ್ಖೋಸ್ಮೀತಿ ಜ್ವರ ಇವ
ಮದೋ ಮೇ ವ್ಯಪಗತಃ ॥೮॥

ಟೀಕಾ॥ ಅಹಂ-ನಾನು, ಯದಾ-ಯಾವಾಗ, ಕಿಂಚಿಜ್ಜ್ಞಃ-ಸ್ವಲ್ಪತಿಳಿದಂಥಾವನು, ಅಭವಂ- ಆಗುತ್ತೇನೋ, ತದಾ- ಆಕಾಲದಲ್ಲಿ, ಸರ್ವಜ್ಞೋಸ್ಮಿ- ಸರ್ವವನ್ನು ತಿಳಿದಂಥಾವನಾಗಿದ್ದೇನೆ. ಇತಿ ಹೀಗೆಂಬದಾಗಿ, ಮಮ-ನನ್ನ, ಮನಃ- ಮನಸ್ಸು, ಅವಲಿಪ್ತಂ-ಗರ್ವದಿಂದ ಕೂಡಿದಂಥಾದ್ದು, ಅಭವತ್ ಆಗುತ್ತದೆ. ಯದಾ-ಯಾವಕಾಲದಲ್ಲಿ, ಬುಧಜನಸಕಾಶಾತ್- ವಿದ್ವಾಂಸರ ಬಳಿಯಿಂದ, ಕಿಂಚಿತ್ಕಿಂಚಿತ್- ಕೊಂಚಕೊಂಚವಾಗಿ, ಜ್ಞಾತಂ- ತಿಳಿಯಲ್ಪಡುತ್ತೆಯೋ, ತದಾ-ಆಕಾಲದಲ್ಲಿ, ಮೂರ್ಖಃ- ಮೂರ್ಖಮನುಷ್ಯನು, ಅಸ್ಮಿ-ಆಗಿದ್ದೇನೆ, ಇತಿ-ಹೀಗೆಂಬದಾಗಿ, ಮೇ-ನನ್ನ, ಮದಃ-ಅಹಂಕಾರವೂ, ಜ್ವರಇವ ಜ್ವರದೋಪಾದಿಯಲ್ಲಿ, ವ್ಯಪಗತಃ - ಹೊರಟು ಹೋಗುವಂತಾಯಿತು.
ಶಿಖರಿಣೀವೃತ್ತಂ ॥ ॥೮॥

ತಾತ್ಪರ್ಯ॥ ಯಾವ ಮನುಷ್ಯನಾದರೂ ಕೊಂಚವಾಗಿ ತಿಳಿದಿರುತ್ತಾನೋ ಆ ಮನುಷ್ಯನು ತಾನು ಎಲ್ಲವನ್ನೂ ತಿಳಿದವನಾಗಿ ಇದ್ದೇನೆಂದು ಹೇಳಿಕೊಳ್ಳುತ್ತಾನೆ. ವಿದ್ವಾಂಸರ ದೆಸೆಯಿಂದ ಯಾವ ಕಾಲದಲ್ಲಿ ಕೊಂಚ ಕೊಂಚವಾಗಿ ತಿಳಿದುಕೊಳ್ಳುತ್ತಾನೋ ಆ ಕಾಲದಲ್ಲಿ ತನಗೆ ಏನೂ ತಿಳಿಯದವನಂತೆ ಆಗುತ್ತಾನೆ. ಆ ಕಾಲದಲ್ಲಿ ಮನುಷ್ಯನಿಗೆ ಇದ್ದ ಅಹಂಕಾರವು ಮೊದಲು ಬಂದಿದ್ದ ಜ್ವರ ಬಿಟ್ಟುಹೋದಹಾಗೆ ಆಗುತ್ತೆಂದು ಭಾವವು.

ಶ್ಲೋ॥ ಕ್ರಿಮಿಕುಲ ಚಿತಂ ಲಾಲಾಕ್ಲಿನ್ನಂ ವಿಗಂಧಿ ಜುಗುಪ್ಸಿತಂ ನಿರುಪಮರಸ ಪ್ರೀತ್ಯಾಖಾದನ್ ಖರಾಸ್ಥಿ ನಿರಾಮಿಷಂ। ಸುರಪತಿ ಮಪಿಶ್ವಾ ಪಾರ್ಶ್ವಸ್ಥಂ ವಿಲೋಕ್ಯನ ಶಂಕತೇನಹಿಗಣಯತಿ ಕ್ಷುದ್ರೋಜಂತುಃ ಪರಿಗ್ರಹಫಲ್ಗುತಾಂ ॥ ೯ ॥

ಟೀಕ॥ ಶ್ವಾ-ನಾಯಿಯು, ಕ್ರಿಮಿಕುಲಚಿತಂ-ಕ್ರಿಮಿ-ಹುಳುಗಳ, ಕುಲ-ಸಮೂಹದಿಂದ-ಚಿತಂ-ವ್ಯಾಪ್ತವಾದಂಥಾ, ಲಾಲಾಕ್ಲಿನ್ನಂ-ಲಾಲಾ-ಜೊಲ್ಲಿನಿಂದ (ಅಥವಾ ಬಾಯಿಜೊಲ್ಲು ನೀರಿನಿಂದ) ಕ್ಲಿನ್ನಂ - ಕೂಡಿಕೊಂಡು ಇರುವ, ವಿಗಂಧಿ-ದುರ್ಗಂಧ ವಿಶಿಷ್ಟವಾದ, ಜುಗುಪ್ಸಿತಂ ಅಸಹ್ಯವಾದ, ನಿರಾಮಿಷಂ-ಮಾಂಸರಹಿತವಾದ, ಖರಾಸ್ಥಿ-ಖರ- ಕತ್ತೆಯ, ಅಸ್ಥಿ- ಮೂಳೆಯನ್ನು, ನಿರುಪಮರಸಪ್ರೀತ್ಯಾ- ನಿರುಪಮ- ಸಾದೃಶ್ಯರಹಿತವಾದ, ರಸ - ಸಾರದ, ಪ್ರೀತ್ಯಾ-ವಿಶ್ವಾಸದಿಂದ, ಖಾದನ್-ಕಡಿಯುತ್ತಾ ಇರುವಂಥಾದ್ದಾಗಿ, ಪಾರ್ಶ್ವಸ್ಥಂ-ಪಾರ್ಶ್ವದಲ್ಲಿರುವಂಥಾ, ಸುರಪತಿಂ-ಇಂದ್ರನನ್ನು, ವಿಲೋಕ್ಯಾಪಿ ನೋಡಿದಂಥಾದ್ದಾಗ್ಯಾದರೂ ಕೂಡ, ನಶಂಕತೇ - ಲಜ್ಜಾಯುಕ್ತವಾಗುವಂಥಾದ್ದಾಗುವದಿಲ್ಲ ತಥಾಹಿ-ಅದುಯುಕ್ತವೇಸರಿ, ಕ್ಷುದ್ರಃ ಕ್ಷುದ್ರವಾದ, ಜಂತುಃ-ಪ್ರಾಣಿಯು, ಪರಿಗ್ರಹ-ಸ್ವೀಕರಿಸಲ್ಪಟ್ಟ ವಸ್ತುವಿನಲ್ಲಿ, ಫಲ್ಗುತಾಂ-ತುಚ್ಛತ್ವವನ್ನು, ನಗಣಯತಿ-ಎಣಿಸುವದಿಲ್ಲ (ಶಿಖರಿಣೀವೃತ್ತಂ) (ಅರ್ಥಾಂತರನ್ಯಾಸಾಲಂಕಾರೋತ್ಥಾಪಿತ ಅಪ್ರಸ್ತುತಪ್ರಶಂಸಾಲಂಕಾರಃ) ॥೯॥

ತಾತ್ಪರ್ಯ॥ ಶ್ವಾನಸ್ವಭಾವವನ್ನು ವರ್ಣನೆ ಮಾಡುವ ವ್ಯಾಜದಿಂದ ಮೂರ್ಖಜನ ಸ್ವಭಾವವನ್ನು ಹೇಳುತ್ತಾನೆ. ಹೇಗಂದರೆ—ಒಂದು ನಾಯಿಯು ಮಾಂಸರಹಿತವಾದ ದುರ್ಗಂಧವಾದ, ಕ್ರಿಮಿಸಂಕುಲವಾದ

ಕತ್ತೆಯು ಮೂಳೆಯನ್ನು ಕಚ್ಚಿಕೊಂಡು ಕಡಿಯುತ್ತಾ ಇರುವ ಕಾಲದಲ್ಲಿ ದೇವೇಂದ್ರನು ಬಂದು ಪಕ್ಕದಲ್ಲಿ ನಿಂತುಕೊಂಡು ಇರುವದನ್ನು ನೋಡಿದಾಗ್ಯೂ ನಾಚಿಕೊಳ್ಳುವದಿಲ್ಲ (ಇದು ನ್ಯಾಯವೇ ಸರಿ) ಹೇಗೆಂದರೆ.— ಕ್ಷುದ್ರಜಂತುವು ತಾನು ಮಾಡುತ್ತಾ ಇರುವ ಕೆಲಸವು ಎಷ್ಟು ಹೀನವಾದಾಗ್ಯೂ ಅದನ್ನು ನಾಚಿಕೆಯಾಗಿ ಎಣಿಸುವದಿಲ್ಲ. ಹೀಗೆ ಹೇಳುವದರಿಂದ ದುರ್ಜನರು ತಾವು ಮಾಡುತ್ತಾ ಇರುವ ಕೆಲಸವು ಎಷ್ಟು ತುಚ್ಛವಾದಾಗ್ಯೂ ತಮಗೆ ಅಯೋಗ್ಯ ಕಾರ್ಯವೆಂದು ತೋಚುವದಿಲ್ಲವೆಂದು ಗ್ರಂಥಕರ್ತನ ತಾತ್ಪರ್ಯವು. ||೯||

ಶ್ಲೋ|| ಶಿರಶ್ಶಾರ್ವಂ ಸ್ವರ್ಗಾತ್ಪಶುಪತಿ ಶಿರಸ್ತಃ ಕ್ಷಿತಿಧರಂ
ಮಹೀಧ್ರಾದುತ್ತುಂಗಾದವನಿ ಮವನೇಶ್ಚಾಪಿ ಜಲ
ಧಿಂ|| ಅಧೋ ಗಂಗಾಸೇಯಂ ಪದಮುಪಗತಾ ಸ್ತೋ
ಕ ಮಥವಾವಿವೇಕ ಭ್ರಷ್ಟಾನಾಂ ಭವತಿ ವಿನಿಪಾತ
ಶ್ಶತಮುಖಃ ||೧೦||

ಟೀಕು|| ಗಂಗಾ-ದೇವಗಂಗೆಯು, ಪ್ರಥಮಂ-ಮೊದಲು, ಸ್ವರ್ಗಾತ್-ಸ್ವರ್ಗಲೋಕವಸೆಯಿಂದ, ಶಾರ್ವಂ- ಈಶ್ವರನಸಮ್ಬಂಧವಾದ, ಶಿರಃ-ಶಿರಸ್ಸನ್ನು, ಉಪಗತಾ-ಹೊಂದಿದಂಥಾದ್ದಾಯಿತು. ತದನು ಅನಂತರದಲ್ಲಿ, ಪಶುಪತಿಶಿರಸ್ತಃ ಪಶುಪತಿ ಈಶ್ವರನ, ಶಿರಸ್ತಃ- ಶಿರಸ್ಸಿನದೆಸೆಯಿಂದ, ಕ್ಷಿತಿಧರಂ-ಹಿಮವತ್ಪರ್ವತವನ್ನು, ಉಪಗತಾ ಹೊಂದಿದಂಥಾದ್ದಾಯಿತು ತದನು-ಅನಂತರದಲ್ಲಿ, ಉತ್ತುಂಗಾತ್-ಉನ್ನತವಾದಂಥಾ ಮಹೀಧ್ರಾತ್-ಹಿಮವತ್ಪರ್ವತದ್ದೆಸೆಯಿಂದ, ಅವನಿಂ-ಭೂಮಿಯನ್ನು, ಉಪಗತಾ ಹೊಂದಿದಂಥಾದ್ದಾಯಿತು ತದನು-ಅನಂತರದಲ್ಲಿ, ಅವನೇಶ್ಚ-ಭೂಮಿಯ ದೆಸೆಯಿಂದ, ಜಲಧಿಂ-ಸಮುದ್ರವನ್ನು, ಉಪಗತಾ ಹೊಂದಿದಂಥಾದ್ದಾಯಿತು. ತದನು- ಅನಂತರದಲ್ಲಿ, ಸೇಯಂ-ಆ ಈ ಗಂಗೆಯು, ಸ್ತೋಕಂ ಕೊಂಚವಾಗಿ, ಅಧಃಪದಂ- ಅಧೋಭಾಗವನ್ನು, ( ಅಥವಾ ಪಾತಾಳಲೋಕವನ್ನು ) ಉಪಗತಾ- ಹೊಂದಿದಂಥಾದ್ದಾಯಿತು. ತಥಾಹಿ- ಅದು ಯುಕ್ತವೇಸರಿ, ವಿವೇಕಭ್ರಷ್ಟಾನಾಂ- ವಿವೇಕ-ವಿವೇಕದಿಂದ (ಅಥವಾ ಜಾಗರೂಕತೆಯಿಂದ) ಭ್ರಷ್ಟಾನಾಂ- ಜಾರಿಹೋದಂಥಾ ಮನುಷ್ಯರಿಗೆ, ಶತಮುಖಃ ನೂರುಪ್ರಕಾರವಾದ, ವಿನಿಪಾತಃ- ಭಂಗವು, (ಅಥವಾ ಅಧಃಪತನವು, ಭವತಿ ಆಗುತ್ತದೆ.) ಶಿಖರಿಣೀವೃತ್ತಂ ಪರ್ಯಾಯಾಲಂಕಾರಃ । ||೧೦||

ತಾತ್ಪರ್ಯ॥ ಲೋಕದಲ್ಲಿ ಅವಿವೇಕದಿಂದ ಅನೇಕದುರ್ಗತಿಗಳು ಸಂಭವಿಸುವದರಿಂದ ಅವಶ್ಯವಾಗಿ ವಿವೇಕವನ್ನು ಸಂಪಾದಿಸಿಟ್ಟುಕೊಳ್ಳಬೇಕೆಂಬ ಸಂಗತಿಯನ್ನು ಹೇಳುತ್ತಾನೆ.— ದೇವಗಂಗೆಯು ಸ್ವರ್ಗದಿಂದಿಳಿದು ಈಶ್ವರನ ಶಿರಸ್ಸಿನಲ್ಲಿ ಬಿದ್ದು, ಅಲ್ಲಿಂದ ಹೊರಟು ಹಿಮವತ್ಪರ್ವತದಲ್ಲಿ ಹರಿದು, ಹಿಮವತ್ಪರ್ವತದ ದೆಸೆಯಿಂದ ಭೂಮಿಯಮೇಲೆ ಹರಿದು, ಅನಂತರ ಸಮುದ್ರದಲ್ಲಿ ಸೇರಿ, ಪಾತಾಳಪದವಿಯನ್ನು ಹೊಂದಿತು. ಹೀಗೆಯೇ ವಿವೇಕಶೂನ್ಯರಾದ ಜನಗಳು ಉನ್ನತಪದವಿಯಿಂದ ನೀಚಸ್ಥಾನಕ್ಕೆ ಬಂದು, ಅಲ್ಲಿಂದ ನಾನಾಮುಖವಾಗಿ ಪ್ರವರ್ತಿಸಿ, ಕಡೆಗೆ ಎಲ್ಲಕ್ಕಿಂತಲೂ ಕನಿಷ್ಠಭಾಗದವರಾಗುತ್ತಾರೆ. ಗಂಗೆ ಸಾಮಾನ್ಯವಾಗಿ ಸ್ವರ್ಗಲೋಕದಿಂದಿಳಿದು ಪರ್ಯಾಯಕ್ರಮವಾಗಿ ಪಾತಾಳಲೋಕ ಗಾಮಿನಿಯಾದದ್ದನ್ನು ನೋಡಿ, ವಿವೇಕಶೂನ್ಯರಾದ ಜನರು ಈರೀತಿ ಉನ್ನತಸ್ಥಾನದಿಂದ ಕಡೆಯವರಾಗಿ ಹೋಗುತ್ತಾರೆಂದು ಹೇಳುವದರಿಂದ ಯಾವ ಮನುಷ್ಯರೂ ಕೂಡ ಅವಿವೇಕಪ್ರವರ್ತಕರಾಗಬಾರದೆಂಬ ಭಾವವು. ॥೧೦॥

ಶ್ಲೋ॥ ಶಕ್ಯೋವಾರಯಿತುಂ ಜಲೇನ ಹುತಭುಕ್ ಛತ್ರೇಣ
ಸೂರ್ಯಾತಪೋ ನಾಗೇಂದ್ರೋ ನಿಶಿತಾಂಕುಶೇನ
ಸಮದೋದಂಡೇನ ಗೋಗರ್ದಭೌ ॥ ವ್ಯಾಧಿರ್ಭೇಷ
ಜಸಂಗ್ರಹೈಶ್ಚ ವಿವಿಧೈ ರ್ಮಂತ್ರಪ್ರಯೋಗೈ
ರ್ವಿಷಂ ಸರ್ವಸ್ಯೌಷಧಮಸ್ತಿ ಶಾಸ್ತ್ರವಿಹಿತಂ ಮೂ
ರ್ಖಸ್ಯನಾಸ್ತ್ಯೌಷಧಂ ॥ ೧೧ ॥

ಟೀಕು॥ ಹುತಭುಕ್- ಯಜ್ಞೇಶ್ವರನು, (ಅಗ್ನಿಯು) ಜಲೇನ- ಉದಕದಿಂದ, ವಾರಯಿತುಂ- ನಿವಾರಣೆ ಮಾಡುವದಕ್ಕೆ, ಶಕ್ಯಃ- ಸಮರ್ಥನಾದಂಥಾದ್ದು, ಸೂರ್ಯಾತಪಃ-ಸೂರ್ಯ-ಸೂರ್ಯನ, ಆತಪಃ- ಬಿಸಿಲು, ಛತ್ರೇಣ-ಛತ್ರದಿಂದ, ವಾರಯಿತುಂ-ನಿವಾರಣೆ ಮಾಡುವದಕ್ಕೋಸ್ಕರ, ಶಕ್ಯಃ-ಸಮರ್ಥವಾದಂಥಾದ್ದು, ವ್ಯಾಧಿಃ ರೋಗವು, ಭೇಷಜಸಂಗ್ರಹೈಶ್ಚ, ಭೇಷಜ-ಔಷಧಗಳ, ಸಂಗ್ರಹೈಶ್ಚ-ಗ್ರಹಣಗಳಿಂದಲೂಕೂಡ, ವಾರಯಿತುಂ-ನಿವಾರಣೆಮಾಡುವದಕ್ಕೋಸ್ಕರ, ಶಕ್ಯಃ-ಸಮರ್ಥವಾದಂಥಾದ್ದು, ವಿಷಂ-ವಿಷವು, ವಿವಿಧೈಃ-ನಾನಾಪ್ರಕಾರವಾದ, ಮಂತ್ರೈಃ ಮಂತ್ರಗಳಿಂದಲೂ, ಪ್ರಯೋಗೈ

ವಿಷಹರವಾದ ಔಷಧ ಪ್ರಯೋಗಗಳಿಂದಲೂ, ವಾರಯಿತುಂ - ನಿವಾರಣೆ ಮಾಡುವದಕ್ಕೋಸ್ಕರ, ಶಕ್ಯಂ- ಸಮರ್ಥವಾದಂಥಾದ್ದು, ಸರ್ವಸ್ಯ- ಸಮಸ್ತಕ್ಕೂ, ಶಾಸ್ತ್ರವಿಹಿತಂ ಶಾಸ್ತ್ರ- ಶಾಸ್ತ್ರದಲ್ಲಿ, ವಿಹಿತಂ ಹೇಳಲ್ಪಟ್ಟಂಥ, ಔಷಧಂ-ಔಷಧವು, ಅಸ್ತಿ-ಇದೆ, ಮೂರ್ಖಸ್ಯ- ಮೂರ್ಖನಿಗೆ, ಔಷಧಂ- ಔಷಧವು, ನಾಸ್ತಿ-ಇಲ್ಲ (ಸ್ವಭಾವೋಕ್ತ್ಯಲಂಕಾರಃ) ॥೧೧॥

ತಾತ್ಪರ್ಯ॥ ಮೂರ್ಖಮನುಷ್ಯನಿಗೆ ಯಾವ ಶಾಸ್ತ್ರದಲ್ಲಿಯೂ ಔಷಧವಿಲ್ಲವೆಂಬ ವಿಷಯವನ್ನು ವರ್ಣನೆಮಾಡಿ ಹೇಳುತ್ತಾನೆ. ಸುಡುವ ಅಗ್ನಿಯನ್ನು ನೀರಿನಿಂದ ಹೋಗಲಾಡಿಸಬಹುದು. ಸೂರ್ಯನ ಬಿಸಿಲನ್ನು ಕೊಡೆಯಿಂದ ಮರೆಮಾಡಬಹುದು. ಮದದಿಂದ ಕೂಡಿಕೊಂಡಿರುವ ಗಜಶ್ರೇಷ್ಠನನ್ನು ಅಂಕುಶಾಯುಧದಿಂದ ಅಡ್ಡಿಪಡಿಸಬಹುದು. ಎತ್ತು ಮತ್ತು ಕತ್ತೆಯನ್ನು ದೊಣ್ಣೆಯಿಂದ ನಿವಾರಣೆಮಾಡಬಹುದು. ರೋಗವನ್ನು ಔಷಧದಿಂದ ನಿವಾರಣೆ ಮಾಡಬಹುದು. ವಿಷವನ್ನು ಮಣಿಮಂತ್ರ ಔಷಧಗಳಿಂದ ನಿವಾರಣೆ ಮಾಡಬಹುದು. ಇವುಗಳಿಗೆಲ್ಲಾ ಶಾಸ್ತ್ರದಲ್ಲಿ ಔಷಧವುಂಟು. ಮೂರ್ಖತನಕ್ಕೆ ಯಾವ ಶಾಸ್ತ್ರದಲ್ಲಿಯೂ ಔಷಧವಿಲ್ಲ. ಎಂದರೆ ಮೂರ್ಖಮನುಷ್ಯನನ್ನು ಸಮಾಧಾನಪಡಿಸಿ ಮನೋರಂಜನೆ ಮಾಡಲಾಗುವದಿಲ್ಲವೆಂಬುವ ಭಾವವು. ॥೧೧॥

—ಇತಿ ಮೂರ್ಖಪದ್ಧತಿ ಸ್ಸಮಾಪ್ತಾ—



—ಅಥ ವಿದ್ವತ್ಪದ್ಧತಿ ಪ್ರಾರಂಭಃ—

ಶ್ಲೋ॥ ಶಾಸ್ತ್ರೋಪಸ್ಕೃತ ಶಬ್ದ ಸುಂದರ ಗಿರಶ್ಶಿಷ್ಯ ಪ್ರದೇಯಾಗಮಾ ವಿಖ್ಯಾತಾಃ ಕವಯೋ ವಸಂತಿವಿಷಯೇ ಯಸ್ಯಪ್ರಭೋ ರ್ನಿರ್ಧನಾಃ । ತಜ್ಜಾಡ್ಯಂ ವಸುಧಾಧಿಪಸ್ಯಸುಧಿಯ ಸ್ತ್ವರ್ಥಂವಿನಾ ಪೀಶ್ವರಾಃ ಕುತ್ಸ್ಯಾಸ್ಯುಃ ಕುಪರೀಕ್ಷಕೈರ್ನಮಣಯೋ ಯ್ಯೈರರ್ಘತಃ ಪಾತಿತಾಃ ॥ ೧೨ ॥

ಟೀಕು॥ ಶಾಸ್ತ್ರೋಪಸ್ಕೃತಶಬ್ದಸುಂದರಗಿರಃ- ಶಾಸ್ತ್ರ- ಕಾಣಾದಗೌತಮಾದಿಗಳಿಂದ, ಉಪಸ್ಕೃತ - ಅಲಂಕರಿಸಲ್ಪಟ್ಟ, ಶಬ್ದ- ತಿಙಸುಬಂತಾದಿಗಳಿಂದ, ಸುಂದರ- ಮನೋಹರವಾದ. ಗಿರಃ- ವಾಕ್ಯಗಳುಳ್ಳ, ಶಿಷ್ಯಪ್ರದೇಯಾಗಮಾಃ ಶಿಷ್ಯ- ಅಂತೇವಾಸಿಗಳಿಗೆ, ಪ್ರದೇಯ ಹೇಳುವದಕ್ಕೆ ಯೋಗ್ಯವಾದ, ಆಗಮಾಃ ಶಾಸ್ತ್ರಗಳುಳ್ಳಂಥಾವರಾದ ಕಾರಣವೇ, ವಿಖ್ಯಾತಾಃ- ಪ್ರಸಿದ್ಧರಾದಂಥ, ಕವಯಃ ಕವೀಶ್ವರರು, ನಿರ್ಧನಾಸ್ಸಂತಃ- ಧನರಹಿತರಾದಂಥಾವರಾಗಿ, ಯಸ್ಯ- ಯಾವರಾಜನ, ವಿಷಯೇ- ದೇಶವಲ್ಲಿ, ವಸಂತಿ- ಇರುತ್ತಾರೊ ತತ್- ಧನಹೀನರಾಗಿರೋಣವು. ವಸುಧಾಧಿಪಸ್ಯ- ರಾಜನಿಗೆ, ಜಾಡ್ಯಂ ಜಡತ್ವವು (ಹೀನತೆಯು) ಸುಧಿಯಸ್ತು- ವಿದ್ವಾಂಸರಾದರೋ, ಅರ್ಥಂವಿನಾಪಿ- ದ್ರವ್ಯವನ್ನುವಿನಾ, ಈಶ್ವರಾಃ - ಸಮರ್ಥರು, ಕಿಂತು - ಮತ್ತೇನಂದರೆ, ಯೈಃಕುಪರೀಕ್ಷಕೈಃ- ಯಾವ ರತ್ನಶಾಸ್ತ್ರಾನಭಿಜ್ಞರಿಂದ, ಮಣಯಃ- ರತ್ನಗಳು, ಅರ್ಘತಃ- ಬೆಲೆಯುದಸೆಯಿಂದ, ಪಾತಿತಾಃ- ಕೆಡಸಲ್ಪಡುತ್ತವೆ, ವಿದ್ವಾಂಸಸ್ತು- ವಿದ್ವಾಂಸರಾದರೋ, ನಕುತ್ಸಾಸ್ಯಸ್ಸ್ಯುಃ - ಕುತ್ಸಿತರಾಗುವುದಿಲ್ಲ. (ಶಾರ್ದೂಲವಿಕ್ರೀಡಿತವೃತ್ತಂ.) ॥೧೬॥

ತಾತ್ಪರ್ಯ॥ ಶಾಸ್ತ್ರಾಭ್ಯಾಸವನ್ನು ಮಾಡಿದ ವಿದ್ವಾಂಸರು ಯಾವ ರಾಜನ ದೇಶದಲ್ಲಿ ನಿರ್ಧನರಾಗಿರುತ್ತಾರೋ ಆ ರಾಜನಿಗೆ ಅದು ಒಂದು ಜಾಡ್ಯವಾಗಿರುತ್ತದೆ. ವಿದ್ವಾಂಸರು ದ್ರವ್ಯಹೀನರಾಗಿದ್ದಾಗ್ಯೂ ಅವರಿಗೆ ಭೂಷಣವೇ. ಅಮೂಲ್ಯವಾದ ರತ್ನಗಳು ರತ್ನಪರೀಕ್ಷೆ ತಿಳಿಯದೇ ಇರುವ ಜನಗಳಿಂದ ಹೀನಬೆಲೆಯಾಗಿ ಮಾಡಲ್ಪಡುತ್ತವೆ. ಅಷ್ಟುಮಾತ್ರಕ್ಕೆ ರತ್ನದ ಬೆಲೆ ಕಮ್ಮಿಯಾಗಲಾರದು. ಹೀಗೆಯೇ ವಿದ್ವಾಂಸರನ್ನು ಕೇವಲ ಬಹುಮಾನದಿಂದ ಕಾಪಾಡದೆ ಇರುವ ರಾಜನಿಗೆ ಹೀನತೆಯೇ ಹೊರತು ವಿದ್ವಾಂಸರಿಗೆ ಹೈನ್ಯವಿಲ್ಲ. ಎಂದರೆ ರಾಜನು ವಿದ್ವಾಂಸರನ್ನು ಕೇವಲ ಬಹುಮಾನದಿಂದ ನೋಡಬೇಕೆಂಬ ಭಾವವು. ೧೬

ಶ್ಲೋ॥ ಹರ್ತುರ್ಯಾತಿ ನಗೋಚರಂ ಕಿಮಪಿಶಂ ಪುಷ್ಣಾತಿ
ಯತ್ಸರ್ವದಾ ಪ್ಯರ್ಥಿಭ್ಯಃ ಪ್ರತಿಪಾದ್ಯಮಾನ ಮನಿ
ಶಂಪ್ರಾಪ್ನೋತಿ ವೃದ್ಧಿಂಪರಾಂ ॥ ಕಲ್ಪಾಂತೇಷ್ವಪಿನ
ಪ್ರಯಾತಿ ನಿಧನಂ ವಿದ್ಯಾಖ್ಯ ಮಂತರ್ಧನಂ ಯೇ

ಷಾಂ ತಾನ್ಪ್ರತಿಮಾನ ಮುಜ್ಝತನೃಪಾಃ ಕಸ್ತೈಸ್ಸ
ಹಸ್ಪರ್ಧತೇ ||೧೩||

ಟೀಕಾ|| ಯಾವ ವಿದ್ಯಾಧನವು, ಹರ್ತುಃ-ಚೋರಾದಿಗಳಿಂದ ಅಪಹಾರ ಮಾಡುವದಕ್ಕೆ, ನಗೋಚರಂಯಾತಿ-ಕಾಣಿಸುವದಿಲ್ಲ, ಕಿಮಪಿ ಅನಿರ್ವಾಚ್ಯವಾದಂಥಾ, ಶಂ ಸುಖವನ್ನು, ಸರ್ವದಾಪಿ-ಸದಾಕಾಲದಲ್ಲಿ, ಪುಷ್ಣಾತಿ ವೃದ್ಧಿ ಮಾಡುತ್ತದೆ, ಅರ್ಥಿಭ್ಯಃ-(ಯಾಚಕರಿಗೋಸ್ಕರ,) ಅಪೇಕ್ಷಿಸುವ ವಿದ್ಯಾರ್ಥಿಗಳಿಗೋಸ್ಕರ, ಅನಿಶಂ-ಯಾವಾಗಲೂ, ಪ್ರತಿಪಾದ್ಯಮಾನಂಸತ್-ಕೊಡುವದಕ್ಕೆ ಯೋಗ್ಯವಾದಂಥಾದ್ದಾಗಿ, ಪರಂ-ಹೆಚ್ಚಾದ, ವೃದ್ಧಿಂ- ಅಭಿವೃದ್ಧಿಯನ್ನು, ಪ್ರಾಪ್ನೋತಿ-ಹೊಂದುತ್ತದೆ, ಕಲ್ಪಾಂತೇಷ್ವಪಿ-ಕಲ್ಪಾಂತಕಾಲಗಳಲ್ಲೂ ಕೂಡ, ನಿಧನಂ ನಾಶವನ್ನು, ನಪ್ರಯಾತಿ-ಹೊಂದುವದಿಲ್ಲ. ತತ್-ಪ್ರಸಿದ್ಧವಾದ, ವಿದ್ಯಾಖ್ಯಂ-ವಿದ್ಯಾರೂಪವಾದ, ಅಂತರ್ಧನಂ- ಗುಪ್ತವಾದ ಧನವು, ಯೇಷಾಂ-ಯಾರುಗಳಿಗೆ, ಅಸ್ತಿ-ಇದೆಯೋ, ತಾನ್ಪ್ರತಿ- ಅಂಥಾ ವಿದ್ವಾಂಸರನ್ನು ಕುರಿತು, ಹೇನೃಪಾಃ - ಎಲೈ ದೊರೆಗಳಿರಾ, ಮಾನಂ- ದುರಾಗ್ರಹವನ್ನು, ಉಜ್ಝತ-ಬಿಡುವಂಥಾವರಾಗಿರಿ, ತೈಸ್ಸಹ- ಅಂಥಾ ವಿದ್ವಾಂಸರೊಡನೆ, ಕಃ-ಯಾವ ಮನುಷ್ಯನು, ಸ್ಪರ್ಧತೇ- ಸ್ಪರ್ಧೆಮಾಡುತ್ತಾನೆ? ಅವರನ್ನು ನಿಗ್ರಹಿಸುತ್ತಾನೆ? (ಶಾರ್ದೂಲವಿಕ್ರೀಡಿತವೃತ್ತ.) ||೧೩||

ತಾತ್ಪರ್ಯ|| ವಿದ್ಯವೆಂಬ ಧನವು ಬಹಳ ದೊಡ್ಡದೆಂಬುವ ವಿಷಯವನ್ನು ಹೇಳುತ್ತಾನೆ. ವಿದ್ಯಾಧನವು ಕಳ್ಳರಿಗೆ ಕದಿಯುವದಕ್ಕೆ ಸಿಕ್ಕುವದಿಲ್ಲ. ಅಪೇಕ್ಷಿಸುವವರಿಗೆ ಕೊಡೋಣದರಿಂದ ಮತ್ತು ವೃದ್ಧಿಯಾಗುವದು. ಇಂಥಾ ವಿದ್ವಾಂಸರನ್ನು ನೋಡಿ ರಾಜರು ಬಹುಮಾನವನ್ನು ಮಾಡದೆ ಹೋದರೆ ಮತ್ತಾರು ಅವರ ಸಂಗಡ ವಿಚಾರಮಾಡುವರು? (ಎಂದರೆ ವಿದ್ವಾಂಸರುಗಳಿಗೆ ರಾಜರು ಗೌರವವನ್ನು, ಬಹುಮಾನವನ್ನೂ ಮಾಡಬೇಕೆಂದು ಭಾವವು.) ||೧೩||

ಶ್ಲೋ|| ಅಧಿಗತಪರಮಾರ್ಥಾನ್ ಪಂಡಿತಾನ್ಮಾವಮಂಸ್ಥಾ
ಸ್ತೃಣಮಿವ ಲಘುಲಕ್ಷ್ಮೀರ್ನೈವತಾನ್ಸಂರುಣದ್ಧಿ ||
ಅಭಿನವಮದರೇಖಾಶ್ಯಾಮ ಗಂಡಸ್ಥಲಾನಾಂ ನಭವತಿ
ಬಿಸತಂತುರ್ವಾರಣಂ ವಾರಣಾನಾಂ ||೧೪||

ಟೀಕಾ|| ಹೇ ನೃಪ-ಎಲೈ ರಾಜನೆ, ಅಧಿಗತಪರಮಾರ್ಥಾನ್ - ಅಧಿಗತ-ತಿಳಿಯಲ್ಪಟ್ಟ. ಪರಮಾರ್ಥಾಃ-ತತ್ವಾರ್ಥವುಳ್ಳಂಥ; ಪಂಡಿತಾನ್-ವಿದ್ವಾಂ

ತರನ್ನು, ಮಾವಮಂಸ್ಥಾಃ- ಅವಮಾನವನ್ನು ಮಾಡುವಂಥಾವನಾಗಬೇಡ, ಲಕ್ಷ್ಮೀಃ-ಐಶ್ವರ್ಯವು. ತೃಣಮಿವ-ಹುಲ್ಲಿನೋಪಾದಿಯಲ್ಲಿ, ಲಘು-ಸೂಕ್ಷ್ಮವಾದಂಥಾದ್ದು, ತಾಃ- ಅಂಥಾ ಪಂಡಿತರನ್ನು, ( ಸಾ- ಆ ಲಕ್ಷ್ಮಿಯು, ) ನೈವ ಸಂರುಣದ್ಧಿ- ಅಡ್ಡಿ ಮಾಡುವುದಿಲ್ಲ. ಅಭಿನವಮದರೇಖಾಶ್ಯಾಮ-ಗಂಡಸ್ಥಲಾನಾಂ- ಅಭಿನವ- ನೂತನವಾದ, ಮದ- ಮದೋದಕದ, ರೇಖಾ-ಪಙ್ಕ್ತಿಗಳಿಂದಿ, ಶ್ಯಾಮ - ಕಪ್ಪಾದ, ಗಂಡಸ್ಥಲಾನಾಂ - ಕಪೋಲಭಾಗವುಳ್ಳ, ವಾರಣಾನಾಂ- ಆನೆಗಳಿಗೆ, ಬಿಸತಂತುಃ - ಬಿಸ - ತಾವರೆದಂಟಿನ, ತಂತುಃ - ದಾರವು. ವಾರಣಂ-ಅಡ್ಡಿಯಾದಂಥ ದ್ದು, ನಭವತಿ- ಆಗುವದಿಲ್ಲ. (ದೃಷ್ಟಾಂತಾಲಂಕಾರಃ, ಮಾಲಿನೀವೃತ್ತ.) ||೧೭||

ತಾತ್ಪರ್ಯ—ಪಂಡಿತರನ್ನು ಬಹುಮಾನದಿಂದ ರಾಜರು ನೋಡಬೇಕೆಂಬ ವಿಷಯವನ್ನು ಈ ಶ್ಲೋಕದಲ್ಲಿಯೋ ಹೇಳುತ್ತಾನೆ. ಐಶ್ವರ್ಯವು ಶಾಶ್ವತವಾದಂಥಾದ್ದಲ್ಲ. ಇಂಥಾ ಚಂಚಲವಾದ ಐಶ್ವರ್ಯವನ್ನು ನಂಬಿ ಪಂಡಿತರನ್ನು ಅವಮಾನಪಡಿಸಬೇಡ. ಈ ಐಶ್ವರ್ಯವು ಒಂದಾನೊಂದು ಕಾಲದಲ್ಲಿ ಪಂಡಿತರನ್ನು ಅಡ್ಡಿಮಾಡಲಾರದು. ಅಂದರೆ ಪಂಡಿತರು ರಾಜನ ಐಶ್ವರ್ಯವನ್ನು ಗಣನೆಮಾಡುವದಿಲ್ಲವೆಂಬ ತಾತ್ಪರ್ಯವು.

ಶ್ಲೋ|| ಅಂಭೋಜಿನೀ ವನವಿಹಾರ ವಿಲಾಸಮೇವ ಹಂಸಸ್ಯ
ಹಂತಿ ನಿತರಾಂ ಕುಪಿತೋ ವಿಧಾತ್ರಾ || ನತ್ವಸ್ಯ ದು
ಗ್ಧಜಲಭೇದ ವಿಧೌ ಪ್ರಸಿದ್ಧಾಂ ವೈದಗ್ಧ್ಯ ಕೀರ್ತಿ
ಮಪಹರ್ತುಮಸೌ ಸಮರ್ಥಃ ||೧೮||

ಟೀಕು|| ವಿಧಾತಾ - ಬ್ರಹ್ಮನು, ಕೇನಚಿದ್ಧೇತುನಾ - ಒಂದಾನೊಂದು ಕಾರಣದಿಂದ, ಕುಪಿತಸ್ಸನ್- ಕೋಪಿಷ್ಠನಾದಂಥಾವನಾಗಿ, ಹಂಸಸ್ಯ - ತನಗೆ ವಾಹನಭೂತವಾದ ಹಂಸಪಕ್ಷಿಗೆ, ಅಂಭೋಜಿನೀ ವನವಿಹಾರವಿಲಾಸಮೇವ- ಅಂಭೋಜಿನೀ-ಕಮಲುಗಳುಳ್ಳಂಥ, ವನ- ಉದಕದಲ್ಲಿ, ವಿಹಾರ-ಕ್ರೀಡೆಯು, ವಿಲಾಸಮೇವ - ವ್ಯಾಪಾರವನ್ನೇ, ಅಪಹರ್ತುಂ ಹೋಗಲಾಡಿಸುವುದಕ್ಕೆ, ಸಮರ್ಥಃ ಸಮರ್ಥನು. ಕಿಂತು- ಮತ್ತೇನಂದರೆ, ಅಸೌ- ಈ ಬ್ರಹ್ಮನು, ನಿತರಾಂ- ಅತ್ಯಂತವಾಗಿ; ಅಸ್ಯ-ಈ ಹಂಸಪಕ್ಷಿಯು, ದುಗ್ಧಜಲಭೇದವಿಧೌ- ದುಗ್ಧ-ಕ್ಷೀರವು, ಜಲ-ಉದಕವು ಇವುಗಳ, ಭೇದ-ವಿಭಾಗದ, ವಿಧೌ-ವ್ಯಾಪಾರದಲ್ಲಿ, ಪ್ರಸಿದ್ಧಾಂ - ಪ್ರಸಿದ್ಧಿಯಾದಂಥ, ವೈದಗ್ಧ್ಯಕೀರ್ತಿಂ ವೈದಗ್ಧ್ಯನೈಪುಣ್ಯದಿಂದುಂಟಾದಂಥ, ಕೀರ್ತಿಂ- ಕೀರ್ತಿಯನ್ನು, ಅಪಹರ್ತುಂ ಹೋ

ಲಾಡಿಸುವುದಕ್ಕೋಸ್ಕರ, ನನವುರ್ಥನು ಸವುರ್ಥನಾಗುವದಿಲ್ಲ. (ಅಪ್ರಸ್ತುತಪ್ರಶಂಸಾಲಂಕಾರಃ ॥ ವಸಂತತಿಲಕಾವೃತ್ತಂ) ॥೧೫॥

ತಾತ್ಪರ್ಯ—ಈ ಶ್ಲೋಕದಲ್ಲಿ ವಿದ್ವಾಂಸರನ್ನು ರಾಜನು ಬಹುಮಾನದಿಂದ ಕಾಪಾಡಿಕೊಂಡು ಬರಬೇಕೆಂಬುವದನ್ನು ಹೇಳುತ್ತಾನೆ. ಹೇಗೆಂದರೆ—ಬ್ರಹ್ಮದೇವರು ಒಂದಾನೊಂದು ಕಾರಣದಿಂದ ಹಂಸಪಕ್ಷಿಯ ಮೇಲೆ ಕೋಪಮಾಡಿಕೊಂಡು ಹಂಸಪಕ್ಷಿಯು ಸುಖವಿಹಾರ ಮಾಡುವ ಕಮಲಸರೋವರಗಳನ್ನು ಹೆಚ್ಚಾಗಿ ನಾಶಪಡಿಸಬಲ್ಲನು. ಅಂದರೆ ಸರೋವರದ ರಾಮಣೀಯಕತ್ವವನ್ನು ಕೆಡಿಸಬಲ್ಲನು. ಹಂಸಪಕ್ಷಿಯಲ್ಲಿರುವ ನೀರಕ್ಷೀರವಿಭಾಗ ವಿದ್ಯಾವೈದಗ್ಧ್ಯದಿಂದುಂಟಾದ ಕೀರ್ತಿಯನ್ನು ನಾಶಮಾಡಲಾರನು. ಹಾಗೆಯೆ ರಾಜನು ಕೋಪಿಷ್ಠನಾದರೆ ತನ್ನ ದೇಶದಿಂದ ಆಚೆಗೆ ಹೊರಡಿಸಬಲ್ಲನೇ ಹೊರತು ವಿದ್ವಾಂಸರ ವಿದ್ಯಾನೈಪುಣ್ಯದಿಂದುಂಟಾದ ಕೀರ್ತಿಯನ್ನು ಹೋಗಲಾಡಿಸಲಾರನು. ಅಂದರೆ ವಿದ್ಯಾವಂತರಾದ ಪಂಡಿತರನ್ನು ದೊರೆಗಳು ಅವರನ್ನು ಬಹುಮಾನದಿಂದ ಇಟ್ಟುಕೊಂಡು ಬರಬೇಕೆಂಬುವ ಭಾವವು. ॥೧೮॥

ಶ್ಲೋ॥ ಕೇಯೂರಾಣಿ ನ ಭೂಷಯಂತಿ ಪುರುಷಂ ಹಾರಾನ
ಚಂದ್ರೋಜ್ವಲಾ ನ ಸ್ನಾನಂ ನ ವಿಲೇಪನಂ ನ ಕು
ಸುಮಂ ನಾಲಂಕೃತಾ ಮೂರ್ಧಜಾಃ ॥ ವಾಣ್ಯೇಕಾ
ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾಧಾ
ರ್ಯತೇ ಕ್ಷೀಯಂತೇಖಿಲಭೂಷಣಾನಿ ಸತತಂ ವಾಗ್ಭೂ
ಷಣಂ ಭೂಷಣಂ ॥೧೯॥

ಟೀಕಾ॥ ಪುರುಷಂ-ಮನುಷ್ಯನನ್ನು, ಕೇಯೂರಾಣಿ-ಭುಜಕೀರ್ತಿಗಳು, ನಭೂಷಯಂತಿ-ಅಲಂಕಾರ ಮಾಡುವದಿಲ್ಲ, ಚಂದ್ರೋಜ್ವಲಾಃ-ಚಂದ್ರನೋಪಾದಿಯಲ್ಲಿ ಪ್ರಕಾಶಿಸುವ, ಹಾರಾಃ - ಮುಕ್ತಾಹಾರಗಳು, ನಭೂಷಯಂತಿ-ಅಲಂಕರಿಸುವದಿಲ್ಲ, ಸ್ನಾನಂ - ಅಭಿಷೇಕವು, ನಭೂಷಯಂತಿ - ಅಲಂಕರಿಸುವದಿಲ್ಲ, ವಿಲೇಪನಂ- ಕಸ್ತೂರ್ಯಾದಿ ಗಂಧಲೇಪನವು, ನಭೂಷಯಂತಿ-ಅಲಂಕರಿಸುವದಿಲ್ಲ, ಕುಸುಮಂ ಪುಷ್ಪವು, ನಭೂಷಯಂತಿ-ಅಲಂಕರಿಸುವುದಿಲ್ಲ, ಅಲಂಕೃತಾಃ-ಅಲಂಕಾರ ಮಾಡಲ್ಪಟ್ಟ, ಮೂರ್ಧಜಾಃ ಕೇಶಗಳು, ನಭೂಷಯಂತಿ

ಅಲಂಕರಿಸುವದಿಲ್ಲ, ಸಂಸ್ಕೃತಾ- ಸಂಸ್ಕಾರವಾದ, ಯಾ- ಯಾವ, ವಾಣೀ- ವಾಕ್ಯ, ಧಾರ್ಯತೇ - ಧರಿಸಲ್ಪಡುತ್ತದೋ, ಸಾ ಆ ಪ್ರಸಿದ್ಧವಾದ, ಏಕಾ- ಮುಖ್ಯವಾದ, (ವಾಣೀ-ವಾಕ್ಯ,) ಪುರುಷಂ - ಮನುಷ್ಯನನ್ನು, ಸಮಲಂಕರೋತಿ - ಚೆನ್ನಾಗಿ ಅಲಂಕರಿಸುತ್ತದೆ, ಅಖಿಲಭೂಷಣಾನಿ, ಅಖಿಲ ಸಮಸ್ತವಾದ, ಭೂಷಣಾನಿ- ಆಭರಣಗಳು, ಕ್ಷೀಯಂತೇ- ನಾಶವಾಗುತ್ತವೆ, ಸತತಂ- ಯಾವಾಗಲೂ, ವಾಗ್ಭೂಷಣಂ- ವಾಗ್ರೂಪವಾದ ಒಡವೆಯೇ, ಭೂಷಣಂ- ಆಭರಣವು. ವ್ಯತಿರೇಕಾಲಂಕಾರಃ || ಶಾರ್ದೂಲವಿಕ್ರೀಡಿತವೃತ್ತಂ ||೧೬||

ತಾತ್ಪರ್ಯ:- ವಿದ್ಯೆಯು ಮನುಷ್ಯನಿಗೆ ಅಲಂಕಾರವಾಗಿರುತ್ತೆ ಎಂಬುವದನ್ನು ಹೇಳುತ್ತಾನೆ. ಮನುಷ್ಯನು ಮಾಡಿಕೊಳ್ಳುವ ಕಂಠಾಭರಣ ಮುಂತಾದುವು ಅಲಂಕಾರಗಳಾಗುವದಿಲ್ಲ. ಯಾವ ಮನುಷ್ಯನು ಸಂಸ್ಕೃತ ವಾಣಿಯನ್ನು ಧರಿಸಿಕೊಂಡು ಇರುತ್ತಾನೋ ಅಂಥಾ ಮನುಷ್ಯನ ಮಾತೇ ಭೂಷಣವಾಗಿರುತ್ತೆಂದು ಭಾವವು. ||೧೬||

ಶ್ಲೋ|| ವಿದ್ಯಾನಾಮನರಸ್ಯರೂಪಮಧಿಕಂ ಪ್ರಚ್ಛನ್ನಗುಪ್ತಂ
ಧನಂ ವಿದ್ಯಾಭೋಗಕರೀ ಯಶಸ್ಸುಖಕರೀ ವಿದ್ಯಾ
ಗುರೂಣಾಂಗುರುಃ | ವಿದ್ಯಾಬಂಧುಜನೋ ವಿದೇಶ
ಗಮನೇ ವಿದ್ಯಾಪರಾದೇವತಾ ವಿದ್ಯಾರಾಜಸುಪೂಜ್ಯ
ತೇ ನಹಿಧನಂ ವಿದ್ಯಾವಿಹೀನಃ ಪಶುಃ ||೧೭||

ಟೀಕು|| ನರಸ್ಯ-ಮನುಷ್ಯನಿಗೆ, ವಿದ್ಯಾನಾಮ-ವಿದ್ಯವೆಂಬುವಂಥಾದ್ದು, ಅಧಿಕಂ- ಹೆಚ್ಚಾದ, ರೂಪಂ - ಕಟಕಾದ್ಯಾಭರಣವು, ಭವತಿ ಆಗುತ್ತದೆ, ಪ್ರಚ್ಛನ್ನಗುಪ್ತಂಧನಂ-ಪ್ರಚ್ಛನ್ನ- ರಹಸ್ಯವಾಗಿ, ಗುಪ್ತಂ-ಸಂರಕ್ಷಣೆ ಮಾಡಲ್ಪಟ್ಟ, ಧನಂ-ದ್ರವ್ಯವು, ಭವತಿ-ಆಗುತ್ತದೆ. ವಿದ್ಯಾ-ವಿದ್ಯೆಯು, ಭೋಗಕರೀ ಭೋಗ ಭೋಗವನ್ನು, ಕರೀ - ಉಂಟುಮಾಡುವಂಥಾದ್ದಾಗುತ್ತದೆ. ಕಿಂಚ- ಇಷ್ಟುಮಾತ್ರವೇ ಅಲ್ಲ, ಯಶಸ್ಸುಖಕರೀ- ಯಶಃ- ಕೀರ್ತಿಯೇನು, ಸುಖ- ಸೌಖ್ಯವೇನು, ಇವುಗಳನ್ನು ಕರೀ - ಉಂಟುಮಾಡುವಂಥಾದ್ದಾಗುತ್ತದೆ. ವಿದ್ಯಾ-ವಿದ್ಯೆಯು ಗುರೂಣಾಂ-ಗುರುಗಳಿಗೆ, ಗುರುಃ- ಶ್ರೇಷ್ಠವಾದದ್ದು ಅಥವಾ ಉಪದೇಶಗಮ್ಯವಾದದ್ದು. ವಿದ್ಯಾ- ವಿದ್ಯೆಯು, ವಿದೇಶಗಮನೇ- ಸಂಚಾರದಲ್ಲಿ, ಬಂಧುಜನಃ-ಸ್ನೇಹಜನವು (ಬಂಧುಜನವು) ಭವತಿ-ಆಗುತ್ತದೆ ವಿದ್ಯಾ- ವಿದ್ಯೆಯು, ಪರಾದೇವತಾ- ಪರಾ-ಉತ್ಕೃಷ್ಟವಾದ, ದೇವತಾ- ದೇವರು, ಭವತಿ ಆಗುತ್ತದೆ ವಿದ್ಯಾ- ವಿದ್ಯೆಯು, ರಾಜಸು ದೊರೆಗಳಮಧ್ಯ

ದಲ್ಲಿ, ಪೂಜ್ಯತೇ-ಪೂಜಿಸಲ್ಪಡುತ್ತದೆ ಧನಂತು-ದ್ರವ್ಯವಾದರೋ, ನಹಿಭವ
ತಿ - ಉತ್ಕೃಷ್ಟಪ್ರಕಾರವಾಗುವದಿಲ್ಲ, ತಸ್ಮಾತ್-ಆಕಾರಣದ ದೆಸೆಯಿಂದ, ವಿದ್ಯಾ
ವಿಹೀನಃ-ವಿದ್ಯಾಶೂನ್ಯನಾದ ಮನುಷ್ಯನು, ಪಶುಃ-ಪಶುವಿಗೆ ಸಮಾನನಾದಂ
ಥಾವನು, ಭವತಿ - ಆಗುತ್ತಾನೆ. ( ಸಾವಯವಮಾಲಾರೂಪಕಾಲಂಕಾರಃ ||
ಶಾರ್ದೂಲವಿಕ್ರೀಡಿತವೃತ್ತಂ ) ||೧೭||

ತಾತ್ಪರ್ಯ — ವಿದ್ಯೆಯು ಧನಕ್ಕಿಂತಲೂ ಅತ್ಯುತ್ತಮವಾದದ್ದೆಂಬು
ದನ್ನು ಹೇಳುತ್ತಾನೆ. ವಿದ್ಯೆಯು ಮನುಷ್ಯನಿಗೆ ಅಲಂಕಾರಸ್ವರೂಪವಾ
ಗಿರುವದಲ್ಲದೆ ದೇಶಾಂತರದಲ್ಲಿಯೂ ಕೂಡ ಬಂಧುಜನರೋಪಾದಿಯಲ್ಲಿ ಸಂ
ರಕ್ಷಿಸುತ್ತದೆ ಇದು ಮನುಷ್ಯನಿಗೆ ಗೋಪ್ಯವಾದ ಧನವು. ರಾಜಸಭಾ
ದಲ್ಲಿ ಬಹುಮಾನವನ್ನುಂಟುಮಾಡುತ್ತದೆ. ಇದು ಗುರುಗಳಿಗೆಲ್ಲಾ ಗುರು
ವಾದದ್ದು. ವಿದ್ಯೆಯಿಲ್ಲದ ಮನುಷ್ಯನು ಪಶುಸಮಾನವಾಗಿ ಭಾವಿಸಲ್ಪಡು
ವದಕ್ಕೆ ಯೋಗ್ಯನಾಗುತ್ತಾನೆ. ||೧೭||

ಶ್ಲೋ|| ಕ್ಷಾಂತಿಶ್ಚೇತ್ಕವಚೇನ ಕಿಂ ಕಿಮರಿಭಿಃ ಕ್ರೋಧೋ
ಸ್ತಿಚೇದ್ದೇಹಿನಾಂ | ಜ್ಞಾತಿಶ್ಚೇದನಲೇನ ಕಿಂ ಯ
ದಿ ಸುಹೃದ್ದಿವ್ಯೌಷಧೈಃ ಕಿಂ ಫಲಂ || ಕಿಂ ಸರ್ಪೈ
ರ್ಯದಿ ದುರ್ಜನಾಃ ಕಿಮು ಧನೈರ್ವಿದ್ಯಾನವದ್ಯಾ
ಯದಿ ವ್ರೀಡಾಚೇತ್ಕಿಮುಭೂಷಣೈಃ ಸುಕವಿತಾ ಯ
ದ್ಯಸ್ತಿ ರಾಜ್ಯೇನ ಕಿಂ || ೧೮ ||

ಟೀಕಾ|| ದೇಹಿನಾಂ- ಮನುಷ್ಯರಿಗೆ ಕ್ಷಾಂತಿಶ್ಚೇತ್- ಕ್ಷಮಾಗುಣವಿರು
ವಂಥಾದ್ದಾದರೆ, ಕವಚೇನ- ಕವಚದಿಂದ, ಕಿಂ- ಏನು ಪ್ರಯೋಜನವು, ದೇಹಿ
ನಾಂ- ಮನುಷ್ಯರಿಗೆ, ಕ್ರೋಧಃ-ಕೋಪವು, ಅಸ್ತಿಚೇತ್- ಇರುವಂಥಾದ್ದಾದರೆ,
ಅರಿಭಿಃ-ಶತ್ರುಗಳಿಂದ, ಕಿಂ-ಏನು ಪ್ರಯೋಜನವು ? ಜ್ಞಾತಿಃ-ದಾಯಾದಿಯು
ಚೇತ್-ಇರುವಂಥಾವನಾದರೆ, ಅನಲೇನ-ಅಗ್ನಿಯಿಂದ, ಕಿಂ- ಏನು ಪ್ರಯೋ
ಜನ, ಸುಹೃತ್- ಸ್ನೇಹಿತನು, ಅಸ್ತಿಯದಿ- ಇರುವಂಥಾವನಾದರೆ, ದಿವ್ಯೌಷ
ಧೈಃ- ಸಿದ್ಧೌಷಧಗಳಿಂದ, ಕಿಂಫಲಂ- ಏನು ಪ್ರಯೋಜನವು ? ದುರ್ಜನಾಃ-
ದುಷ್ಟಜನರು, ಸಂತಿಯದಿ- ಇರುವಂಥಾವರಾದರೆ, ಸರ್ಪೈಃ- ಸರ್ಪಗಳಿಂದ
ಕಿಂ- ಏನು ಪ್ರಯೋಜನ ? ವಿದ್ಯಾ-ವಿದ್ಯೆಯು, ಅನವದ್ಯಾಯದಿ- ನಿರ್ದುಷ್ಟ
ವಾದದ್ದಾಗಿದ್ದರೆ. ಧನೈಃ- ದ್ರವ್ಯದಿಂದ, ಕಿಂ- ಏನು ಪ್ರಯೋಜನ. ವ್ರೀಡಾ

ಲಜ್ಜೆಯು, ಚೇತ್ - ಇರುವಂಥಾದ್ದಾದರೆ, ಭೂಷಣ್ಯೈಃ - ಆಭರಣಗಳಿಂದ, ಕಿಂ ಏನು ಪ್ರಯೋಜನ ? ಸುಕವಿತಾ - ಸು - ಸಮೀಚೀನವಾದ, ಕವಿತಾ-ಕವಿತ್ವವು, ಅಸ್ತಿಚೇತ್-ಇರುವಂಥಾದ್ದಾದರೆ, ರಾಜ್ಯೇನ ರಾಜ್ಯದಿಂದ, ಕಿಂ-ಏನು ಪ್ರಯೋಜನ ಅಕ್ಷೇಪಾಲಂಕಾರಃ ॥ ೧೮ ॥

ತಾತ್ಪರ್ಯ—ಲೋಕಹಿತಾಹಿತ ಪ್ರಸಂಗ ಸಂಗತಿಯಿಂದ ವಿದ್ಯೆಯು ಸರ್ವೋತ್ಕೃಷ್ಟವೆಂದು ಹೇಳುತ್ತಾನೆ. ಮನುಷ್ಯರಿಗೆ ಕ್ಷಮಾಗುಣವು ಕವಚದಹಾಗೆ ಶರೀರಸಂರಕ್ಷಣೆಯನ್ನು ಮಾಡುತ್ತದೆ. ಕೋಪವಿರುವದಾದರೆ ಶತ್ರುಗಳೋಪಾದಿಯಲ್ಲಿ ಕೆಟ್ಟದ್ದನ್ನು ಮಾಡುತ್ತದೆ ಜ್ಞಾತಿ ಇರುವನಾದರೆ ಅಗ್ನಿಯಂತೆ ಪರಿತಾಪವನ್ನುಂಟುಮಾಡುತ್ತಾನೆ. ಸ್ನೇಹಿತನು ಇರುವದಾದರೆ ಸಿದ್ಧೌಷಧಗಳಂತೆ ಒಳ್ಳೆಯದನ್ನು ಮಾಡುತ್ತಾನೆ. ದುರ್ಜನರು ಇದ್ದರೆ ಸರ್ಪಗಳಂತೆ ಮತ್ಸರಿಸುತ್ತಾರೆ. ವಿದ್ಯಾ ಅಂದರೆ ಶಾಸ್ತ್ರ, ಅಲಂಕಾರಾದಿ ವಿದ್ಯೆಗಳು ನಯನೀತಿಗಳಿಂದ ಕೂಡಿದ್ದರೆ ಧನವನ್ನು ಕೊಡುವಂಥಾದ್ದಾಗುತ್ತದೆ. ದುಷ್ಟಕಾರ್ಯ ಮಾಡಬಾರದೆಂಬ ಲಜ್ಜೆಯಲ್ಲಿ ಇರುವದಾದರೆ ಆಭರಣದೋಪಾದಿಯಲ್ಲಿ ಅಲಂಕರಿಸುತ್ತದೆ. ಒಳ್ಳೆಯ ಕವಿತ್ವವಂದರೆ ಶಬ್ದಾಲಂಕಾರ, ಅರ್ಥಾಲಂಕಾರ ರಸಗುಂಭಿತವಾದ ಪದಪ್ರಯೋಗಗಳುಳ್ಳ ಕವಿತ್ವವಾಡುವಂಥಾವನಾದರೆ, ರಾಜಭೋಗ ವುಂಟಾಗುತ್ತದೆ. (ಮನುಷ್ಯರಿಗೆ ಎಂಬುವದನ್ನ ಸರ್ವತ್ರ ಸೇರಿಸಿಕೊಳ್ಳಬೇಕು)

ಶ್ಲೋ॥ ದಾಕ್ಷಿಣ್ಯಂ ಸ್ವಜನೇ ದಯಾ ಪರಜನೇ ಶಾಠ್ಯಂ ಸದಾ
ದುರ್ಜನೇ ಪ್ರೀತಿಸ್ಸಾಧುಜನೇ ನಯೋ ನೃಪಜನೇ
ವಿದ್ವಜ್ಜನೇ ಚಾರ್ಜವಂ । ಶೌರ್ಯಂ ಶತ್ರುಜನೆ ಕ್ಷಮಾ
ಗುರುಜನೆ ಕಾಂತಾಜನೇ ಧೃಷ್ಟತಾ ಯೇಚೈವಂ
ಪುರುಷಾಃ ಕಲಾ ಸುಕುಶಲಾಸ್ತೇಷ್ವೇವಲೋಕಸ್ಥಿತಿಃ

ಟೀಕು ॥ ಸ್ವಜನೇ - ಬಂಧುಜನವಲ್ಲಿ, ದಾಕ್ಷಿಣ್ಯಂ - ಛಂದಾನುವರ್ತನೆಯು, ಪರಜನೇ- ಅನ್ಯರಲ್ಲಿ, ದಯಾ - ಕೃಪೆಯು, ದುರ್ಜನೇ - ದುಷ್ಟಜನಗಳಲ್ಲಿ, ಸದಾ - ನಿರಂತರದಲ್ಲೂ, ಶೌರ್ಯಂ - ಪರಾಕ್ರಮವು, ಸಾಧುಜನೇ- ಸತ್ಪುರುಷರಲ್ಲಿ ಪ್ರೀತಿಃ- ವಿಶ್ವಾಸವು, ನೃಪಜನೇ ರಾಜರಲ್ಲಿ, ನಯಃ- ನೀತಿಯು, ವಿದ್ವಜ್ಜನೆ- ವಿದ್ವಾಂಸರಲ್ಲಿ, ಆರ್ಜವಂಚ ವಿಧೇಯತ್ವವೂ ಕೂಡ

ಶತ್ರುಜನೇ- ಶತ್ರುಜನವಲ್ಲಿ, ಶೌರ್ಯಂ- ಪ್ರತಾಪವು. ಗುರುಜನೇ- ಪಿತ್ರಾದಿ ಗುರುಜನಗಳಲ್ಲಿ, ಕ್ಷಮಾ - ಶಾಂತಿಯು, ಕಾಂತಾಜನೇ - ಸ್ತ್ರೀಜನದಲ್ಲಿ, ಧೃಷ್ಟತಾ- ಪ್ರಾಗಲ್ಭ್ಯವು, ಅಥವಾ (ಚತುರ್ಯವು) ಏವಂ- ಈ ಪ್ರಕಾರವಾಗಿ, ಯೇ- ಯಾವ, ಪುರುಷಾಃ- ಮನುಷ್ಯರು, ಕಳಾಸು- ವಿದ್ಯಾಶಿಲ್ಪಾದಿ ಕಳೆಗಳಲ್ಲಿ, ಕುಶಲಾಃ- ಬುದ್ಧಿಶಾಲಿಗಳಾಗಿರುತ್ತಾರೊ, ತೇಷ್ವೇವ- ಅವರುಗಳಲ್ಲಿಯೆ, ಲೋಕಸ್ಥಿತಿಃ ಲೋಕ- ಪ್ರಪಂಚದ, ಸ್ಥಿತಿಃ- ಮರ್ಯಾದೆಯು, ಅಸ್ತಿ- ಇದೆ. ಸ್ವಭಾವೋಕ್ತ್ಯಲಂಕಾರ. ||೧೯||

ತಾತ್ಪರ್ಯ—ಮನುಷ್ಯರು ಸ್ವಜನರಲ್ಲಿ ದಾಕ್ಷಿಣ್ಯವು, ಪರಜನದಲ್ಲಿ ದಯೆಯು, ದುರ್ಜನರಲ್ಲಿ ಶೌರ್ಯವು, ಸಾಧುಜನಗಳಲ್ಲಿ ವಿಶ್ವಾಸವು, ರಾಜರಲ್ಲಿ ನೀತಿಯೂ, ವಿದ್ವಾಂಸರಲ್ಲಿ ವಿನಯವೂ, ಶತ್ರುಜನಗಳಲ್ಲಿ ಶೌರ್ಯವೂ, ಗುರುಜನದಲ್ಲಿ ಕ್ಷಮೆಯೂ, ಸ್ತ್ರೀಜನದಲ್ಲಿ ಚಾತುರ್ಯವೂ ಇವುಗಳುಳ್ಳವರಾಗಿ ಇರುತ್ತಾರೋ ಅಂಥವರಲ್ಲಿಯೇ ಲೋಕಮರ್ಯಾದೆಯು ಇರುತ್ತದೆ. ಅಂದರೆ ವಿದ್ವಾಂಸರು ಸರ್ವಕಲಾಕುಶಲರಾದ್ದರಿಂದ ಈ ಗುಣಗಳೆಲ್ಲವೂ ಅವರಲ್ಲಿ ನೆರೆಗೊಂಡಿರುತ್ತವೆಂದು ಭಾವವು. (ಸಮುಚ್ಚಯಾಲಂಕಾರಃ) ||೧೯||

ಶ್ಲೋ|| ಜಾಡ್ಯಂ ಧಿಯೋಹರತಿ ಸಿಂಚತಿವಾಚಿ ಸತ್ಯಂ ಮಾ
ನೋನ್ನತಿಂ ದಿಶತಿ ಪಾಪಮಪಾ ಕರೋತಿ || ಚೇತಃ
ಪ್ರಸಾದಯತಿ ದಿಕ್ಷುತನೋತಿ ಕೀರ್ತಿಂ ಸತ್ಸಂಗತಿಃ
ಕಥಯ ಕಿಂ ನ ಕರೋತಿ ಪುಂಸಾಂ || ೨೦ ||

ಟೀಕು|| ಸತ್ಸಂಗತಿಃ-ಸತ್-ಸಮೀಚೀನವಾದಂಥ, ಸಂಗತಿಃ-ಸ್ನೇಹವು (ಅಥವಾ ಸಜ್ಜನಸಹವಾಸವು) ಧಿಯಃ- ಬುದ್ಧಿಯ, ಜಾಡ್ಯಂ- ಜಡತ್ವವನ್ನು, ಹರತಿ- ಹೋಗಲಾಡಿಸುತ್ತದೆ. ವಾಚಿ- ವಾಕ್ಕಿನಲ್ಲಿ, ಸತ್ಯಂ- ಸತ್ಯವನ್ನು, ಸಿಂಚತಿ - ಉಂಟುಮಾಡುತ್ತದೆ. ಮಾನೋನ್ನತಿಂ - ಮಾನ - ಗೌರವದ, ಉನ್ನತಿಂ- ಅತಿಶಯವನ್ನು, ದಿಶತಿ ಉಂಟುಮಾಡುತ್ತದೆ. ಪಾಪಂ-ಪಾಪವನ್ನು. ಅಪಾಕರೋತಿ- ನಾಶಮಾಡುತ್ತದೆ ಚೇತಃ- ಮನಸ್ಸನ್ನು, ಪ್ರಸಾದಯತಿ- ನಿರ್ಮಲವಮಾಡುತ್ತದೆ. ದಿಕ್ಷು- ದಿಕ್ಕುಗಳಲ್ಲಿ, ಕೀರ್ತಿಂ - ಯಶಸ್ಸನ್ನು, ತನೋತಿ- ಉಂಟುಮಾಡುತ್ತದೆ. ಪುಂಸಾಂ ಮನುಷ್ಯರಿಗೆ, ಕಿಂ-

ಏನನ್ನು, ನಕರೋತಿ- ಮಾಡುವದಿಲ್ಲ ? ಕಥಯ - ಹೇಳು. ॥ ಸಮುಚ್ಚಯಾಲಂಕಾರಃ ॥ ವಸಂತತಿಲಕಾವೃತ್ತಂ ॥ ॥ ೨೦ ॥

ತಾತ್ಪರ್ಯ— ~~ವಿದ್ವಾಂಸರ ಸಮಾಗಮವು ಅತ್ಯಂತ ಶ್ರೇಯಸ್ಕರವಾದದ್ದೆಂದು ಹೇಳುತ್ತಾನೆ.~~ ವಿದ್ವಾಂಸರ ಸಂಗವು ಅತ್ಯಂತ ಶ್ರೇಯಸ್ಕರವಾದದ್ದೆಂದು ಹೇಳುತ್ತಾನೆ. ವಿದ್ವಾಂಸರ ಸಂಗವು ಮನುಷ್ಯರಿಗೆ ಯಾವ ಯಾವ ಕಾರ್ಯಗಳನ್ನು ತಾನೇ ಮಾಡಿಕೊಡುವದಿಲ್ಲ. ಅಂದರೆ ಹಿಂದೆ ಹೇಳಿದ ಸತ್ಸಂಗತ್ವವು ಮನುಷ್ಯನ ಬುದ್ಧಿಯನ್ನು ನಿರ್ಮಲವಾಗಿ ಮಾಡಿ, ಮಾತಿನಲ್ಲಿ ಅನೃತವನ್ನು ಆಡದಂತೆ ಮಾಡುವದಲ್ಲದೆ ಹೆಚ್ಚಿದ ಗೌರವವನ್ನೇ ಉಂಟುಮಾಡಿ ಪಾಪವನ್ನು ನಾಶಮಾಡುತ್ತದೆ. ಹತ್ತು ದಿಕ್ಕುಗಳಲ್ಲಿಯೂ ಕೀರ್ತಿಯು ವ್ಯಾಪಿಸುವಂತೆ ಮಾಡುವದರಿಂದ ಸಜ್ಜನಸಹವಾಸವು ಅತ್ಯುತ್ತಮವಾದದ್ದೆಂದು ಭಾವವು. ॥ ೨೦ ॥

ಶ್ಲೋ॥ ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ।
ನಾಸ್ತಿ ತೇಷಾಂ ಯಶಃಕಾಯೇ ಜರಾಮರಣಜಂ
ಭಯಂ ॥ ೨೧ ॥

ಟೀಕು ॥ (ಯೇ ಯಾರು) ರಸಸಿದ್ಧಾಃ ಸಿದ್ಧಶೃಂಗಾರಾದಿರಸಗಳುಳ್ಳಂಥಾ ಕವೀಶ್ವರರೋ, ತೇಸುಕೃತಿನಃ- ಅಂಥಾ ಸುಕೃತಿಶಾಲಿಗಳಾದ ಕವೀಶ್ವರರು, ಜಯಂತಿ- ಸರ್ವೋತ್ತಮರಾಗಿದ್ದಾರೆ. ತೇಷಾಂ- ಅಂಥಾ ಕವೀಶ್ವರರ, ಯಶಃಕಾಯೇ- ಯಶಃ- ಕೀರ್ತಿಯೆಂಬುವಂಥ, ಕಾಯೇ ಶರೀರದಲ್ಲಿ, ಜರಾಮರಣಜಂ- ಜರಾ- ವಾರ್ಧಕ್ಯವೇನು, ಮರಣ- ನಾಶವೇನು, ಇವುಗಳ ದೆಶೆಯಿಂದ, ಜಂ- ಹುಟ್ಟಿದ, ಭಯಂ - ಭಯವು, ನಾಸ್ತಿ- ಇಲ್ಲ. ಕಾವ್ಯಲಿಂಗಾಲಂಕಾರಃ ವೃತ್ತಮಾನುಷ್ಟುಭಂ ॥ ೨೧ ॥

ತಾತ್ಪರ್ಯ— ಕವೀಶ್ವರರ ಮಹಿಮೆಯನ್ನು ವರ್ಣನೆಮಾಡುತ್ತಾನೆ. ಶೃಂಗಾರಾದಿ ಸಿದ್ಧರಸಗಳುಳ್ಳ ಕವೀಶ್ವರರು ಸರ್ವೋತ್ತಮರಾಗಿ ಇದ್ದಾರೆ. ಕವೀಶ್ವರರ ದೇಹವು ಪಂಚಭೌತಿಕವಾದ್ದರಿಂದ ಜರಾಮರಣಗಳಿಗೆ ಸಿಕ್ಕಿ ಲೋಕಾಂತರ ಪ್ರಯಾಣ ಮಾಡಿದಾಗ್ಯೂ ಅವರುಗಳ ಯಶಃಶರೀರವು ಜರಾಮರಣ ಭಯದಿಂದ ಬಿಡಲ್ಪಟ್ಟದ್ದಾಗಿ ಅದ್ಯಾಪಿ ಇರುತ್ತದೆಯಾದ್ದರಿಂದ ಕವೀಶ್ವರರು ಮಹನೀಯರೆಂದು ಹೇಳಿದ್ದಾನೆಂಬ ಭಾವವು. ॥ ೨೧ ॥

ಇತಿ ವಿದ್ವತ್ಪದ್ಧತಿ ಸ್ಸಮಾಪ್ತಾ.

## —ಅಥ ಶೌರ್ಯಪದ್ಧತಿ ಪ್ರಾರಂಭಃ—

ಶ್ಲೋ॥ ಕ್ಷುತ್ಕ್ಷಾಮೋಽಪಿ ಜರಾ ಕೃಶೋಽಪಿ ಶಿಥಿಲ ಪ್ರಾಯೋಽ
ಪಿ ಕಷ್ಟಾಂ ದಶಾಮಾಪನ್ನೋಽಪಿವಿಪನ್ನ ದೀಧಿತಿರಪಿ
ಪ್ರಾಣೇಷುನಶ್ಯತ್ಸ್ವಪಿ ॥ ಮತ್ತೇಭೇಂದ್ರ ವಿಭಿನ್ನ
ಕುಂಭಪಿಶಿತ ಗ್ರಾಸೈಕ ಬದ್ಧಸ್ಪೃಹಃ ಕಿಂಜೀರ್ಣಂ
ತೃಣಮತ್ತಿಮಾನಮಹತಾ ಮಗ್ರೇಸರಃ ಕೇಸರೀ ॥

ಟೀಕು ॥ ಕ್ಷುತ್ಕ್ಷಾಮೋಽಪಿ ಕ್ಷುತ್- ಹಸಿವಿನಿಂದ, ಕ್ಷಾಮೋಽಪಿ- ಕೃಶವಾದಾಗ್ಯೂ, ಜರಾಕೃಶೋಽಪಿ, ಜರಾ- ಮುದುಕತನದಿಂದ, ಕೃಶೋಽಪಿ ಸಣ್ಣಗಾಗಿದ್ದಾಗ್ಯೂ, ಶಿಥಿಲಪ್ರಾಯೋಽಪಿ - ಅಂಗವೈಕಲ್ಯದಿಂದ ನಿರ್ಬಲವಾದಂಥಾದ್ದಾದರೂ, ಕಷ್ಟಾಂ- ಕಷ್ಟತರವಾದ, ದಶಾಂ- ರೀತಿಯನ್ನು, ಆಪನ್ನೋಽಪಿ- ಹೊಂದಿಯುರುವಂಥವಾದ್ದಾಗಿಯಿದ್ದರೂ, ವಿಪನ್ನದೀಧಿತಿರಪಿ - ವಿಪನ್ನ - ಮುಗ್ಗಿಹೋದ, ದೀಧಿತಿರಪಿ - ಕಾಂತಿವುಳ್ಳಂಥದ್ದಾದಾಗ್ಯೂದರೂ, ಪ್ರಾಣೇಷು- ಪ್ರಾಣಗಳು, ನಶ್ಯತ್ಸ್ವಪಿ - ನಾಶವನ್ನು ಹೊಂದುತ್ತಿಯಿರುವಂಥದ್ದಾದಾಗ್ಯೂದರೂ ಕೂಡ, ಮತ್ತೇಭೇಂದ್ರವಿಭಿನ್ನಕುಂಭಪಿಶಿತಗ್ರಾಸೈಕಬದ್ಧಸ್ಪೃಹಃ - ಮತ್ತ - ಮದಿಸಿದಂಥ, ಇಭೇಂದ್ರ - ಗಜಶ್ರೇಷ್ಠದ, ವಿಭಿನ್ನ - ಸೀಳಲ್ಪಟ್ಟ, ಕುಂಭ- ಕುಂಭಸ್ಥಳದಲ್ಲಿ ಇರುವ, ಪಿಶಿತ ಮಾಂಸದ, ಗ್ರಾಸ- ಕಬಳದಲ್ಲಿ ಏಕ - ಮುಖ್ಯವಾಗಿ, ಬದ್ಧ - ಕಟ್ಟಲ್ಪಟ್ಟಂಥ, ಸ್ಪೃಹಃ ಇಚ್ಛೆಯುಳ್ಳಂಥ. ಮಾನಮಹತಾಂ - ಮಾನವಂತರುಗಳಿಗೆ, ಅಗ್ರೇ - ಮುಂದುಗಡೆಯಲ್ಲಿ, ಸರಃ - ಹೋಗುತ್ತಲಿರುವ. ಕೇಸರೀ - ಸಿಂಹವು, ಜೀರ್ಣಂ - ಕೊಳೆತು ಹೋದ, ತೃಣಂ- ಹುಲ್ಲನ್ನು, ಅತ್ತಿಕಿಂ- ತಿನ್ನುತ್ತದೆಯೇ ಏನು? ಅಪ್ರಸ್ತುತಪ್ರಶಂಸಾಲಂಕಾರಃ । ಶಾರ್ದೂಲವಿಕ್ರೀಡಿತವೃತ್ತ ॥ ೨೨ ॥

ತಾತ್ಪರ್ಯ- ಸಿಂಹದ ವೃತ್ತಾಂತದಿಂದ ಮಹಾತ್ಮರಾದ ಮಾನವರಿಗೆ ಶೌರ್ಯವನ್ನು ಹೇಳುತ್ತಾನೆ. ಲೋಕದಲ್ಲಿ ಮಾನವಂತರಲ್ಲಿ ಅಗ್ರಗಣ್ಯವಾದ ಸಿಂಹವು- ಹಸಿವಿನಿಂದ ಬಳಲುತ್ತಿದ್ದರೂ, ವಾರ್ಧಕ್ಯದಿಂದ ಕೂಡಿದ್ದರೂ, ಶರೀರವು ಒಣಗಿದ್ದರೂ, ಪ್ರಾಣಗಳು ಹೊರಟುಹೋಗುತ್ತಿರುವ ಕಾಲದಲ್ಲೂ, ಆನೆಯ ಕುಂಭಸ್ಥಳವನ್ನು ಸೀಳಿ, ಅದರಲ್ಲಿರುವ ಮಾಂಸವನ್ನು ಭಕ್ಷಣೆಮಾಡಬೇಕೆಂಬ ಆಶೆಯುಳ್ಳದ್ದಾಗಿ ಇರುತ್ತೆಯೇಹೊರತು ಒಣಗಿದ

ಹುಲ್ಲನ್ನು ತಿಂದು ಜೀವವನ್ನು ಕಾಪಾಡಿಕೊಳ್ಳಬೇಕೆಂದು ಕೋರುವದಿಲ್ಲ. ಏಕೆಂದರೆ— ಸಿಂಹವು ಮಾನವಂತರಲ್ಲಿ ಶ್ರೇಷ್ಠವಾದಂಥಾದ್ದರಿಂದ ನೀಚವಾದ ವೃತ್ತಿಗೆ ಹೋಗುವದಿಲ್ಲವೆಂದು ಭಾವವು. ||೨೨||

ಶ್ಲೋ|| ಸ್ವಲ್ಪ ಸ್ನಾಯುವ ಸಾವಸೇಕಮಲಿನಂ ನಿರ್ಮಾಂಸ
ಮಪ್ಯಸ್ಥಿ ಗೋಃ ಶ್ವಾಲಬ್ಧ್ವಾ ಪರಿತೋಷಮೇತಿ ನಚ
ತತ್ತಸ್ಯಕ್ಷುಧಾಶಾಂತಯೇ || ಸಿಂಹೋ ಜಂಬುಕ
ಮಂಕಮಾಗತಮಪಿ ತ್ಯಕ್ತ್ವಾನಿ ಹಂತಿದ್ವಿಪಂ ಸರ್ವಃ
ಕೃಚ್ಛ್ರಗತೋಽಪಿವಾಂಛತಿ ಜನಸ್ಸತ್ವಾನುರೂಪಂ
ಫಲಂ || ೨೩ ||

ಟೀಕು || ಶ್ವಾ - ನಾಯಿಯು, ಸ್ವಲ್ಪಸ್ನಾಯುಸಾವಸೇಕಮಲಿನಂ - ಸ್ವಲ್ಪ- ಕೊಂಚವಾಗಿ, ಸ್ನಾಯು ಕಾಲಖಂಡವು, ವಸಾ- ಮಜ್ಜವು ಇವುಗಳ, ವಸೇಕ- ಸಂಬಂಧದಿಂದ, ಮಲಿನಂ- ಮಾಸಿಕೊಂಡು ಇರುವ, ನಿರ್ಮಾಂಸ ಮಪಿ - ಮಾಂಸರಹಿತವಾಗಿದ್ದಂಥಾದ್ದಾಗ್ಯದರೂ ಕೂಡ, ಗೋಃ - ಗೋವಿನ, ಅಸ್ಥಿ- ಮೂಳೆಯನ್ನು, ಲಬ್ಧ್ವಾ-ಹೊಂದಿ, ಪರಿತೋಷಂ-ಸಂತೋಷವನ್ನು, ಏತಿ- ಹೊಂದುತ್ತದೆ. ತತ್ - ಆ ಮೂಳೆಯು, ತಸ್ಯ-ಆಶ್ವಾನಕ್ಕೆ ಕ್ಷುಧಾಶಾಂತಯೆ, ಕ್ಷುಧಾ - ಹಸಿವಿಗೆ, ಶಾಂತಯೇ - ಶಾಂತಿಗೋಸ್ಕರ ನ- ಆಗುವದಿಲ್ಲ. ಸಿಂಹಃ- ಸಿಂಹವು, ಜಂಬುಕಂ- ನರಿಯನ್ನು, ಅಂಕಂ- ತೊಡೆಯನ್ನು, ಆಗತಮಪಿ- ಹೊಂದಿದಂಥಾದ್ದಾದಾಗ್ಯದರೂ, ತ್ಯಕ್ತ್ವಾ ಬಿಟ್ಟು, ದ್ವಿಪಂ - ಆನೆಯನ್ನು, ನಿಹಂತಿ - ಸಂಹಾರಮಾಡುತ್ತೆ. (ತಥಾಹಿ - ಅದು ಯುಕ್ತವೇ ಸರಿ.) ಸರ್ವಃ - ಸಮಸ್ತ, ವಾದ- ಜನಃ - ಜನವು, ಕೃಚ್ಛ್ರಗತೋಽಪಿ- ಕೃಚ್ಛ್ರ- ಕಷ್ಟವನ್ನು, ಗತೋಽಪಿ- ಹೊಂದಿಯಿದ್ದಾಗ್ಯೂ, ಸತ್ವಾನುರೂಪಂ- ಸತ್ವ- ಸಾಮರ್ಥ್ಯಕ್ಕೆ, ಅನುರೂಪಂ- ಸದೃಶವಾದಂಥ, ಫಲಂ- ಫಲವನ್ನೇ, ವಾಂಛತಿ - ಇಚ್ಛೈಸುತ್ತೆ. ಅರ್ಥಾಂತರನ್ಯಾಸಾಲಂಕಾರಃ | ಶಾರ್ದೂಲವಿಕ್ರೀಡಿತವೃತ್ತಂ || ೨೩ ||

ತಾತ್ಪರ್ಯ—ಶೌರ್ಯಲಕ್ಷಣವನ್ನು ಹೇಳುತ್ತಾನೆ ಒಂದು ನಾಯಿಯು-ಕೊಂಚ ಮಾಂಸಮಜ್ಜಗಳಿಂದ ಕೂಡಿಕೊಂಡಿರುವ ಗೋವಿನ ಮೂಳೆಯನ್ನು ತೆಗೆದುಕೊಂಡು ಬಹಳ ಸಂತೋಷವನ್ನು ಹೊಂದುತ್ತದೆ. ಅದ

ರಿಂದ ಹೊಟ್ಟೆತುಂಬುವದಿಲ್ಲ. ಸಿಂಹವಾದರೋ ಸಮೀಪದಲ್ಲಿ ಬಂದ ನರಿಯನ್ನು ಬಿಟ್ಟು, ದೂರದಲ್ಲಿರುವ ಆನೆಯನ್ನು ಹೊಡೆಯುತ್ತೇನೆಂದು ಇಚ್ಛಿಸುತ್ತದೆ. ಹಾಗೆಯೇ ಸರ್ವಜನಗಳೂ ತಂತಮ್ಮ ಯೋಗ್ಯತಾನುಸಾರವಾದ ಫಲವನ್ನು ಅಪೇಕ್ಷಿಸುತ್ತಾರೆ. ಶ್ವಾನ, ಸಿಂಹಗಳ ಉದಾಹರಣೆಯಿಂದ ವಿದ್ವಾಂಸರೂ ಕೂಡ ಎಂಥಾ ಕಷ್ಟವಾದರೂ ತಮ್ಮ ಯೋಗ್ಯತೆಗೆ ತಕ್ಕ ಫಲವನ್ನೇ ಅಪೇಕ್ಷಿಸುವರೆಂದು ಭಾವವು. ||೨೩||

ಶ್ಲೋ|| ಲಾಂಗೂಲಚಾಲನಮಧಶ್ಚರಣಾವಘಾತಂ ಭೂಮೌ
ನಿಪತ್ಯ ವದನೋದರ ದರ್ಶನಂಚ || ಶ್ವಾಪಿಂಡದಸ್ಯ
ಕುರುತೇ ಗಜಪುಂಗವಸ್ತು ಧೀರಂ ವಿಲೋಕಯತಿ
ಚಾಟುಶತೈಶ್ಚ ಭುಂಕ್ತೇ ||೨೪||

ಟೀಕು || ಶ್ವಾ- ನಾಯಿಯು, ಲಾಂಗೂಲಚಾಲನಂ- ಲಾಂಗೂಲ- ಬಾಲವನ್ನು, ಚಾಲನಂ- ಅಲ್ಲಾಡಿಸೋಣವನ್ನೂ, ಅಧಃ- ಕೆಳಭಾಗದಲ್ಲಿ, ಚರಣಾವಘಾತಂ - ಚರಣ - ಕಾಲಿನಿಂದ, ಅವಘಾತಂ - ಹೊಡಿಯೋಣವನ್ನೂ, ಭೂಮೌ- ಭೂಮಿಯಲ್ಲಿ, ನಿಪತ್ಯ- ಬಿದ್ದು, ವದನೋದರದರ್ಶನಂಚ ವದನ- ಮುಖವೂ, ಉದರ - ಹೊಟ್ಟೆಯೂ ಇವುಗಳನ್ನು, ದರ್ಶನಂಚ - ತೋರಿಸೋಣವನ್ನೂ, ಪಿಂಡದಸ್ಯ - ಅನ್ನವನ್ನು ಹಾಕುವವನ ಪುರಸ್ತಾತ್- ಮುಂದುಗಡೆಯಲ್ಲಿ, ಕುರುತೇ - ಮಾಡುತ್ತದೆ, ಗಜಪುಂಗವಸ್ತು - ಗಜ - ಶ್ರೇಷ್ಠವಾದರೊ ಧೀರಂ- ಗಂಭೀರವಾಗಿ, ವಿಲೋಕಯತಿ- ನೋಡುತ್ತದೆ, ಚಾಟುಶತೈಶ್ಚ- ಚಾಟು- ಪ್ರಿಯೋಕ್ತಿಗಳ, ಶತೈಶ್ಚ- ನೂರರಿಂದ, ಭುಂಕ್ತೇ ಭೋಜನಮಾಡುತ್ತದೆ. || ದೃಷ್ಟಾಂತಾಲಂಕಾರಧ್ವನಿಃ || ಶಾರ್ದೂಲವಿಕ್ರೀಡಿತವೃತ್ತಂ ||೨೪||

ತಾತ್ಪರ್ಯ—ನಾಯಿಯು ತನಗೆ ಅನ್ನವನ್ನು ಹಾಕುವವನ ಮುಂದುಗಡೆಯಲ್ಲಿ ಬಾಲವನ್ನು ಬಡಿಯುತ್ತಾ, ಕಾಲಿಲ್ಲಿ ನೆಲವನ್ನು ಕೆರೆದು ನೆಲದಮೇಲೆ ಬಿದ್ದು ಹೊರಳಾಡುತ್ತಾ, ಹೊಟ್ಟೆಯನ್ನೂ ಮುಖವನ್ನೂ ತೋರಿಸಿ, ಅತಿ ದೈನ್ಯವೃತ್ತಿಯನ್ನು ತೋರಿಸುತ್ತದೆ. ಗಜಶ್ರೇಷ್ಠವಾದರೋ ತಿಂಡಿಯನ್ನು ಕೊಡುವ ಕಾಲದಲ್ಲಿ ಗಂಭೀರವಾಗಿ ನೋಡುತ್ತದೆ, ಮತ್ತು ಅನೇಕವೇಳೆ ಉಪಚಾರದ ಮಾತುಗಳನ್ನಾಡಿದರೆ ತಿಂಡಿಯನ್ನು ತಿನ್ನುತ್ತದೆ

ಅಂದರೆ ಲೋಕದಲ್ಲಿ ಅಲ್ಪ ಮನುಷ್ಯರು ಅಲ್ಪಪ್ರಯೋಜನಕ್ಕೋಸ್ಕರ (ಜೀವನಕ್ಕೋಸ್ಕರ) ಅತಿ ದೈನ್ಯವನ್ನು ತೋರಿಸುತ್ತಾರೆ. ಧೀರಪುರುಷರು ದೈನ್ಯಪಡದೆ ಅತಿ ಗಂಭೀರವಾಗಿರುತ್ತಾರೆ.

ಶ್ಲೋ|| ಪರಿವರ್ತಿನಿ ಸಂಸಾರೇ ಮೃತಃ ಕೋ ವಾ ನ ಜಾಯತೇ ||
ಸ ಜಾತೋ ಯೇನ ಜಾತೇನ ಯಾತಿ ವಂಶಃ ಸಮುನ್ನತಿಂ ||

ಟೀಕು | ಪರಿವರ್ತಿನಿ - ತಿರುಗುತ್ತಲಿರುವ, ಸಂಸಾರೇ - ಸಂಸಾರದಲ್ಲಿ, ಮೃತಃ - ಮರಣವನ್ನು ಹೊಂದಿದ, ಕೋವಾ - ಯಾವ ಮನುಷ್ಯನು ತಾನೆ, ನಜಾಯತೇ - ಹುಟ್ಟುವದಿಲ್ಲ, ಜಾತೇನ - ಹುಟ್ಟಿದಂಥ, ಯೇನ - ಯಾವ ಮನುಷ್ಯನಿಂದ, ವಂಶಃ - ವಂಶವು, ಸಮುನ್ನತಿಂ - ಪ್ರಸಿದ್ಧಿಯನ್ನು, ಯಾತಿ ಹೊಂದುತ್ತದೆಯೋ, ಸಃ - ಆ ಮನುಷ್ಯನು, ಜಾತಃ - ಹುಟ್ಟಿದವನು. ವೃತ್ತ ಮಾನುಷ್ಟುಭಂ || ೨೫ ||

ತಾತ್ಪರ್ಯ—ವಂಶಕ್ಕೆ ಕೀರ್ತಿತರತಕ್ಕವನು ಹುಟ್ಟಿದ್ದಕ್ಕೆ ಸಾರ್ಥಕವೆಂಬುದನ್ನು ಹೇಳುತ್ತಾನೆ. ಜನನ ಮರಣರೂಪಕವಾದ ಈ ಸಂಸಾರದಲ್ಲಿ ಯಾವ ಮನುಷ್ಯನು ತಾನೇ ಸತ್ತವನು ಹುಟ್ಟುವದಿಲ್ಲ. ಯಾವ ಮನುಷ್ಯನು ಹುಟ್ಟಿದ್ದರಿಂದ ವಂಶವು ಪ್ರಖ್ಯಾತಿಗೆ ಬರುತ್ತದೋ ಅವನೇ ಹುಟ್ಟಿದವನೆಂದು ಲೆಕ್ಕವು. ಅಂದರೆ ವಂಶಕ್ಕೆ ಪ್ರಖ್ಯಾತಿ ತರುವಂಥಾವನು ಹುಟ್ಟಿದರೆ ಸಾರ್ಥಕವೆಂಬ ಭಾವವು. ||೨೫||

ಶ್ಲೋ|| ಕುಸುಮಸ್ತಬಕಸ್ಯೇವ ದ್ವಯೀವೃತ್ತಿರ್ಮನಸ್ವಿನಃ ||
ಮೂರ್ಧ್ನಿ ವಾ ಸರ್ವಲೋಕಸ್ಯ ಶೀರ್ಯತೇ ವನ ಏವ ವಾ ||

ಟೀಕು | ಕುಸುಮಸ್ತಬಕಸ್ಯೇವ- ಕುಸುಮ- ಪುಷ್ಪದ, ಸ್ತಬಕಸ್ಯೇವ- ಗುಚ್ಛದೋಪಾದಿಯಲ್ಲಿ, ಮನಸ್ವಿನಃ - ವಿದ್ವಾಂಸರಿಗೆ, ದ್ವಯೀ - ಎರಡು ವಿಧವಾದ, ವೃತ್ತಿಃ- ವ್ಯಾಪಾರವು, ಭವತಿ- ಆಗುತ್ತದೆ, (ತದ್ವೃತ್ತಿದ್ವಯಂ- ಆ ಎರಡು ವಿಧವಾದ ವೃತ್ತಿಗಳು, ಕಿಂ- ಯಾವುವೆಂದರೆ,) ಸರ್ವಲೋಕಸ್ಯ- ಸರ್ವ- ಸಮಸ್ತವಾದಂಥಾ, ಲೋಕಸ್ಯ- ಜನಗಳ, ಮೂರ್ಧ್ನಿವಾ- ತಲೆಯ ಮೇಲಾಗಲಿ, (ಉನ್ನತಸ್ಥಾನದಲ್ಲಿಯಾಗಲಿ) ವನೇವಾ- ಅರಣ್ಯದಲ್ಲಿಯಾಗಲಿ, (ವಿದೇಶದಲ್ಲಿಯಾಗಲಿ) ಶೀರ್ಯತೇ- ಜೀರ್ಣವಾಗೋಣವಾಗುತ್ತದೆ, (ವಾಸ ಮಾಡೋಣವಾಗುತ್ತದೆ.) || ೨೬ ||

ತಾತ್ಪರ್ಯ—ಮೊದಲು ಹೇಳಿದ ಮಾನವಂತರಾದ ಪುರುಷರ ವ್ಯಾಪಾರವನ್ನು ಹೇಳುತ್ತಾನೆ. ಹುವ್ವಿನ ಗೊಂಚಲಿನೋಪಾದಿಯಲ್ಲಿ ಎರಡು ವಿಧವಾದ ವ್ಯಾಪಾರವುಂಟು. ಅದು ಹೇಗಂದರೆ—ಹೂವಿನ ಗೊಂಚಲು ಎಲ್ಲಾ ಜನಗಳ ತಲೆಯಮೇಲಿರುತ್ತವೆ. ಮಾನಿಷ್ಠರಾದ ದೊಡ್ಡಮನುಷ್ಯರು ಎಲ್ಲರಿಗಿಂತಲೂ ಉತ್ತಮವಾದ ಪದವಿಯಲ್ಲಿರುತ್ತಾರೆ. ಇಲ್ಲವಾದರೆ ಪುಷ್ಪವು ಅರಣ್ಯದಲ್ಲಿ ಜೀರ್ಣವಾಗುತ್ತವೆ. ಮಾನಿತರಾದರೂ ಉನ್ನತಪದವಿ ಇಲ್ಲವಾದರೆ ವಿದೇಶಗಮನ ಮಾಡಿ ಅಲ್ಲಿ ನಾಶವಮಾಡುತ್ತಾರೆ, ಎಂದು ಭಾವವು. ||೨೬||

ಶ್ಲೋ|| ಸಂತ್ಯನ್ಯೇಪಿ ಬೃಹಸ್ಪತಿಪ್ರಭೃತಯಃ ಸ್ಸಂಭಾವಿತಾಃ
ಪಂಚಷಾಸ್ತಾನ್ ಪ್ರತ್ಯೇಷ ವಿಶೇಷ ವಿಕ್ರಮರುಚೀ
ರಾಹುರ್ನವೈರಾಯತೇ || ದ್ವಾವೇವ ಗ್ರಸತೇ ದಿವಾ
ಕರ ನಿಶಾಪ್ರಾಣೇಶ್ವರೌ ಭಾಸ್ವರೌ ಭ್ರಾತಃ ಪರ್ವಣಿ
ಪಶ್ಯದಾನವಪತಿ ಶ್ಶೀರ್ಷಾವಶೇಷಾ ಕೃತಿಃ ||೨೭||

ಟೀಕಾ || ಅನ್ಯೇ- ಮತ್ತೆ ಕೆಲವರಾದ, ಬೃಹಸ್ಪತಿಪ್ರಭೃತಯಃ- ಬೃಹಸ್ಪತ್ಯಾಚಾರ್ಯರೇ ಮೊದಲಾಗಿವುಳ್ಳ, ಸಂಭಾವಿತಾಃ - ಗ್ರಹಣಯೋಗ್ಯರಾದ, ಪಂಚಷಾಃ- ಐದು ಗ್ರಹಗಳೂ, ಸಂತ್ಯಪಿ- ಇರುವಂಥಾವರಾದಾಗ್ಯೂ ಕೂಡ, ತಾನ್ ಪ್ರತಿ - ಅಂಥಾವರನ್ನು ಕುರಿತು, ವಿಶೇಷ ವಿಕ್ರಮರುಚಿಃ - ವಿಶೇಷ - ಅಧಿಕವಾದ, ವಿಕ್ರಮ- ಪರಾಕ್ರಮ- ಪರಾಕ್ರಮವೂ, ರುಚಿಃ- ಕಾಂತಿಯೂ ವುಳ್ಳಂಥಾ, ರಾಹುಃ- ರಾಹುಗ್ರಹವು, ನವೈರಾಯತೇ- ವೈರವನ್ನು ಮಾಡುವದಿಲ್ಲ. ದಾನವಪತಿಃ- ರಾಕ್ಷಸೇಶ್ವರನಾದ, ಶೀರ್ಷಾವಶೇಷಾಕೃತಿಃ- ಶೀರ್ಷಾ ಶಿರಸ್ಸಿನಿಂದ, ಅವಶೇಷ ಮಿಕ್ಕಂಥಾ, ಆಕೃತಿಃ ಆಕಾರವುಳ್ಳ, ಏಷರಾಹುಃ ಆ ಪೂರ್ವೋಕ್ತನಾದ ರಾಹುಗ್ರಹವು, ದಿವಾಕರನಿಶಾಪ್ರಾಣೇಶ್ವರೌ ದಿವಾಕರ- ಹಗಲನ್ನುಂಟುಮಾಡುವ, ನಿಶಾ - ರಾತ್ರಿಗೆ, ಪ್ರಾಣೇಶ್ವರೌ - ಪ್ರಾಣಕಾಂತನಾದ, ಭಾಸ್ವರೌ - ಪ್ರಕಾಶಿಸುತ್ತಿರುವ, ದ್ವಾವೇವ- ಇವರಿಬ್ಬರನ್ನೇ, ಪರ್ವಣಿ ಪರ್ವಕಾಲದಲ್ಲಿ, ಗ್ರಸತೇ- ಗ್ರಾಸಮಾಡುತ್ತಾನೆ ಹೇಭ್ರಾತಃ- ಎಲೈ ಅಣ್ಣನೇ, ಪಶ್ಯ- ನೋಡು, ಇತಿ- ಹೀಗೆಂಬದಾಗಿ, ಅವದತ್- ಹೇಳಿದನು, ಶಾರ್ದೂಲವಿಕ್ರೀಡಿತವೃತ್ತಂ || ೨೭ ||

ತಾತ್ಪರ್ಯ—ರಾಹುಗ್ರಹವು ಬೃಹಸ್ಪತಿ ಮೊದಲಾದ ಐದು ಗ್ರಹಗಳೂ ಗ್ರಾಸಯೋಗ್ಯರಾಗಿದ್ದಾಗ್ಯೂ ಅವಾಪ್ರತಿಪತ್ ಸ್ಪೂರ್ವದಲ್ಲಿಯೂ, ಪೂರ್ಣಿಮಾ ಪ್ರತಿಪತ್ಪರ್ವದಲ್ಲಿಯೂ ಸಹ ಸೂರ್ಯಚಂದ್ರರನ್ನು ಗ್ರಾಸ ಮಾಡುತ್ತಾನೆ. ಅಂದರೆ ಪೂರ್ಣವಾದ ಶರೀರವಿಲ್ಲದೆ ಇದ್ದಾಗ್ಯೂ ಪೂರ್ಣ ವೈರವನ್ನು ಬಿಡದೆ ಇಂಥಾ ಮಹತ್ಕಾರ್ಯವನ್ನು ಮಾಡುತ್ತಾನೆ. ಸಂಪೂರ್ಣವಾದ ಅವಯವಗಳು ಇದ್ದರೆ ಇನ್ನೂ ಎಂಥಾ ಅಸಾಧ್ಯ ಕೆಲಸಗಳನ್ನು ಮಾಡುವನೊ! ಎಂಬ ಭಾವವು. ಶೌರ್ಯಶಾಲಿಗಳು ತಮ್ಮ ಅಂಗಹೀನತ್ವವನ್ನು ನೋಡದೆ ಶತ್ರುಗಳಲ್ಲಿ ಯುದ್ಧಮಾಡುತ್ತಾರೆಂದು ತಾತ್ಪರ್ಯವು.

ಶ್ಲೋ॥ ವಹತಿ ಭುವನ ಶ್ರೇಣಿಂ ಶೇಷಃ ಫಣಾಫಲಕಸ್ಥಿತಾಂ
ಕಮಠಪತಿನಾ ಮಧ್ಯೇ ಪೃಷ್ಠಂ ಸದಾ ಸಚಧಾರ್ಯತೇ ॥ ತಮಪಿ ಕುರುತೇ ಕ್ರೋಡಾಧೀನಂ ಪಯೋಧಿರನಾದರಾದ ಹಹಮಹತಾಂ ನಿಸ್ಸೀಮಾನಶ್ಚರಿತ್ರ ವಿಭೂತಯಃ ॥ ೨೪ ॥

ಟೀಕಾ ॥ ಶೇಷಃ- ಆದಿಶೇಷನು, ಫಣಾಫಲಕಸ್ಥಿತಾಂ-ಫಣಾಫಲಕ ಫಲಕಸದೃಶವಾದ ಹೆಡೆಗಳಲ್ಲಿ. ಸ್ಥಿತಾಂ-ಇರುವಂಥಾ, ಭುವನಶ್ರೇಣಿಂ-ಭುವನ-ಚತುರ್ದಶ ಭುವನಗಳ, ಶ್ರೇಣಿಂ - ಪಙ್ಕ್ತಿಯನ್ನು. ವಹತಿ - ವಹಿಸುತ್ತಾನೆ, ಸಚ- ಆ ಆದಿಶೇಷನೂಕೂಡ, ಕಮಠಪತಿನಾ- ಆದಿಕೂರ್ಮನಿಂದ, ಸದಾ-ಯಾವಾಗಲೂ, ಮಧ್ಯೇಪೃಷ್ಠಂ-ಬೆನ್ನಿನ ಮಧ್ಯಭಾಗದಲ್ಲಿ, ಧಾರ್ಯತೇ-ಧರಿಸಲ್ಪಡುತ್ತಾನೆ. ಪಯೋಧಿಃ- ಪ್ರಳಯಕಾಲದ ಸಮುದ್ರವು, ತಮಪಿ- ಅಂಥಾ ಆದಿಕೂರ್ಮನನ್ನು, ಅನಾದರಾತ್- ನಿರಾಯಾಸವಾಗಿ, ಕ್ರೋಡಾಧೀನಂ - ಕ್ರೋಡ-ಆದಿವರಾಹನ ಕೋರೆಹಲ್ಲಿನ, ಅಧೀನಂ- ಆಯತ್ತವನ್ನಾಗಿ, ಕುರುತೇ- ಮಾಡುತ್ತದೆ, ಅಹಹ- ಆಶ್ಚರ್ಯವು (ಚಿತ್ರವು) ಮಹತಾಂ- ಮಹಾತ್ಮರುಗಳ, ಚರಿತ್ರವಿಭೂತಯಃ - ಚರಿತ್ರ - ಚರಿತ್ರಗಳ, ವಿಭೂತಯಃ - ಐಶ್ವರ್ಯಗಳು, ನಿಸ್ಸೀಮಾನಃ ಎಲ್ಲೆಕಟ್ಟುಗಳಿಲ್ಲದಂಥವುಗಳು.॥ ಮಾಲಾದೀಪಕಾಲಂಕಾರಃ॥ ಹರಿಣೀವೃತ್ತಂ ॥ ೧೬॥

ತಾತ್ಪರ್ಯ—ಮಹಾತ್ಮರ ಚರಿತ್ರೆಯು ಅಪಾರವಾದದ್ದೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ—ಆದಿಶೇಷನು ತನ್ನ ಫಣಾಫಲಕದಲ್ಲಿ

ಹೊತ್ತುಕೊಂಡಿದ್ದ ಭುವನಾವಳಿಯನ್ನೂ ಮತ್ತು ಅಂಥಾ ಆದಿಶೇಷನನ್ನೂ ಕೂಡ ಅದಿಕೂರ್ಮನು ಬೆನ್ನಿನಲ್ಲಿ ಹೊತ್ತುಕೊಂಡಿದಾನೆ ಮಹಾಪ್ರಳಯ ಜಲಧಿಯನ್ನು ಮತ್ತು ಆ ಕೂರ್ಮನನ್ನೂ ಕೂಡ ಅವಿವರಾಹನು ತನ್ನ ಕೋರೆದಾಡೆಯಲ್ಲಿ ಹೊತ್ತುಕೊಂಡಿದ್ದಾನು. ಅದು ಆಶ್ಚರ್ಯ. ಒಂದಕ್ಕಿಂತಲೂ ಮತ್ತೊಂದು ಹೆಚ್ಚಾಯಿತು. ಆದ್ದರಿಂದ ಮಾನವಂತರಾದ ಮಹಾತ್ಮರುಗಳ ಚರಿತ್ರೆಗಳು ಎಣಿಕೆಯಿಲ್ಲದಂಥಾವುಗಳು. ಅಂದರೆ ಅಪಾರವಾದ ಚರಿತ್ರಗಳೆಂದು ಗ್ರಂಥಕರ್ತನ ಅಭಿಪ್ರಾಯವು.

ಶ್ಲೋ॥ ವರಂ ಪ್ರಾಣೋಚ್ಛೇದಸ್ಸಮದಮಘವನ್ಮುಕ್ತಕು
ಲಿಶ ಪ್ರಹಾರೈರುದ್ಗಚ್ಛದ್ಬಹುಳದಹನೋದ್ಗಾರಗು
ರುಭಿಃ ॥ ತುಷಾರಾದ್ರೇಸ್ಸೂನೋರಹಹಪಿತರಿ
ಕ್ಲೇಶವಿವಶೇನಚಾಸೌಸಂಪಾತಃ ಪಯಸಿ ಪಯ
ಸಾಂ ಪತ್ಯುರುಚಿತಃ ॥ ೨೯ ॥

ಟೀಕು ॥ ತುಷಾರಾದ್ರೇಃ-ಹಿಮವತ್ಪರ್ವತದ, ಸೂನೋಃ-ಮಗನಾದ, ಮೈನಾಕ ಪರ್ವತಕ್ಕೆ, ಉದ್ಗಚ್ಛದ್ಬಹುಳದಹನೋದ್ಗಾರಗುರುಭಿಃ - ಉದ್ಗಚ್ಛತ್- ಈಚೆಗೆ ಹೊರಟುಬರುತ್ತಿರುವ ಬಹುಳ- ಹೆಚ್ಚಾದ, ದಹನ-ಅಗ್ನಿಯನ್ನು, ಉದ್ಗಾರ-ಉಗುಳುತ್ತಿರುವದರಿಂದ, ಗುರುಭಿಃ- ಅಧಿಕಗಳಾದ. ಸಮದ ಮಘವನ್ಮುಕ್ತಕುಲಿಶಪ್ರಹಾರೈಃ- ಸಮದ- ಮದದಿಂದ ಕೂಡಿಕೊಂಡಿರುವ, ಮಘವತ- ದೇವೇಂದ್ರನಿಂದ, ಮುಕ್ತ- ಬಿಡಲ್ಪಟ್ಟ, ಕುಲಿಶ-ವಜ್ರಾಯುಧದ, ಪ್ರಹಾರೈಃ- ಹೊಡಿಯೋಣದರಿಂದ, ಪ್ರಾಣೋಚ್ಛೇದಃ- ಮರಣವು, ವರಂ- ಶ್ರೇಷ್ಠವಾದದ್ದು. ಅಹಹ- ಆಶ್ಚರ್ಯ. ಪಿತರಿ- ತಂದೆಯಾದ ಹಿಮವಂತನು. ಕ್ಲೇಶವಿವಶೇ- ಕ್ಲೇಶ- ದುಃಖದಿಂದ, ವಿವಶೇ ವಿಹ್ವಲನಾದಂಥಾವನಾಗುತ್ತಿರಲಾಗಿ, ಪಯಸಾಂ-ಉದಕಗಳಿಗೆ, ಪತ್ಯುಃ-ಪತಿಯಾದ ಸಮುದ್ರದ, ಪಯಸಿ- ಉದಕದಲ್ಲಿ, ಅಸೌ- ಈ, ಸಂಪಾತಃ- ಮುಳುಗೋಣವು, ಉಚಿತಃ - ಯೋಗ್ಯವಾದಂಥಾದ್ದು, ನಚ-ಅಲ್ಲ. ಶಿಖರಿಣೀವೃತ್ತಂ ॥ ೨೯ ॥

ತಾತ್ಪರ್ಯ — ಶೌರ್ಯ ಮತ್ತು ಮಾನವುಳ್ಳಂಥಾವರಿಗೆ ದೈನ್ಯಾದಿಗಳು ಯೊಗ್ಯವಲ್ಲವೆಂಬುದನ್ನು ಮೈನಾಕ ದೃಷ್ಟಾಂತದಿಂದ ಹೇಳುತ್ತಾನೆ. ಹೇಗೆದರೆ — ಹಿಮವತ್ಪರ್ವತನ ಪುತ್ರನಾದ ಮೈನಾಕನಿಗೆ- ಅಗ್ನಿ ಕಣಗ

ಳನ್ನು ಉಗ್ರಳುತ್ತಿರುವ ಪ್ರಾಣನಾಶಕರವಾದ ಮದದಿಂದ ಕೂಡಿಕೊಂಡಿರುವ ಇಂದ್ರನ ವಜ್ರಾಯುಧ ಪ್ರಹಾರಗಳಿಂದ ತಂದೆಯು ಪ್ರಾಣನಾಶವು ಶ್ರೇಷ್ಠವೆ! ಇದನ್ನು ನೋಡಿ ತಂದೆಯಾದ ಹಿಮವಂತನು ದುಃಖಿತನಾಗಲು ವೈನಾಕನಿಗೆ ಉದಕಗಳಿಗೆ ಪತಿಯಾದ ಸಮುದ್ರನ ಸಂಪ್ರಾತವು ಅಂದರೆ ಮರೆಮಾಡಿಕೊಳ್ಳೋಣವು ಯೋಗ್ಯವಲ್ಲ. ಏತಕ್ಕೆಂದರೆ ಮಾನವೂ ಶೌರ್ಯವೂ ಉಳ್ಳಂಥಾವರಿಗೆ ಮಾನವು ಮುಖ್ಯವಾದದ್ದೇ ಹೊರತು ಪ್ರಾಣವು ಮುಖ್ಯವಲ್ಲವೆಂಬ ತಾತ್ಪರ್ಯವು. ||೨೯||

ಶ್ಲೋ|| ಯದಚೇತನೋಪಿ ಪಾದೈಃ ಸ್ಪೃಷ್ಟಃ ಪ್ರಜ್ವಲತಿ ಸವಿತುರಿನಕಾಂತಃ || ತತ್ತೇಜಸ್ವೀ ಪುರುಷಃ ಪರಕೃತ ನಿಕೃತಿಂ ಕಥಂ ಸಹತೇ || ೩೦ ||

ಟೀಕು || ಯತ್- ಯಾವಕಾರಣದಪೆಸೆಯಿಂದ, ಅಚೇತನೋಪಿ ಚೇತನರಹಿತವಾದಂಥಾದ್ದಾದಾಗ್ಯೂದರೂ, ಇನಕಾಂತಃ- ಸೂರ್ಯಕಾಂತಮಣಿಯು, ಸವಿತುಃ- ಸೂರ್ಯನ, ಪಾದೈಃ- ಚರಣಗಳಿಂದ (ಅಥವಾ ಕಿರಣಗಳಿಂದ) ಸ್ಪೃಷ್ಟಃ-ಸ್ಪರ್ಶಮಾಡಲ್ಪಟ್ಟಂಥಾದ್ದಾಗಿ, ಪ್ರಜ್ವಲತಿ- ಜಾಜ್ವಲ್ಯಮಾನವಾಗುವಂಥಾದ್ದಾಗುವದೋ (ಕೋಪೋದ್ರಿಕ್ತವಾಗುವಂಥಾದ್ದಾಗುತ್ತದೋ) ತತ್- ಆ ಕಾರಣದಪೆಸೆಯಿಂದ, ತೇಜಸ್ವೀ- ತೇಜೋವಂತನಾದ, ಪುರುಷಃ - ಮನುಷ್ಯನು, ಪರಕೃತನಿಕೃತಿಂ- ಪರ- ಅನ್ಯರಿಂದ, ಕೃತ- ಮಾಡಲ್ಪಟ್ಟಂಥಾ, ನಿಕೃತಿಂ-ತಿರಸ್ಕಾರವನ್ನು. ಕಥಂ-ಹೇಗೆ, ಸಹತೇ-ಸಹಿಸುತ್ತಾನೆ? || ಕಾವ್ಯಾರ್ಥಾಪತ್ತಿರಲಂಕಾರಃ || ವೃತ್ತಮಾರ್ಯಾಭೇದಃ ||೩೦||

ತಾತ್ಪರ್ಯ—ಮಾನವಂತರಾದವರು ಪರರಿಂದ ಮಾಡಲ್ಪಟ್ಟ ಅವಮಾನವನ್ನು ಸಹಿಸುವದಿಲ್ಲವೆಂಬುವ ವಿಷಯವನ್ನು ಹೇಳುತ್ತಾನೆ. ಅಚೇತನವಾದ ಸೂರ್ಯಕಾಂತಮಣಿಯು ಸೂರ್ಯನ ಪಾದಸ್ಪರ್ಶದಿಂದ ಜಾಜ್ವಲ್ಯಮಾನವಾಗುತ್ತದೆ. ಅಂದರೆ ಸೂರ್ಯನಕಿರಣ ತಗಲಿದ ಕೂಡಲೆ ಬೆಂಕಿಯೋಪಾದಿಯಲ್ಲಿ ಉರಿಯುತ್ತದೆ, ಹೀಗಿರುವಲ್ಲಿ ಸರ್ವಾಗಮಿಸುವ ಶಕ್ತನಾದ ತೇಜಸ್ಸಿನಿಂದ ಕೂಡಿರುವ ಶೌರ್ಯಶಾಲಿಯಾದ ಮನುಷ್ಯನು ಪರರಿಂದ ಮಾಡಲ್ಪಟ್ಟ ಅವಮಾನವನ್ನು ಹೇಗೆ ತಾನೆ ಸಹಿಸಿಯಾನು? ಕಿರಣಗಳಿಗೆ ಪಾದಗಳೆಂಬ ಅರ್ಥವಿರುವದರಿಂದ ಸೂರ್ಯಕಾಂತಮಣಿಗಳಿಗೆ ಕಾಲಿನಿಂದ ತಗಲಿ

ಸಿದ್ದರಿಂದ ಕೋಪವುಂಟಾಗಿ ಜಾಜ್ವಲ್ಯಮಾನವಾದಂಥ ದ್ದಾಯಿತು, ಇದರಂತೆ ಮಾನ ಶೌರ್ಯಶಾಲಿಯಾದ ಮನುಷ್ಯನು ಪರರಿಂದ ಮಾಡಲ್ಪಟ್ಟ ಅವಮಾನವನ್ನು ಸಹಿಸಲಾರನೆಂದು ಭಾವವು. ||೩೦

ಇತಿ ಶೌರ್ಯಪದ್ಧತಿ ಸ್ಸಮಾಪ್ತಾ

—ಅಥ ಅರ್ಥಪದ್ಧತಿ ಪ್ರಾರಂಭಃ —

ಶ್ಲೋ॥ ಸಿಂಹಶ್ಶಿಶುರಪಿ ನಿಪತತಿ ಮದಮಲಿನಕಪೋಲಭಿತ್ತಿಷು
ಗಜೇಷು ॥ ಪ್ರಕೃತಿರಿಯಂ ಸತ್ತ್ವವತಾಂ ನಖಲು ವಯ
ಸ್ತೇಜಸಾಂ ಹೇತುಃ ॥ ೩೧ ॥

ಟೀಕು ॥ ಸಿಂಹಃ- ಸಿಂಹವು, ಶಿಶುರಪಿ- ಮರಿಯಾದರೂ ಕೂಡ, ಮದ ಮಲಿನ ಕಪೋಲಭಿತ್ತಿಷು, ಮದ - ಮದದಿಂದ, ಮಲಿನ - ಕಪ್ಪಾದಂಥಾ, ಕಪೋಲಭಿತ್ತಿಷು- ಭಿತ್ತಿಸದೃಶವಾದ ಕಪೋಲಸ್ಥಳಗಳುಳ್ಳಂಥಾ, ಗಜೇಷು ಆನೆಗಳಲ್ಲಿ, ನಿಪತತಿ- ಬೀಳುತ್ತದೆ, ಸತ್ತ್ವವತಾಂ- ಬಲಶಾಲಿಗಳಿಗೆ, ಇಯಂ- ಇದು ಪ್ರಕೃತಿಃ- ಸ್ವಭಾವವು, ವಯಃ- ವಯಸ್ಸೇ, ತೇಜಸಾಂ - ತೇಜಸ್ಸುಗಳಿಗೆ, ಹೇತುಃ- ಕಾರಣವಾದಂಥಾದ್ದು, ನಖಲು ಆಗುವದಿಲ್ಲ, । ವೃತ್ತ: ಮಾರ್ಯಾಭೇದಃ ॥ ಸ್ವಭಾವೋಕ್ತಿರಲಂಕಾರಃ ॥ (ಮಾನನಂತರ ಸುಸ್ವಭಾವವನ್ನು ಹೇಳುತ್ತಾನೆ) ॥ ೩೧ ॥

ತಾತ್ಪರ್ಯ—ಸಿಂಹದಮರಿಯು ಕೂಡ ಮದಿಸಿದ ಆನೆಯ ಕುಂಭಸ್ಥಳದ ಮೇಲೆಬಿದ್ದು ಕುಂಭಸ್ಥಳವನ್ನು ಸೀಳುತ್ತದೆ. ಬಲಶಾಲಿಗಳಾದಂಥಾ ವರುಗಳಿಗೆ ವಯಸ್ಸಿನ ಶಕ್ತಿಯು ಪ್ರಾಧಾನ್ಯವಾದದ್ದಲ್ಲ ಎಂಬ ಭಾವವು.

ಶ್ಲೋ॥ ಜಾತಿರ್ಯಾತು ರಸಾತಲಂ ಗುಣಗಣಸ್ತತ್ರಾಪ್ಯ
ಧೋಗಚ್ಛತಾಂ ಶೀಲಂ ಶೈಲತಟಾತ್ಪತತ್ವಭಿಜನಸ್ಸಂ
ದಹ್ಯತಾಂ ವಹ್ನಿನಾ ॥ ಶೌರ್ಯೇ ವೈರಿಣಿ ವಜ್ರಮಾ
ಶು ನಿಪತತ್ವರ್ಥೋಽಸ್ತು ನಃ ಕೇವಲಂ ಯೇನೈಕೇನ ವಿ
ನಾ ಗುಣಾಸ್ತೃಣಲವ ಪ್ರಾಯಾಸ್ಸಮಸ್ತಾ ಇಮೇ ॥

ಟೀಕು ॥ ಜಾತಿಃ- ಬ್ರಾಹ್ಮಣಾದಿಜಾತಿಯು, ರಸಾತಲಂ- ನಾಗಲೋಕವನ್ನು ಅಥವಾ ಪಾತಾಳಲೋಕವನ್ನು. ಯಾತು - ಹೊಂದಲಿ, ಗುಣಗಣಃ -

ಗುಣ - ಶೌರ್ಯೌದಾರ್ಯಾದಿ ಗುಣಗಳ, ಗಣಃ- ಸಮೂಹವು ತತ್ರಾಪಿ - ಆಸ್ಥಾ ತಾಳಲೋಕಕ್ಕಂತಲೂ, ಅಧಃ - ಕೆಳಗಡೆಯಲ್ಲಿ, ಗಚ್ಛತಾಂ - ಹೋಗಲಿ, ಶೀಲಂ ಸದ್ವೃತ್ತಿಯು, ಶೈಲತಟಾತ್-ಪರ್ವತದಗಟ್ಟಿನದೆಸೆಯಿಂದ, ಪತತು ಬೀಳಲಿ, ಅಭಿಜನಃ- ವಂಶವೂ, ವಹ್ನಿನಾ- ಯಜ್ಞೇಶ್ವರನಿಂದ (ಅಗ್ನಿಯಿಂದ) ಸಂದಹ್ಯತಾಂ- ದಹಿಸಲ್ಪಡಲಿ, ವೈರಿಣಿ- ಶತ್ರುಪ್ರಾಯವಾದಂಥ, ಶೌರ್ಯೇ- ಪರಾಕ್ರಮದಲ್ಲಿ, ಆಶು - ಜಾಗ್ರತೆಯಾಗಿ, ವಜ್ರಂ - ವಜ್ರಾಯುಧವು ನಿಪತತು - ಬೀಳಲಿ, ನಃ - ನಮ್ಮಗಳಿಗೆ, ಕೇವಲಂ - ಮುಖ್ಯವಾಗಿ ಅರ್ಥಃ - ದ್ರವ್ಯವು. ಅಸ್ತು - ಆಗಲಿ, ಏಕೇನ- ಮುಖ್ಯವಾದಂಥಾ, ಯೇನ- ಯಾವ ದ್ರವ್ಯದಿಂದವಿನಾ, ಸಮಸ್ತಾಃ- ಸಮಸ್ತಗಳಾದಂಥ, ಇಮೇ- ಈ ಪೂರ್ವೋಕ್ತಗಳಾದ, ಗುಣಾಃ- ಶೌರ್ಯದಾಯಾದಿಗುಣಗಳು, ತೃಣಲವಪ್ರಾಯಾಃ, ತೃಣ- ಹುಲ್ಲಿನ, ಲವ - ತುಂಡುಗಳ, ಪ್ರಾಯಾಃ - ಸಮಾನಗಳ ದಂಥಾವುಗಳು, ಭವಂತಿ ಆಗುತ್ತವೆ. ॥ ಶಾರ್ದೂಲವಿಕ್ರೀಡಿತ ವೃತ್ತಂ ॥೩೨॥

ತಾತ್ಪರ್ಯ-ಪ್ರಸಂಗಸಂಗತಿಯಿಂದ ಮಾನ ಶೌರ್ಯಾಪೇಕ್ಷೆಯು ಅರ್ಥವೇ ಅತ್ಯುತ್ತಮವೆಂಬುದನ್ನು ಹೇಳುತ್ತಾನೆ. ಹೇಗೆಂದರೆ:—ಮನುಷ್ಯರಲ್ಲಿ ಬ್ರಾಹ್ಮಣಾದ್ಯುತ್ತಮ ಜಾತಿಯು ಒಳ್ಳೆಶೌರ್ಯ, ಉದಾರತ್ವ ಮೊದಲಾದ ಗುಣಗಳು ಸ್ವಭಾವಸಿದ್ಧಾಗಿ ಈ ಮೊದಲಾದವುಗಳಿಗೆಲ್ಲಾ ದ್ರವ್ಯಹೀನನಾದ ಪುರುಷನಿಗೆ ಹುಲ್ಲಿನ ಚೂರುಗಳೋಪಾದಿಯಲ್ಲಿ ನಿಷ್ಪ್ರಯೋಜನವಾದದ್ದು. ದ್ರವ್ಯವಿಲ್ಲದ ಮನುಷ್ಯನ ಗುಣಗಳು ಶೌರ್ಯವಿದ್ಯಾ ವಿನಯ ಸಂಪತ್ತು ಸದ್ವಂಶ ಮುಂತಾದ ಗುಣಗಳು ನಿಷ್ಪ್ರಯೋಜನವೆಂದು ಭಾವವು. ॥೩೨॥

ಶ್ಲೋ॥ ಯಸ್ಯಾಸ್ತಿವಿತ್ತಂಸನರಃ ಕುಲೀನಸ್ಸಪಂಡಿತಸ್ಸಶ್ರುತವಾನ್ಗುಣಜ್ಞಃ ॥ ಸಏವವಕ್ತಾಸಚದರ್ಶನೀಯ ಸ್ಸರ್ವೇಗುಣಾಃ ಕಾಂಚನಮಾಶ್ರಯಂತೇ ॥೩೩॥

ಟೀಕು ॥ ಯಸ್ಯ- ಯಾವಮನುಷ್ಯನಿಗೆ, ವಿತ್ತಂ - ದ್ರವ್ಯವು, ಅಸ್ತಿ- ಇದೆಯೋ, ಸನರಃ- ಆ ಮನುಷ್ಯನು, ಕುಲೀನಃ - ಯೋಗ್ಯವಾದ ವಂಶದಲ್ಲಿ ಹುಟ್ಟಿದವನು ಸಃ- ಆ ಮನುಷ್ಯನು, ಪಂಡಿತಃ - ವಿದ್ವಾಂಸನು, ಸಃ - ಆ ಮನುಷ್ಯನು, ಶ್ರುತವಾನ್- ಬಹು ಧರ್ಮಶಾಸ್ತ್ರಗಳನ್ನು ತಿಳಿದಂಥಾವನು, ಸಃ- ಆ ಮನುಷ್ಯನು, ಗುಣಜ್ಞಃ- ಗುಣಗಳನ್ನು ತಿಳಿದಂಥಾವನು, ಸಏವ-

ಆ ಮನುಷ್ಯನೇ, ವಕ್ತಾ- ವಾಗ್ಮಿಯಾದಂಥಾವನು, ಸಚ- ಆ ಮನುಷ್ಯನೇ ದರ್ಶನೀಯಃ- ಸರ್ವರೂ ನೋಡುವದಕ್ಕೆ ಸುಂದರನಾದಂಥಾ ಯೋಗ್ಯನು ಸರ್ವೇ - ಸಮಸ್ತವಾದಂಥಾ, ಗುಣಾಃ - ವಿದ್ಯಾಸಾಶೀಲ್ಯಾದಿ ಗುಣಗಳು. ಕಾಂಚನಂ ಸುವರ್ಣವನ್ನು, ಆಶ್ರಯಂತೆ. ಅನುಸರಿಸಿ ಕೊಂಡಿರುತ್ತವೆ. ॥ ಅತಿಶಯೋಕ್ತ್ಯಲಂಕಾರಃ । ವೃತ್ತಮುಪಜಾತಿಃ ॥ ೩೩ ॥

ತಾತ್ಪರ್ಯ—ದ್ರವ್ಯವಂತನು ಎಲ್ಲರಿಗಿಂತಲೂ ಉತ್ತಮನೆಂಬುವದನ್ನು ಹೇಳುತ್ತಾನೆ:-ಯಾವಮನುಷ್ಯನಲ್ಲಿ ಹಣವಿರುತ್ತದೋ ಆಮನುಷ್ಯನು ಕುಲಹೀನನಾಗಿದ್ದರೂ, ಅವನನ್ನು ಸರ್ವರೂಯೋಗ್ಯನೆಂದು ಹೇಳುತ್ತಾರೆ ಅಲ್ಲದೆ ಅವನೇ ಪಂಡಿತನು, ಅವನೇ ಧರ್ಮಶಾಸ್ತ್ರವೇತ್ತನು ಆ ಮನುಷ್ಯನೇ ವಾಗ್ಮಿಯಾದಂಥಾವನು ಸರ್ವಜನರೂ ಅವನನ್ನೇ ನೋಡುತ್ತಾರೆ. ಆವನೇ ವಿದ್ವಾಂಸನು ಅವನೇ ಸುಂದರವಾದ ರೂಪವಂತನು, ವಿಕಂಚರ-ಲೋಕದಲ್ಲಿ ಸಮಸ್ತವಾದ ಗುಣಗಳೂ ದ್ರವ್ಯವನ್ನು ಆಶ್ರಯಿಸಿಕೊಂಡಿರುವವರಿಂದ ದ್ರವ್ಯವಿರುವವನು ಎಲ್ಲರಿಗಿಂತಲೂ ಉತ್ತಮನೆಂಬ ಅಭಿಪ್ರಾಯವು. ॥೩೩॥

ಶ್ಲೋ॥ ದೌರ್ಮಂತ್ರಾನ್ನೃಪತಿರ್ವಿನಶ್ಯತಿಯತಿಸ್ಸಂಗಾತ್ಸುತೋಲಾಲನಾದ್ವಿಪ್ರೋನಧ್ಯಯನಾತ್ಕುಲಂಕುತನಯಾಚ್ಛೀಲಂಖಲೋಪಾಸನಾತ್ । ಹ್ರೀರ್ಮದ್ಯಾದನವೇಕ್ಷಣಾದಪಿ ಕೃಷಿಃ ಸ್ನೇಹಃ ಪ್ರವಾಸಾಶ್ರಯಾನ್ಮೈತ್ರೀಚಾಪ್ರಣಯಾತ್ಸಮೃದ್ಧಿರನಯಾತ್ತ್ಯಾಗಾತ್ಪ್ರಮಾದಾದ್ಧನಮ್ ॥೩೪॥

ಟೀಕಾ ॥ ನೃಪತಿಃ- ರಾಜನು, ದೌರ್ಮಂತ್ರ್ಯಾತ್ ದುರ್ಮಂತ್ರಾಲೋಚನೆಯುಡೆಸೆಯಿಂದ, ವಿನಶ್ಯತಿ- ನಾಶವಾಗುತ್ತಾನೆ, ಯತಿಃ- ಸಂನ್ಯಾಸಿಯು ಸಂಗಾತ್ - ಮತ್ತೊಬ್ಬರ ಜೊತೆಯುಡೆಸೆಯಿಂದ, ವಿನಶ್ಯತಿ - ನಾಶವಾಗುತ್ತಾನೆ, ಸುತಃ- ಮಗನೂ, ಲಾಲನಾತ್- ಮುದ್ದಿಸೋಣದೆಸೆಯಿಂದ, ವಿನಶ್ಯತಿ- ಕೆಟ್ಟುಹೋಗುತ್ತಾನೆ, ವಿಪ್ರಃ ಬ್ರಾಹ್ಮಣನು, ಅನಧ್ಯಯನಾತ್-ಅಧ್ಯಯನವಮಾಡದೆ ಹೋಗೋಣದರದೆಸೆಯಿಂದ, ವಿನಶ್ಯತಿ - ಕೆಟ್ಟುಹೋಗುತ್ತಾನೆ, ಕುಲಂ- ವಂಶವು, ಕುತನಯಾತ್- ಕುತ್ಸಿತನಾದ ಮಗನದೆಸೆಯಿಂದ ವಿನಶ್ಯತಿ- ಕೆಟ್ಟುಹೋಗುತ್ತದೆ, ಶೀಲಂ- ಒಳ್ಳೆಸದ್ವೃತ್ತಿಯು, ಖಲೋಪಾ

ಸನಾತ್- ಖಲ- ದುರ್ಜನರ, ಉಪಾಸನಾತ್- ಸಂಗದ ದೆಸೆಯಿಂದ, ವಿನಶ್ಯತಿ ಕೆಟ್ಟುಹೋಗುತ್ತದೆ. ಹ್ರೀಃ- ಲಜ್ಜೆಯು, ಮದ್ಯಾತ್- ಮದ್ಯಾತ್- ಮದ್ಯಪಾನದದೆಸೆಯಿಂದ, ವಿನಶ್ಯತಿ ಕೆಟ್ಟುಹೋಗುತ್ತದೆ, ಕೃಷಿರಪಿ- ವ್ಯವಸಾಯವೂ ಕೂಡ, ಅನವೇಕ್ಷಣಾತ್ - ನೋಡದೆ ಇರೋಣದದೆಸೆಯಿಂದ, ವಿನಶ್ಯತಿ- ಕೆಟ್ಟುಹೋಗುತ್ತದೆ. ಸ್ನೇಹಃ- ವಿಶ್ವಾಸವು, ಪ್ರವಾಸಾಶ್ರಯಾತ್. ಪ್ರವಾಸ ದೇಶಾಂತರವನ್ನು, ಆಶ್ರಯಾತ್ - ಆಶ್ರಯಿಸೋಣದರ ದೆಸೆಯಿಂದ, ವಿನಶ್ಯತಿ ಕೆಟ್ಟುಹೋಗುತ್ತದೆ, ಪ್ರೀತಿರಪಿ ಸ್ನೇಹವೂಕೂಡ, ಅಪ್ರಣಯಾತ್ ಉದಾಸೀನತೆಯದೆಸೆಯಿಂದ, ವಿನಶ್ಯತಿ- ಕೆಟ್ಟುಹೋಗುತ್ತದೆ, ಸಮೃದ್ಧಿಃ- ಸಂಪತ್ತು, ಅನಯಾತ್ - ದುರ್ನೀತಿಯದೆಸೆಯಿಂದ, ವಿನಶ್ಯತಿ - ನಾಶವಾಗಿ ಹೋಗುತ್ತದೆ ಧನಂ- ದ್ರವ್ಯವು, ತ್ಯಾಗಾತ್ - ದಾನದದೆಸೆಯಿಂದಲೂ, ಪ್ರಮಾದಾತ್- ಮತ್ತತೆಯಿಂದಲೂ, ವಿನಶ್ಯತಿ - ನಾಶವಾಗಿ ಹೋಗುತ್ತದೆ.

ತಾತ್ಪರ್ಯ — ದುಷ್ಟಮಂತ್ರಿಗಳೊಡನೆ ಮಂತ್ರಾಲೋಚನೆಯನ್ನು ಮಾಡಿದ ರಾಜನು ಕೆಟ್ಟುಹೋಗುವನು, ಮತ್ತೊಬ್ಬರ ಸಂಗವನ್ನು ಮಾಡಿದ ಸಂನ್ಯಾಸಿಯು ಅಂದರೆ ಒಬ್ಬನೇ ತಪಸ್ಸನ್ನು ಮಾಡದೆ ಮತ್ತೊಬ್ಬರ ಜೊತೆಯನ್ನು ಮಾಡಿಕೊಂಡ ಸಂನ್ಯಾಸಿಯು ಕೆಟ್ಟುಹೋಗುವನು. ಮಕ್ಕಳನ್ನು ಹೆಚ್ಚಾಗಿ ಮುದ್ದಿಸಿದರೆ ಆ ಮಕ್ಕಳು ಕೆಟ್ಟುಹೋಗುವರು, ಅಧ್ಯಯನವನ್ನು ಮಾಡದೆ ಇರತಕ್ಕ ಬ್ರಾಹ್ಮಣನು ಕೆಟ್ಟುಹೋಗುವನು, ದುಷ್ಟನಾದ ಮಗನ ದೆಸೆಯಿಂದ ವಂಶವುಕೆಟ್ಟುಹೋಗುವದು, ಒಳ್ಳೆಸದ್ವೃತ್ತಿ ಅಂದರೆ ಒಳ್ಳೆ ಆಚಾರವು ದುರ್ಜನರ ಸಹವಾಸದಿಂದ ಕೆಡುವದು. ಮದ್ಯಪಾನಮಾಡೋಣದರ ದೆಸೆಯಿಂದ ಲಜ್ಜೆಯು ತ್ಯಾಗವಾಗುವದು. ವ್ಯವಸಾಯವನ್ನು ಮಾಡಿ ನೋಡದೆ ಇದ್ದರೆ ನಾಶವಾಗುವದು. ದೂರದೇಶಕ್ಕೆಹೋಗೋಣದರಿಂದ ಸ್ನೇಹವು ನಾಶನವಾಗುವದು. ವಿಶ್ವಾಸವು ಉದಾಸೀನತೆಯ ದೆಸೆಯಿಂದ ನಾಶವಾಗುವದು. ಸಂಪತ್ತು ಮತ್ತತೆಯಿಂದ ನಾಶವಾಗುವದು. ದ್ರವ್ಯವು ಕೊಡೋಣದರಿಂದಲೂ ಪ್ರಮಾದದದೆಸೆಯಿಂದಲೂ ನಾಶವಾಗುವದು ಆದ್ದರಿಂದ ಜಾಗರೂಕರಾಗಿರಬೇಕೆಂದು ಭಾವವು.

ಶ್ಲೋ|| ದಾನಂಭೋಗೋನಾಶಸ್ತಿಸ್ರೋಗತಯೋಭವಂತಿವಿತ್ತಸ್ಯ || ಯೋನದದಾತಿನಭುಂಕ್ತೇತಸ್ಯತೃತೀಯಾಗತಿರ್ಭವತಿ || ೩೫ ||

• ಟೀಕು॥ ವಿತ್ತಸ್ಯ- ದ್ರವ್ಯಕ್ಕೆ, ದಾನಂ-ಕೊಡುವುದೂ, ಭೋಗಃ ಸುಖ ವೂ, ನಾಶಃ-ನಾಶವಾಗೋಣವೂ, ತಿಸ್ರಃ-ಮೂರುವಿಧವಾದ, ಗತಯಃ-ದಾರಿ ಗಳು, ಭವಂತಿ ಇವೆ, ಯಃ ಯಾವ ಮನುಷ್ಯನು ನದದಾತಿ-ಕೊಡುವದಿಲ್ಲವೊ ನಭುಂಕ್ತೇ-ತಾನು ಅನುಭವಿಸುವದಿಲ್ಲವೊ, ತಸ್ಯ-ಆದ್ರವ್ಯಕ್ಕೆ, ತೃತೀಯಾ-ಮೂರನೆಯದಾದ ಗತಿಃ - ದಾರಿಯು, ಭವತಿ - ಆಗುತ್ತದೆ, ॥ ವೃತ್ತಮಾ ಯಾರ್ಭೇದಃ ॥೩೫॥

ತಾತ್ಪರ್ಯ— ಮನುಷ್ಯನು ಸಂಪಾದನೆ ಮಾಡಿದ ದ್ರವ್ಯಕ್ಕೆ ಮೂರು ವಿಧವಾಗಿ ವಿನಿಯೋಗವುಂಟು ಅದು ಹೇಗೆಂದರೆ:-ದಾನ, ಭೋಗ, ನಾಶ (೧) ಕಳ್ಳರು ತೆಗೆದುಕೊಂಡು ಹೋಗುವದು, ಎಂದು ಈ ಮೂರು ವಿಧಗಳುಂಟು. ಇದರಲ್ಲಿ ದಾನ ಭೋಗಾದಿಗಳು ವರ್ಜವಾದರೆ ಮೂರನೆಯದಾದ ತೃತೀಯಗತಿ ಅಂದರೆ ನಾಶವಾಗುವದು, ಇದ್ದಕಡೆಯಲ್ಲೇ ಹೋಗುವದು, ಕಳ್ಳರು ಕದ್ದುಕೊಂಡು ಹೋಗುವರೆಂದು ಭಾವವು. ॥೩೫॥

ಶ್ಲೋ॥ ಮಣಿಶ್ಶಾಣೋಲ್ಲೀಢಸ್ಸಮರವಿಜಯೀಹೇತಿದಳಿತೋ ಮದಕ್ಷೀಣೋನಾಗಶ್ಶರದಿಸರಿದಾಶ್ಯಾನಪುಲಿನಾ॥ ಕಳಾಶೇಷಶ್ಚಂದ್ರಸ್ಸುರತಮೃದಿತಾಬಾಲವನಿತಾತನಿಮ್ನಾ ಶೋಭಂತೇಗಳಿತವಿಭವಾಶ್ಚಾರ್ಥಿಷುನರಾಃ ॥ ೩೬ ॥

ಟೀಕು॥ ಶಾಣೋಲ್ಲೀಢಃ, ಶಾಣ- ಸಾಣೆಯಂತ್ರದಿಂದ, ಉಲ್ಲೀಢಃ - ಸಾಣೆಹಿಡಿಸಲ್ಪಟ್ಟ, ಮಣಿ - ರತ್ನವು ಹೇತಿದಳಿತಃ, ಹೇತಿ - ಆಯುಧದಿಂದ, ದಳಿತಃ-ಸೀಳಲ್ಪಟ್ಟ, ಸಮರವಿಜಯೀ, ಸಮರ-ಯುದ್ಧದಲ್ಲಿ, ವಿಜಯೀ- ಜಯಶೀಲನಾದವನು, ಮದಕ್ಷೀಣಃ, ಮದ-ಮದದಿಂದ, ಕ್ಷೀಣಃ- ಸಣ್ಣಗಾದ, (ಅಥವಾ ಪರಿಕ್ಷೀಣವಾದಂಥ) ನಾಗಃ-ಆನೆಯು, ಶರದಿ- ಶರತ್ಕಾಲದಲ್ಲಿ, ಆಶ್ಯಾನಪುಲಿನಾ, ಆಶ್ಯಾನ- ಕೊಂಚವಾಗಿವೊಣಗಿಹೋದ, ಪುಲಿನಾ - ಮರಳು ದಿಬ್ಬಗಳುಳ್ಳಂಥಾ, ಸರಿತ್ -ನದಿಯು, ಕಳಾಶೇಷಃ, ಕಳಾ-ಒಂದು ಕಳೆಯಿಂದ, ಶೇಷಃ-ಮಿಕ್ಕಂಥಾ, ಚಂದ್ರಃ- ಚಂದ್ರನು, ಸುರತಮೃದಿತಾ, ಸುರತ- ರತಿಯಿಂದ, ಮೃದಿತಾ-ವಿಹ್ವಲಳಾದಂಥ, ಬಾಲವನಿತಾ, ಬಾಲಸ್ತ್ರೀಯು, (ಅಥವಾ ಪ್ರೌಢಸ್ತ್ರೀಯು,) ಅರ್ಥಿಷು ಯಾಚಕಜನಗಳಲ್ಲಿ-ಗಳಿತವಿಭವಾಃ, ಗಳಿತ- ಕೊಡಲ್ಪಟ್ಟ, ವಿಭವಾಃ ಐಶ್ವರ್ಯವುಳ್ಳ, ನರಾಃ-ಮನುಷ್ಯರು, ತನಿಮ್ನಾ-ತನುಭಾವದಿಂದ, ಶೋಭಂತೇ-ಪ್ರಕಾಶಿಸುತ್ತಾರೆ ॥ದೀಪಕಾಲಂಕಾರಃ॥ಶಿಖರಿಣೀವೃತ್ತಂ ॥

ತಾತ್ಪರ್ಯ—ದಾನಶೀಲನಾದ ಮನುಷ್ಯನು ದ್ರವ್ಯವಿಲ್ಲದೆ ಯಿದ್ದಾಗ್ಯೂ ಪ್ರಕಾಶಿಸುತ್ತಾನೆಂಬುವದನ್ನೇ ಹೇಳುತ್ತಾನೆ - ಹೇಗಂದರೆ. ಸಾಣೆ ಹಿಡಿಸಿದ ರತ್ನವು. ಆಯುಧದ ಪೆಟ್ಟಿನಿಂದ ಗಾಯವಡೆದ ಜಯಶೀಲನು. ಮದವಳಿದ ಆನೆಯು ಶರತ್ಕಾಲದಲ್ಲಿ ಕೊಂಚವಾಗಿ ಮರಳುಗಳುಳ್ಳ ನದಿಯು ಕಳಾವಶೇಷಿತನಾದ ಚಂದ್ರನು ಸುರತಶ್ರಮವನ್ನು ಹೊಂದಿದ ಪ್ರೌಢನಾಯಿಕೆಯು ಯಾಚಕರ ಪಾಲುಮಾಡಿದ ಧನವಂತನು. ಇವರೆಲ್ಲರೂ ತನುಭಾವದಿಂದ ಅಂದರೆ ಅಲ್ಪತ್ವದಿಂದ ಪ್ರಕಾಶರಾಗಿ ಯಿರುತ್ತಾರೆಂದು ಭಾವವು.

ಶ್ಲೋ॥ ಪರಿಕ್ಷೀಣಃಕಶ್ಚಿತ್ಸ್ಪೃಹಯತಿಯವಾನಾಂ ಪ್ರಸೃತಯೇ ಸಪಶ್ಚಾತ್ಸಂಪೂರ್ಣಃ ಕಲಯತಿ ಧರಿತ್ರೀಂ ತೃಣಸಮಾಂ ॥ ಅತಶ್ಚಾನೇಕಾಂತ್ರಾಗುರು ಲಘುತಯಾರ್ಥೇಷುಧನಿನಾಮವಸ್ಥಾವಸ್ತೂನಿಪ್ರಥಯತಿ ಚಸಂಕೋಚಯತಿಚ ॥ ೩೭ ॥

ಟೀಕು ॥ ಪರಿಕ್ಷೀಣಃ- ದರಿದ್ರನಾದ. ಕಶ್ಚಿತ್- ಒಬ್ಬನೊಬ್ಬ ಮನುಷ್ಯನು, ಯವಾನಾಂ ತಂಡುಲಭೇದಧಾನ್ಯಗಳ. ಪ್ರಸೃತಯೇ- ಸೇರೆಗೋಸ್ಕರ, ಸ್ಪೃಹಯತಿ- ಅಪೇಕ್ಷಿಸುತ್ತಾನೆ, ಪಶ್ಚಾತ್-ಅನಂತರದಲ್ಲಿ, ಸಂಪೂರ್ಣಃ-ಸಂಪನ್ನನಾದ, ಸಃ ಅಮನುಷ್ಯನು, ಧರಿತ್ರೀಂ ಭೂಮಿಯನ್ನು, ತೃಣಸಮಾಂ, ತೃಣ- ಹುಲ್ಲಿಗೆ, ಸಮಾಂ- ಸಮಾನದನ್ನಾಗಿ ಕಲಯತಿ - ಮಾಡುತ್ತಾನೆ. ಅಂದರೆ- ತಿಳಿಯುತ್ತಾನೆ ಅತಃ- ಆ ಕಾರಣದಪಸೆಯಿಂದ. ಧನಿನಾಂ - ಧನವಂತರ, ಅವಸ್ಥಾ- ರೀತಿಯು, ಅರ್ಥೇಷು- ಪ್ರಯೋಜನದಲ್ಲಿ. ಗುರುಲಘುತಯಾ-ಗುರುತ್ವದಿಂದ, ವಸ್ತೂನಿ-ಪದಾರ್ಥಗಳನ್ನು ಪ್ರಥಯತಿ -ವಿಸ್ತಾರಮಾಡುತ್ತೆ, ಸಂಕೋಚಯತಿಚ - ಸಂಕೋಚನನ್ನೂ ಉಂಟು ಮಾಡುತ್ತೆ. ॥ ಶಿಖರಿಣೀ ವೃತ್ತಂ ॥೩೭॥

ತಾತ್ಪರ್ಯ—ದರಿದ್ರನಾದ ಮನುಷ್ಯನು ಒಂದು ಸೇರೆ ನವೆ ಎಂಬುವ ಧಾನ್ಯ ಸಿಕ್ಕಿದರೆ ಸಾಕೆಂದುಯಿರುತ್ತಾನೆ. ಆ ಮನುಷ್ಯನು ಧನವಂತನಾದರೆ ಮಹತ್ತಾದ ಭೂಮಂಡಲವನ್ನೂ ಹುಲ್ಲುಕಡ್ಡಿಗೆ ಸಮಾನವಾಗಿ ಕಾಣುತ್ತಾನೆ. ನೀಚನಾದ ಧನವಂತನು ವಸ್ತುಗಳಲ್ಲಿ ಗುರುಲಘುಗಳ ವ್ಯತ್ಯಾಸವನ್ನುಂಟು ಮಾಡುತ್ತಾನೆಂದು ಭಾವವು, ಅಂದರೆ ಮೊದಲು ದರಿ

ದ್ರನಾಗಿದ್ದಾಗ ಒಂದುಸೇರೆ ಸಿಕ್ಕಿದರೆ ಸಾಕೆಂದು ಇರುತ್ತಾನೆ, ಅವನು ಒಂದುವೇಳೆ ಧನವಂತನಾದರೆ ಅಹಂಕಾರದಿಂದ ಭೂಮಿಯನ್ನು ಹುಲ್ಲಿಗೆ ಸಮವಾಗಿ ನೋಡುತ್ತಾನೆಂದು ಭಾವವು. ||೨೭||

ಶ್ಲೋ|| ರಾಜನ್ದುಧುಕ್ಷಸಿಯದಿಕ್ಷಿತಿಧೇನುಮೇನಾಂತೇನಾದ್ಯ ವತ್ಸಮಿವಲೋಕಮಮುಂಪುಷಾಣ || ತಸ್ಮಿಂಶ್ಚಸಮ್ಯಗನಿಶಂಪರಿಪುಷ್ಯಮಾಣೇನಾನಾಫಲಂ ಫಲತಿಕಲ್ಪಲತೇವಭೂಮಿಃ || ೨೮ ||

ಟೀಕು || ಹೇರಾಜನ್-ಎಲೈ ಧೊರೆಯೆ, ಏನಾಂ ಈಪುರೋವರ್ತಿಯಾದ, ಕ್ಷಿತಿಧೇನುಂ ಕ್ಷಿತಿ- ಭೂಮಿಯೆಂಬುವಂಥಾ, ಧೇನುಂ ಗೋವನ್ನು, ದುಧುಕ್ಷಸಿಯದಿ-ಕರೆಯುವಂಥಾವನೇ ಆದರೆ, ತೇನ-ಅದರಿಂದ, ಅದ್ಯ ಈಗ, ವತ್ಸಮಿವ- ಕರುವನ್ನೋಪಾದಿಯಲ್ಲಿ, ಅಮುಂ- ಈ, ಲೋಕಂ ಪ್ರಪಂಚವನ್ನು ಅನ್ನವಾ ಜನವನ್ನು, ಪುಷಾಣ- ಪೋಷಿಸು, ಅನಿಶಂ- ಯಾವಾಗಲೂ, ತಸ್ಮಿಂಶ್ಚ- ಆತೋಕವೂ ಕೂಡ, ಸಮ್ಯಕ್- ಚನ್ನಾಗಿ, ಪರಿಪುಷ್ಯಮಾಣೇಸತಿ- ಪೋಷಿತವ ದಂಥಾದವ್ದಾಗುತಿರಲಾಗಿ, ಕಲ್ಪಲತೇವ, ಕಲ್ಪ-ಕಲ್ಪವೃಕ್ಷದ, ಲತೇವ- ಬಳ್ಳಿಯೋಪಾದಿಯಲ್ಲಿ (ಅಂದರೆ ಕಲ್ಪವೃಕ್ಷದೋಪಾದಿಯಲ್ಲಿ) ನಾನಾ ಫಲಂ, ನಾನಾ-ಅನೇಕಗಳಾದ, ಫಲಂ- ಫಲವನ್ನು, ಭೂಮಿಃ- ಭೂಮಿಯು, ಫಲತಿ- ಫಲಿಸುತ್ತತೆ ||೨೮||

ತಾತ್ಪರ್ಯ—ರಾಜನಿಗೆ ಸಂಬೋಧನೆ ಮಾಡುವವನಾಗಿ ದ್ರವ್ಯಾರ್ಜನೆಯ ಉಪಾಯವನ್ನು ಹೇಳುತ್ತಾನೆ. ಹೇಗಂದರೆ.-ಎಲೈ ರಾಜನೆ ಭೂಮಿಯೆಂಬುವ ಹಸುವನ್ನು ಕರೆ ಅಂದರೆ ಭೂಮಿಯಲ್ಲಿ ದ್ರವ್ಯಸಂಪಾದನೆಮಾಡು ಹಾಲಿನಿಂದ ಕರಗಳನ್ನು ಪೋಷಣೆ ಮಾಡಿದಹಾಗೆ ಪ್ರಜೆಗಳನ್ನು ಆ ದ್ರವ್ಯದಿಂದ ಪೋಷಣೆಮಾಡು. ಕರುಗಳು ಇಲ್ಲದೆಹೋದರೆ ಹಸುವು ಹೇಗೆ ಹಾಲುಕೊಡುವದಿಲ್ಲವೋ, ಪ್ರಜೆಗಳನ್ನು ಪೋಷಣೆಮಾಡದೆ ಹೋದರೆ ರಾಜನಿಗೆ ಹಾಗೆ ಹಣವಿಲ್ಲ. ಪ್ರಜೆಗಳು ದೊರೆಯಿಂದ ಚನ್ನಾಗಿ ಸಂರಕ್ಷಿಸಲ್ಪಟ್ಟವರಾದರೆ ರಾಜನಿಗೆ ಬೇಕಾದ ಫಲವನ್ನು ಉಂಟುಮಾಡುತ್ತಾರೆಂಬ ಭಾವವು. ಉಪಮೋತ್ಥಾಪಿತ ಪರಿಣಾಮಾಲಂಕಾರಃ || ವಸಂತತಿಲಕಾ ವೃತ್ತಂ || ||೨೮||

ಶ್ಲೋ॥ ಸತ್ಯಾನೃತಾಚಪರುಷಾ ಪ್ರಿಯವಾದಿನೀಚ। ಹಿಂಸ್ರಾ
ದಯಾಳುರಪಿಚಾರ್ಥ ಪರಾವದಾನ್ಯಾ ॥ ನಿತ್ಯವ್ಯಯಾ
ಪ್ರಚುರ ನಿತ್ಯಧನಾಗಮಾಚ। ವಾರಾಂಗನೇವನೃಪ
ನೀತಿರನೇಕರೂಪಾ ॥ ೩೯ ॥

ಟೀಕು॥ ಸತ್ಯಾ- ಯಥಾರ್ಥವಾದಳೂ, ಅನೃತಾಚ- ಅಸತ್ಯವಾದಿಯೂ, ಪರುಷಾ-ಕಠಿನವಾದ ಮಾತುಗಳನ್ನು ಆಡುವಂಥ, ಪ್ರಿಯವಾದಿನೀಚ, ಪ್ರಿಯ- ಹಿತವಾದ ಮಾತುಗಳನ್ನು, ವಾದಿನೀಚ- ಹೇಳುತ್ತಲಿರುವ, ಹಿಂಸ್ರಾ- ಹಿಂಸಾಕರವಾದ, ದಯಾಳುರಪಿಚ-ಕೃಪೆಯುಳ್ಳಂಥ , ಅರ್ಥಪರಾ- ದ್ರವ್ಯಾಕರ್ಷಣೆಯನ್ನು ಮಾಡುವ, ವದಾನ್ಯಾ - ಅತಿತ್ಯಾಗವುಳ್ಳಂಥಾ, ನಿತ್ಯವ್ಯಯಾ, ನಿತ್ಯ- ನಿರಂತರದಲ್ಲೂ, ವ್ಯಯಾ- ಧನವ್ಯಯವುಳ್ಳಂಥ , ಪ್ರಚುರನಿತ್ಯಧನಾಗಮಾಚ, ಪ್ರಚುರ- ಹೆಚ್ಚಾದ, ನಿತ್ಯ - ಶಾಶ್ವತವಾದ. ಧನ- ದ್ರವ್ಯದ, ಆಗಮಾದ-ಬರುವಿಕೆಯೂ ಉಳ್ಳಂಥಾ, ನೃಪನೀತಿಃ ರಾಜನೀತಿಯು (ರಾಜಶಾಸ್ತ್ರವು) ವಾರಾಂಗನೇವ- ವೇಶ್ಯಾಂಗನೆಯೋಪಾದಿಯಲ್ಲಿ, ಅನೇಕರೂಪಾ- ಅನೇಕ-ಬಹುವಿಧವಾದ, ರೂಪಾ-ಸ್ವಭಾವಗಳುಳ್ಳದ್ದು (ಸ್ವಭಾವವುಳ್ಳದ್ದು) ಈ ಶ್ಲೋಕದಲ್ಲಿ ಉಪಮೋತ್ಥಾಪಿತವಾದ ಸ್ವಭಾವೋಕ್ತ್ಯಲಂಕಾರವು. ೩೯॥

ತಾತ್ಪರ್ಯ—ರಾಜಸಂಬೋಧನೆಯನ್ನು ಹೇಳುವ ಪ್ರಸಕ್ತಾನು ಪ್ರಸಕ್ತಿಯಿಂದ ರಾಜನೀತಿಯನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗೆಂದರೆ? ರಾಜನೀತಿಯೆಂಬುವದು ಕೆಲವು ಕಾಲದಲ್ಲಿ ಸತ್ಯಾನೃತಗಳೆರಡನ್ನೂ ಆಶ್ರಯಿಸುತ್ತದೆ. ಅಂದರೆ ಕೆಲವು ಕಾಲದಲ್ಲಿ ಯಥಾರ್ಥ ಕೆಲವು ಸಮಯದಲ್ಲಿ ಅಸತ್ಯ, ಈ ಉಭಯವಿಧವಾಗಿರುತ್ತದೆ. ಮತ್ತು ಒಂದು ಕಾಲದಲ್ಲಿ ಕಠಿನವಾಗಿ ವಾಕ್ಪ್ರಯೋಗವು ಮತ್ತೊಂದು ಕಾಲದಲ್ಲಿ, ಮಧುರವಾದ ಮಾತುಗಳನ್ನು ಹೇಳೋಣವು. ಹಿಂಸಾಕರ್ಮವೂ ದಯಾಳುತ್ವವು ಈ ರೂಪವಾದದ್ದಾಗಿಯೂ ಯಾವಾಗಲೂ ದ್ರವ್ಯಾರ್ಜನೆಯುಳ್ಳದ್ದಾಗಿಯೂ ಮತ್ತು ಹೆಚ್ಚಾಗಿ ದ್ರವ್ಯವನ್ನು ಕೊಡುತ್ತಲಿರುವದಾಗಿಯೂ ನಿತ್ಯದಲ್ಲೂ ದ್ರವ್ಯವನ್ನು ಖರ್ಚುಮಾಡುವದಾಗಿಯೂ ಮತ್ತು ನಿತ್ಯಧನಾಗಮವುಳ್ಳದ್ದಾಗಿಯೂ ವಾರಾಂಗನೆಯೋಪಾದಿಯಲ್ಲಿ ಅನೇಕ ವಿಧವಾದದ್ದಾಗಿರುತ್ತದೆ. ವೇಶ್ಯಾಂಗನೆಯು ಕ್ಷಣಕಾಲದಲ್ಲಿ ಸತ್ಯವಾಕ್ಯನ್ನು ನುಡಿಯುತ್ತಲೂ ಹಾಗೆಯೇ ದಯಾಳುತ್ವವನ್ನು ತೋರಿಸುತ್ತಲೂ ದ್ರವ್ಯಾಕ

ಷಣೆಯನ್ನು ಮಾಡುತ್ತಲೂ ತದಾತ್ಮತ್ವವನ್ನು ಪ್ರಕಾಶಿಸುತ್ತಲೂ ಹೀಗೆ ನಾನಾವಿಧವಾಗಿ ಚಾತುರ್ಯವನ್ನು ಭುಜಂಗಶೇಖರರಲ್ಲಿ ತೋರ್ಪಡಿಸುತ್ತಾಳೋ ಹಾಗೆಯೇ ರಾಜನೀತಿಯೂ ಕೂಡ ಪ್ರಜೆಗಳಲ್ಲಿ ನಾನಾವಿದವಾಗಿ ತೋರ್ಪಡುತ್ತಲಿದೆಯೆಂದು ಭಾವವು. ||೩೯||

ಶ್ಲೋ|| ಆಜ್ಞಾ ಕೀರ್ತಿಃ ಪಾಲನಂ ಬ್ರಾಹ್ಮಣಾನಾಂ ದಾನಂ ಭೋ
ಗೋ ಮಿತ್ರಸಂರಕ್ಷಣಂಚ || ಯೇಷಾಮೇತೇ ಷಡ್ಗು
ಣಾ ನ ಪ್ರವೃತ್ತಾಃ ಕೋರ್ಥಸ್ತೇಷಾಂ ಪಾರ್ಥಿವೋಪಾ
ಶ್ರಯೇಣ || ೪೦ ||

ಟೀಕಾ|| ಆಜ್ಞಾ-ಆಜ್ಞಾಶಕ್ತಿಯು, ಕೀರ್ತಿಃ- ಯಶಸ್ಸು, ಬ್ರಾಹ್ಮಣಾನಾಂ- ಬ್ರಾಹ್ಮಣರ, ಪಾಲನಂ-ಸಂರಕ್ಷಯು, ದಾನಂ-ತ್ಯಾಗವು, ಮಿತ್ರಸಂರಕ್ಷಣಂಚ, ಮಿತ್ರ-ಸ್ನೇಹಿತರನ್ನು, ಸಂರಕ್ಷಣಂಚ- ಸಂರಕ್ಷಣೆಮಾಡುವದೂ, ಯೇಷಾಂ ಯಾವರಾಜರುಗಳಿಗೆ ಏತೇ- ಈ ಪೂರ್ವೋಕ್ತಗಳಾದ, ಷಡ್ಗುಣಾಃ-ಆರುಗುಣಗಳು, ನಪ್ರವೃತ್ತಾಃ- ಪ್ರವರ್ತಿಸುವದಿಲ್ಲವೋ, ಹೇಪಾರ್ಥಿವ-ಎಲೈ ರಾಜನೆ, ತೇಷಾಂ ಅಂಥಾವರುಗಳ ಉಪಾಶ್ರಯೇಣ- ಆಶ್ರಯದಿಂದ, ಕೋರ್ಥಃ-ಏನು ಪ್ರಯೋಜನವು. ||೪೦||

ತಾತ್ಪರ್ಯ|| ನೀಚಾಶ್ರಯವನ್ನು ಮಾಡಬಾರದು. ಮಹದಾಶ್ರಯವನ್ನು ಮಾಡಬೇಕೆಂಬುವ ವಿಚಾರವನ್ನೇ ಹೇಳುತ್ತಾನೆ. ಯಾವರಾಜರುಗಳಿಗೆ ಪ್ರಭು ಮಂತ್ರೋತ್ಸಾಹಶಕ್ತಿಯು, ಯಶಸ್ಸು, ಬ್ರಾಹ್ಮಣ ಸಂರಕ್ಷಣೆಮಾಡುವದು, ದಾನವೂ, ಭೋಗವೂ, ಈ ಆರುಗುಣಗಳಿರುತ್ತವೆಯೋ ಅಂಥಾ ದೊರೆಗಳನ್ನು ಆಶ್ರಯಿಸಬೇಕು. ಈ ಆರುಗುಣಗಳು ಇಲ್ಲದ ದೊರೆಯನ್ನು ಆಶ್ರಯಿಸಿದರೆ ಏನು ಪ್ರಯೋಜನ? ಏನೂ ಪ್ರಯೋಜನವಿಲ್ಲವೆಂಬುವ ಭಾವವು. (ಶಾಲಿನೀ ವೃತ್ತಂ) ||೪೦||

ಶ್ಲೋ|| ಯದ್ಧಾತ್ರಾ ನಿಜಫಾಲಪಟ್ಟಲಿಖಿತಂ ಸ್ತೋಕಂಮಹ
ದ್ವಾ ಧನಂ ತತ್ಪ್ರಾಪ್ನೋತಿ ಮರುಸ್ಥಲೇಪಿ ನಿತರಾಂ
ಮೇರೌ ಚ ನಾತೋಧಿಕಂ || ತದ್ಧೀರೋ ಭವ ವಿತ್ತವತ್ಸು
ಕೃಪಣಾಂ ವೃತ್ತಿಂ ವೃಥಾ ಮಾಕೃಥಾಃ ಕೂಪೇ ಪಶ್ಯ ಪ
ಯೋನಿಧಾವಪಿ ಘಟೋ ಗೃಹ್ಣಾತಿ ತುಲ್ಯಂ ಜಲಂ ||೪೧

ಟೀಕು॥ ಧಾತ್ರಾ-ಬ್ರಹ್ಮದೇವರಿಂದ, ಸ್ತೋಕಂ- ಕೊಂಚವಾಗಿ, ಮಹದ್ವಾ-ಹೆಚ್ಚಾಗಿ, ಯದ್ಧನಂ-ಎಷ್ಟುಧನವು, ನಿಜಫಾಲಪಟ್ಟಲಿಖಿತಂ ನಿಜ-ತನ್ನ ಫಾಲಪಟ್ಟ-ಪಟ್ಟ ಸದೃಶವಾದ ಫಾಲಭಾಗದಲ್ಲಿ, ಅಥವಾ ಹಣೆಯಲ್ಲಿ, ಲಿಖಿತಂ-ಬರೆಯಲ್ಪಟ್ಟಿತೋ, ಮರುಸ್ಥಲೇಪಿ ಮರು ಭೂಮಿಯಲ್ಲಿಯಾಗಲಿ, ಮೇರೌಚ-ಮಹಾಮೇರುಪರ್ವತದಲ್ಲಿಯಾಗಲಿ, ತತ್-ಆ ಧನವನ್ನು, ನಿತರಾಂ-ಅತ್ಯಂತವಾಗಿ, ಪ್ರಾಪ್ನೋತಿ-ಹೊಂದುತ್ತಾನೆ, ಅತಃ ಅವಕ್ಕಿಂತ, ಅಧಿಕಂ ಹೆಚ್ಚಾಗಿ, ನ-ಇಲ್ಲ, ತತ್-ಆ ಕಾರಣದ ದೆಸೆಯಿಂದ, ಧೀರೋಭವ-ಧೈರ್ಯಶಾಲಿಯಾಗು, ಅರ್ಥವತ್ಸು-ಧನವಂತರಲ್ಲಿ, ಕೃಪಣಾಂ ದೈನ್ಯವಾದ, ವೃತ್ತಿಂ ವ್ಯಾಪಾರವನ್ನು, ಮಾಕೃಥಾಃ- ಮಾಡಬೇಡ, ಘಟಃ- ಗಡಿಗೆಯು, ಕೂಪೇ- ಬಾವಿಯಲ್ಲಿಯೂ, ಪಯೋನಿಧೌಚ,-ಸಮುದ್ರದಲ್ಲಿಯೂ, ತುಲ್ಯಂ- ಸಮಾನವಾದಂಥ, ಜಲಂ-ನೀರನ್ನು, ಗೃಹ್ಣಾತಿ- ಗ್ರಹಿಸುತ್ತದೆ, ಪಶ್ಯ- ನೋಡು ಅರ್ಥಾಂತರನ್ಯಾಸಾಲಂಕಾರಃ ॥೪೧॥

ತಾತ್ಪರ್ಯ—ಕೃಪಣ ಮನುಷ್ಯನನ್ನು ನೋಡಿ ಹೇಳುತ್ತಾನೆ. ಬ್ರಹ್ಮದೇವರು ಹಣೆಯಲ್ಲಿ ಎಷ್ಟುರವುಟ್ಟಿಗೆ ಧನವಂತನಾಗುತ್ತಾನೆಂದು ಬರೆದಿರುತ್ತದೆಯೋ ಆಮನುಷ್ಯನು ಅರಣ್ಯದಲ್ಲಿ ಯಿದ್ದಲ್ಲಿ, ಮೇರುಪರ್ವತದಲ್ಲಿಯಿದ್ದಲ್ಲಿ ಅಲ್ಲಿಯೂ ಅಷ್ಟುಧನವನ್ನು ಹೊಂದುತ್ತಾನೆ. ಆದ್ದರಿಂದ ಧೈರ್ಯವಾಗಿರು. ದ್ರವ್ಯವಂತರಲ್ಲಿ ದೈನ್ಯವೃತ್ತಿಯನ್ನು ತೋರಿಸಬೇಡ. ಒಂದು ಗಡಿಗೆಯನ್ನು ಭಾವಿಯಲ್ಲಿ ತುಂಬಿಸಲಿ, ಸಮುದ್ರದಲ್ಲಿ ತುಂಬಿಸಲಿ, ಅದೆಷ್ಟುನೀರು ಹಿಡಿಯುತ್ತೋ ಅಷ್ಟೇವಿನಾ ಹೆಚ್ಚಾಗಿ ತುಂಬಲಾರದು. ಅದರಂತೆಯೇ ತನಗೆಷ್ಟುಬರಬೇಕೋ ಅಷ್ಟೇಬರುತ್ತದೆಯೆಂದು ಭಾವವು.

ಅರ್ಥಪದ್ಧತಿಃ ಸಂಪೂರ್ಣಾ.

---

## —ದುರ್ಜನ ಪದ್ಧತಿ ಪ್ರಾರಂಭಃ—

ಶ್ಲೋ॥ ದುರ್ಜನಃ ಪರಿಹರ್ತವ್ಯೋ । ವಿದ್ಯಯಾಲಂಕೃತೋಪಿಸನ್ ॥ ಮಣಿನಾಭೂಷಿತಸ್ಸರ್ಪಃ । ಕಿಮಸೌನಭಯಂಕರಃ ॥೪೨॥

ಟೀಕು ॥ ದುರ್ಜನಃ ದುಷ್ಟಮನುಷ್ಯನು, ವಿದ್ಯಯಾ - ವಿದ್ಯೆಯಿಂದ, ಅಲಂಕೃತೋಪಿ - ಅಲಂಕರಿಸಲ್ಪಟ್ಟವನಾದಾಗ್ಯೂ, ಪರಿಹರ್ತವ್ಯಃ - ಬಿಡು

ನದಕ್ಕೆ ಯೋಗ್ಯನಾಗುತ್ತಾನೆ, ಸರ್ಪಃ - ಅಕೀ ವಿಷವು, ಮಣಿನಾ - ಫಣಾ ಮಣಿಯಿಂದ, ಭೂಷಿತಃಸನ್ನಪಿ ಅಲಂಕರಿಸಲ್ಪಟ್ಟರೂ, ಅಸೌ- ಈ ಸರ್ಪವು ನಭಯಂಕರಃಕಿಂ ಭಯವನ್ನುಂಟುಮಾಡುವದಿಲ್ಲವೆ ಅನುಷ್ಟುಪ್ ವೃತ್ತ.

ತಾತ್ಪರ್ಯ|| ದುರ್ಜನರ ಸಂಗವನ್ನು ಬಿಡಬೇಕೆಂಬುವ ವಿಚಾರವನ್ನು ಹೇಳುತ್ತಾನೆ. ದುರ್ಜನರುಗಳು ವಿದ್ಯೆಯಿಂದ ಕೂಡಿದ್ದರೂ ಅವನ ಸಂಗವನ್ನು ಬಿಡಬೇಕು. ಅದು ಹೇಗೆಂದರೆ ಹಾವು ತನ್ನ ಹೆಡೆಯಲ್ಲಿರುವ ರತ್ನದಿಂದ ಅಲಂಕೃತವಾಗಿದ್ದಾಗ್ಯೂ ಜನಗಳಿಗೆ ಭಯವನ್ನುಂಟುಮಾಡುವದು ಹೇಗೋ ಹಾಗೆಯೇ ದುಷ್ಟಮನುಷ್ಯನು ವಿದ್ಯಾವಂತನಾದಾಗ್ಯೂ ಅವನನ್ನು ಬಿಟ್ಟುಬಿಡಬೇಕೆಂಬುವ ಭಾವವು ||೪೨||

ಶ್ಲೋ|| ಜಾಡ್ಯಂಹ್ರೀಮತಿಗಣ್ಯತೇವ್ರತಶುಚೌದಂಭಶ್ಶುಚೌಕೈ
ತವಂಶೂರೇನಿರ್ಘೃಣತಾ ಮುನೌವಿಮತಿತಾದೈನ್ಯಂ
ಪ್ರಿಯಾಲಾಪಿನಿ || ತೇಜಸ್ವಿನ್ಯವಲಿಪ್ತತಾ ಮುಖರ
ತಾವಕ್ತವ್ಯಶಕ್ತಿಸ್ಥಿರೇ ತತ್ಕೋನಾಮಗುಣೋಭವೇ
ತ್ಸ ಗುಣಿನಾಂ ಯೋದುರ್ಜನೈರ್ನಾಂಕಿತಃ ||೪೩||

ಟೀಕು || ಹ್ರೀಮತಿ - ಲಜ್ಜಾಯುಕ್ತನಾದ ಮನುಷ್ಯರಲ್ಲಿ, ಜಾಡ್ಯಂ-ಜಡತ್ವವು, ಗಣ್ಯತೇ - ಎಣಿಸಲ್ಪಡುತ್ತದೆ, ವ್ರತಶುಚೌ - ವ್ರತ - ನಿಯಮ ವ್ರತದಿಂದ, ಶುಚೌ- ಶುದ್ಧನಾದ ಮನುಷ್ಯನಲ್ಲಿ, ದಂಭಃ- ಡಾಂಭಿಕತ್ವವು, ಗಣ್ಯತೇ- ಎಣಿಸಲ್ಪಡುತ್ತದೆ, ಶುಚೌ- ಶುದ್ಧನಾದ ಮನುಷ್ಯನಲ್ಲಿ, ಕೈತವಂ ವಂಚನೆಯು, ಗಣ್ಯತೇ - ಎಣಿಸಲ್ಪಡುತ್ತದೆ, ಶೂರೇ - ಶೌರ್ಯವಂತನಲ್ಲಿ- ನಿರ್ಘೃಣತಾ - ನಿಷ್ಕರುಣ್ಯವು, ಗಣ್ಯತೇ - ಎಣಿಸಲ್ಪಡುತ್ತದೆ, ಮುನೌ - ಜ್ಞಾನಿಯಲ್ಲಿ, ವಿಮತಿತಾ- ಬ್ರಹ್ಮಜ್ಞಾನಪರಾಙ್ಮುಖತ್ವವು, ಗಣ್ಯತೇ - ಎಣಿಸಲ್ಪಡುತ್ತದೆ, ಪ್ರಿಯಾಲಾಪಿನಿ- ಪ್ರಿಯ- ಇಷ್ಟವಾದ ಮಾತನ್ನು, ಆಲಾಪಿನಿ ಹೇಳುತ್ತಿರುವವನಲ್ಲಿ, ದೈನ್ಯಂ- ದೀನತ್ವವು, ಗಣ್ಯತೇ- ಎಣಿಸಲ್ಪಡುತ್ತದೆ, ತೇಜಸ್ವಿನಿ- ತೇಜಃವಂತನಲ್ಲಿ, ಅವಲಿಪ್ತತಾ ಗರ್ವವು, ಗಣ್ಯತೇ- ಎಣಿಸಲ್ಪಡುತ್ತದೆ, ವಕ್ತವ್ಯಶಕ್ತಿಸ್ಥಿರೇ - ವಕ್ತವ್ಯ - ಹೇಳತಕ್ಕ, ಶಕ್ತಿ - ಸಾಮರ್ಥ್ಯದಿಂದ, ಸ್ಥಿರೇ-ಸ್ಥಿರನಾಗಿ ಇರುವ ಮನುಷ್ಯನಲ್ಲಿ, ಮುಖರತಾ-ಶಬ್ದಯುಮಾನತ್ವವು, ಗಣ್ಯತೇ-ಎಣಿಸಲ್ಪಡುತ್ತದೆ, ತತ್-ಆ ಕಾರಣದ ದೆಶೆಯಿಂದ, ದುರ್ಜನೈಃ-ದುಷ್ಟಮನುಷ್ಯರಿಂದ, ಗುಣಿನಾಂ- ಗುಣವಂತರ, ಯಃ-

ಯಾವಗುಣತಾನೆ, ಶಾಂತಿತಃ- ದುಷ್ಟವಾಗಿ ಎಣಿಸಲ್ಪಡದಿರುವದು ಕೋನಾಮ ಗುಣಃ- ಯಾವಗುಣತಾನೆ, ಭವೇತ್ - ಆದೀತು, ಶಾರ್ದೂಲವಿಕ್ರೀಡಿತ ವೃತ್ತಂ ॥ ೪೩ ॥

ತಾತ್ಪರ್ಯ॥ ದುರ್ಜನರು ಗುಣವಂತನಲ್ಲಿರುವ ಎಲ್ಲಾ ಸುಗುಣಗಳನ್ನೂ ದೂಷಿಸುತ್ತಾರೆಂಬುವದನ್ನು ಹೇಳುತ್ತಾರೆ. ಲಜ್ಜಾವಂತನಲ್ಲಿ ಮೂಢಭಾವವನ್ನೂ, ನಿಯಮ ವ್ರತವಾಡುವವನಲ್ಲಿ ಡಾಂಭಿಕತ್ವವೂ, ಆಚಾರವಂತನಲ್ಲಿ ವಂಚನೆಯೂ, ಶೂರನಲ್ಲಿ ದಯವಿಲ್ಲವೆಂಬುದೂ, ಜ್ಞಾನಿಯಲ್ಲಿ ಬ್ರಹ್ಮಜ್ಞಾನಪರಾಙ್ಮುಖತ್ವವೂ, ಒಳ್ಳೆಮಾತುಗಳನ್ನು ಆಡುವನಲ್ಲಿ ದೀನತ್ವವೂ, ತೇಜೋವಂತನಲ್ಲಿ ಗರ್ವವೂ, ವಾಚಾಳಕನಲ್ಲಿ ಅತಿಭಾಷಿಎಂಬುದೂ, ಹೀಗೆ ಗುಣವಂತರ ಯಾವಗುಣಗಳು ತಾನೆ ದೂಷಿಸಲ್ಪಡುವದಿಲ್ಲ. ದುರ್ಜನರು ಸಜ್ಜನರ ಗುಣಗಳನ್ನೆಲ್ಲಾ ದೂಷಿಸಿಯೇ ದೂಷಿಸುತ್ತಾರೆಂದು ಭಾವವು. ॥೪೩॥

ಶ್ಲೋ॥ ಲೋಭಶ್ಚೇದಗುಣೇನಕಿಂಪಿಶುನತಾಯದ್ಯಸ್ತಿಕಿಂಪಾತಕೈಸ್ಸತ್ಯಂಚೇತ್ತಪಸಾಚಕಿಂಶುಚಿಮನೋಯದ್ಯಸ್ತಿತೀರ್ಥೇನಕಿಂ ॥ ಸೌಜನ್ಯಂಯದಿ ಕಿಂಬಲೇನಮಹಿಮಾಯದ್ಯಸ್ತಿಕಿಂ ಮಂಡನೈಸ್ಸದ್ವಿದ್ಯಾಯದಿಕಿಂಧನೈರಪಯಶೋಯದ್ಯಸ್ತಿಕಿಂಮೃತ್ಯುನಾ ॥ ೪೪ ॥

ಟೀಕ॥ ಲೋಭಶ್ಚೇತ್- ಜಿಪುಣತನವು ಇರುವಂಥಾದ್ದಾದರೆ, ಅಗುಣೇನ-ಗುಣರಹಿತತ್ವದಿಂದ (ನಿರ್ಗುಣತ್ವದಿಂದ) ಕಿಂ- ಏನು ಪ್ರಯೋಜನವು, ಪಿಶುನತಾ-ದುಷ್ಟಭಾವವು, ಅಸ್ತಿಯದಿ- ಇರುವಂಥಾದ್ದಾದರೆ, ಪಾತಕೈಃ- ಪಾಪಗಳಿಂದ, ಕಿಂ ಏನುಪ್ರಯೋಜನವು, ಸತ್ಯಂಚೇತ್-ಯಥಾರ್ಥವು ಇರುವಂಥಾದ್ದಾದರೆ, ತಪಸಾ -ತಪಸ್ಸಿನಿಂದ, ಕಿಂ ಏನು ಪ್ರಯೋಜನವು, ಶುಚಿಮನಃ- ಶುಚಿ-ನಿರ್ಮಲವಾದಂಥ, ಮನಃ-ಮನಸ್ಸು, ಅಸ್ತಿಯದಿ ಇರುವಂಥಾದ್ದಾದರೆ, ತೀರ್ಥೇನ-ಪುಣ್ಯನದೀ ಯಾತ್ರೆಗಳಿಂದ, ಕಿಂ-ಏನು ಪ್ರಯೋಜನವು, ಸೌಜನ್ಯಂ- ಸುಜನಭಾವವು, ಅಸ್ತಿಯದಿ- ಇರುವಂಥಾದ್ದಾದರೆ, ಬಲೇನ- ಸಾಮರ್ಥ್ಯದಿಂದ, ಕಿಂ-ಏನು ಪ್ರಯೋಜನವು, ಮಹಿಮಾ- ಮಹಾತ್ಮ್ಯೆಯು, ಅಸ್ತಿಯದಿ- ಇರುವಂಥಾದ್ದಾದರೆ, ಮಂಡನೈಃ ಅಲಂಕಾರಗಳಿಂದ, ಕಿಂ-ಏನುಪ್ರ

ಯೋಜನವು, ಸದ್ವಿದ್ಯಾ-ಸತ್- ಸಮೀಚೀನವಾದಂಥ, ವಿದ್ಯಾ- ವಿದ್ಯೆಯು,
ಅಸ್ತಿಯದಿ-ಇರುವಂಥದ್ದಾದರೆ, ಧನೈಃ-ದ್ರವ್ಯದಿಂದ, ಕಿಂ- ಏನು ಪ್ರಯೋ
ಜನವು, ಅಪಯಶಃ-ದುಷ್ಕೀರ್ತಿಯು, ಅಸ್ತಿಯದಿ-ಇರುವಂಥಾದ್ದಾದರೆ, ಮೃ
ತ್ಯುನಾ-ಮರಣದಿಂದ, ಕಿಂ-ಏನು ಪ್ರಯೋಜನ. ||೪೪||

ತಾತ್ಪರ್ಯ—ಗುಣಾವಗುಣಗಳ ಮಾರ್ಗವನ್ನು ಹೇಳುತ್ತಾನೆ. ಲೋ
ಭಿಗೆ ಕೆಟ್ಟಗುಣವಿರಬೇಕಾದ ಅವಶ್ಯಕವಿಲ್ಲ. ಅವನ ಲೋಭತ್ವವೇ ಕೆಟ್ಟ
ಗುಣವಾಗಿರುತ್ತೆ. ದುರ್ಜನತ್ವವುಳ್ಳ ಮನುಷ್ಯನಿಗೆ ಬೇರೆ ಪಾಪಮಾಡ
ಬೇಕಾದ ಅವಶ್ಯಕವಿಲ್ಲ. ಸತ್ಯವಂತನಾದ ಮನುಷ್ಯನು ಬೇರೆ ತಪಸ್ಸು
ಮಾಡಬೇಕಾದ ಕೆಲಸವಿಲ್ಲ ನಿರ್ಮಲವಾದ ಮನಸ್ಸುಳ್ಳಂಥಾವನಿಗೆ ತೀರ್ಥ
ಯಾತ್ರೆಗಳು ಅವಶ್ಯಕವಿಲ್ಲ. ಸುಜನಭಾವದಲ್ಲಿರುವನಿಗೆ ಶರೀರ ಬಲ ಅವ
ಶ್ಯಕವಿಲ್ಲ. ಮಾಹಾತ್ಮ್ಯ ಇರುವವನಿಗೆ ಅಲಂಕಾರ ಅವಶ್ಯಕವಿಲ್ಲ. ಒಳ್ಳೆ
ವಿದ್ಯಾವಂತನಿಗೆ ದ್ರವ್ಯ ಅವಶ್ಯಕವಿಲ್ಲ (ಅಂದರೆ ವಿದ್ಯವೇ) ದ್ರವ್ಯವಾಗಿರು
ತ್ತೆ. ಮನುಷ್ಯನು ಅಪಯಶಸ್ಸು ಹೊಂದಿದರೆ ಅವನು ಜೀವವಂತನಾ
ಗಿದ್ದಾಗ್ಯೂ ಮರಣವಾದ ಮನುಷ್ಯನಂತೆ ಆಗುವನೆಂದು ಭಾವವು. ||೪೪||

ಶ್ಲೋ|| ಶಶೀದಿವಸಧೂಸರೋಗಳಿತಯೌವನಾಕಾಮಿನೀಸರೋ
ವಿಗತವಾರಿಜಂ ಮುಖಮನಕ್ಷರಂಸ್ವಾಕೃತೇಃ || ಪ್ರಭು
ರ್ಧನಪರಾಯಣಸ್ಸತತದುರ್ಗತಿಸ್ಸಜ್ಜನೋ ನೃಪಾಂ
ಗಣಗತಃಖಲೋಮನಸಿಸಪ್ತ ಶಲ್ಯಾನಿಇಮೇ || ೪೫ ||

ಟೀಕು || ದಿವಸಧೂಸರಃ ದಿವಸ- ಹಗಲಿನಿಂದ ಧೂಸರಃ- ಧೂಸರವರ್ಣ
ವಾದಂಥ, (ಅಥವಾ ನಿಸ್ತೇಜಸ್ಕನಾದಂಥ) ಶಶೀ - ಚಂದ್ರನೂ, ಗಳಿತಯೌ
ವನಾ- ಗಳಿತ-ಜಾರಿಹೋದ (ಅಥವಾ ಕಳೆದುಹೋದ) ಯೌವನಾ ಪ್ರಾಯವು
ಳ್ಳಂಥಾ, ಕಾಮಿನೀ-ಹೆಂಗಸು, ವಿಗತವಾರಿಜಂ ವಿಗತ- ಹೋದಂಥ, ವಾರಿಜಂ-
ಕಮಲಗಳುಳ್ಳ, ಸರಃ-ಸರಸ್ಸು, ಸ್ವಾಕೃತೇಃ-ಸು-ಸುಂದರವಾದ, ಆಕೃತೇಃ-
ಆ ಕಾರಕ್ಕೆ, ಅನಕ್ಷರಂ ಅಕ್ಷರವಿಲ್ಲದೆಯಿರುವ, ಮುಖಂ- ಮುಖವು, ಧನಪ
ಪರಾಯಣಃ-ಧನ- ದ್ರವ್ಯದಲ್ಲಿ, ಪರಾಯಣಃ ಆಶೆವುಳ್ಳ, ಪ್ರಭುಃ- ರಾಜನು,
ನೃಪಾಂಗಣಗತಃ- ನೃಪಾಂಗಣ- ರಾಜಾಂಗಣವನ್ನು, ಗತಃ- ಹೊಂದಿದಂಥಾ,
ಖಲಃ-ದುರ್ಜನನು, ಇಮೇ- ಈ ಏಳು, ಮನಸಿ- ಮನಸ್ಸಿನಲ್ಲಿ, ಸಪ್ತ- ಏಳಾ

ದಂಥ, ಶಲ್ಯಾನಿ-ಅಶಂಕುಗಳು, (ಅಂದರೆ ಗೂಟಗಳು) ಭವಂತಿ-ಆಗುತ್ತವೆ ದೀಪಕಾಲಂಕಾರಃ. ॥೫೫॥

ತಾತ್ಪರ್ಯ—ಒಬ್ಬಾನೊಬ್ಬ ಮನುಷ್ಯನು ತನ್ನ ನಿಜವಾದ ಅನುಭವವನ್ನು ಹೇಳುತ್ತಾನೆ:-ಹಗಲಿನಲ್ಲಿ ಕಳಾಹೀನನಾದ ಚಂದ್ರನು, ಯೌವನಕಳೆದುಹೋದ ಸ್ತ್ರೀ, ಕಮಲಗಳಿಲ್ಲದಿರುವ ಸರೋವರವು, ವಿದ್ಯೆಯಿಲ್ಲದ ಮುಖವು, ರಾಜನು ಯಾವಾಗಲೂ ಧನಾರ್ಜನೆಯಲ್ಲೇ ಯಿರುವದು, ಯಾವಾಗಲೂ ದುರ್ಜನರ ಸಹವಾಸದಲ್ಲಿರುವ ಸಜ್ಜನವು, ರಾಜನ ಸಮೀಪದಲ್ಲಿ ದುರ್ಜನರ ಮಂತ್ರಿತ್ವವೂ, ಈ ಏಳೂ ಮನಸ್ಸಿನಲ್ಲಿ ಶಲ್ಯಗಳು ಅಂದರೆ ಈ ಏಳು ಅನುಭವಕ್ಕೆ ಅಸಾಧ್ಯವೆಂಬುವ ಭಾವವು. ॥೫೫॥

ಶ್ಲೋ॥ ನಕಶ್ಚಿಚ್ಚಂಡಕೋಪಾನಾಮಾತ್ಮೀಯೋ ನಾಮಭೂಭುಜಾಂ ॥ ಹೋತಾರಮಪಿಜುಹ್ವಾನಂಸ್ಪೃಷ್ಟೋದಹತಿಪಾವಕಃ ॥೫೬॥

ಟೀಕಾ॥ ಚಂಡಕೋಪಾನಾಂ-ಚಂಡ ಹೆಚ್ಚಾದ, ಕೋಪಾನಾಂ ಕೋಪವುಳ್ಳ, ಭೂಭುಜಾಂ- ರಾಜರುಗಳಿಗೆ, ಆತ್ಮೀಯೋನಾಮ- ಸ್ವಕೀಯನು ಎಂಬುವನು, ಕಶ್ಚಿತ್ ಒಬ್ಬನೂ, ನ-ಇಲ್ಲ, ಕಿಂತು ಮತ್ತೇನಂದರೆ, ಸರ್ವೇ-ಸರ್ವರೂ, ಪರಕೀಯಾಏವ- ಅನ್ಯರೇ ಆಗುತ್ತಾರೆ, ತಥಾಹಿ ಅದುಯುಕ್ತವೇ ಸರಿ, ಪಾವಕಃ- ಅಗ್ನಿಯು (ಯಜ್ಞೇಶ್ವರನು) ಜುಹ್ವಾನಂ-ಪುರೋಡಾಶಾದಿಗಳನ್ನು ಹೋಮ ಮಾಡುತ್ತಾಯಿರುವ, ಹೋತಾರಮಪಿ-ಯಜಮಾನನನ್ನು ಸ್ಪೃಷ್ಟಸ್ಸನ್-ಸ್ಪರ್ಶಮಾಡಿದವನಾಗಿ, ದಹತಿ-ದಹಿಸುವನು ॥೫೬॥

ತಾತ್ಪರ್ಯ—ದುರ್ಜನನಿಗೆ ತಮ್ಮವರು ಮತ್ತು ಪರರು ಎಂಬುವದಿಲ್ಲವೆಂಬುವದನ್ನು ಹೇಳುತ್ತಾನೆ:-ಚಂಡಕೋಪವುಳ್ಳ ದೊರೆಗೆ ತಮ್ಮವರು ಮತ್ತು ಪರರು ಎಂಬುವ ಭೇದವೇನೂ ಇಲ್ಲ. ಎಲ್ಲರಲ್ಲಿಯೂ ಒಂದೇ ವಿಧವಾದ ಕೋಪವನ್ನೆ ಮಾಡುತ್ತಿರುವನು. ಅದು ಹೇಗೆಂದರೆ ಅದಕ್ಕೆ ದೃಷ್ಟಾಂತವನ್ನು ಹೇಳುತ್ತಾನೆ. ಅಗ್ನಿಯು ತನಗೆ ಆಜ್ಯಾಹುತಿಗಳನ್ನು ಕೊಡುತ್ತಾಯಿರುವ ಯಜಮಾನನನ್ನಾದರೂ ಮುಟ್ಟಿದಕೂಡಲೇ ಸುಡುತ್ತಾನೆ. ತನಗೆ ಆಜ್ಯಾಹುತಿಯನ್ನು ಕೊಡುತ್ತಾನೆ, ಇವನನ್ನು ಸುಡಬಾರದೆಂದು ನೋಡುವದಿಲ್ಲ. ಹಾಗೆ ತಮಗೆ ಹಿತವನ್ನುಂಟು ಮಾಡುವರಾದಾಗ್ಯೂ ಕೆ

ಟ್ಟಕೋಪವುಳ್ಳ ದೊರೆಗಳು ತಮ್ಮವರೆಂದು ಯಾರನ್ನೂ ಭಾವಿಸುವದಿಲ್ಲವೆಂಬುವ ಭಾವವು. ॥೪೧॥

ಶ್ಲೋ॥ ಮೌನಾನ್ಮೂಕಃ ಪ್ರವಚನಪಟುರ್ವಾಚಕೋ ಜಲ್ಪ
ಕೋವಾಧೃಷ್ಟಃ ಪಾರ್ಶ್ವೇಭವತಿಚವಸನ್ ದೂರ
ತೋಪ್ಯಪ್ರಗಲ್ಭಃ ॥ ಕ್ಷಾಂತ್ಯಾಭೀರುರ್ಯದಿನಸಹತೇ
ಪ್ರಾಯಶೋನಾಭಿಜಾತಸ್ಸೇವಾಧರ್ಮಃ ಪರಮಗಹ
ನೋಯೋಗಿನಾಮಪ್ಯಗಮ್ಯಃ ॥ ೪೨ ॥

ಟೀಕು॥ ಸೇವಕಃ-ಸೇವಕನು, ಮೌನಾತ್- ಮೌನದೆಸೆಯಿಂದ, ಮೂಕಃ-ವಾಗ್ಬಂಧನವಾದಂಥಾವನು, ಭವತಿ-ಆಗುತ್ತಾನೆ. ಪ್ರವಚನಪಟುಃ- ಪ್ರವಚನ-ಮಾತನಾಡೋಣದರಲ್ಲಿ, ಪಟುಃ-ಸಮರ್ಥನಾದಂಥಾವನು, ವಾಚಕ-ಬಹುಭಾಷಿಯು, ಭವತಿ- ಆಗುತ್ತಾನೆ, ಜಲ್ಪಕೋವಾ- ಅಸಂಬಂಧ ಪ್ರಲಾಪವುಳ್ಳವನು, ಭವತಿ-ಆಗುತ್ತಾನೆ, ಪಾರ್ಶ್ವೇ-ಪಾರ್ಶ್ವದಲ್ಲಿ, ವಸನ್ ಇರುವನಾಗಿ, ಧೃಷ್ಟಃ-ದಿಟ್ಟತನವುಳ್ಳವನೆನಿಸುವನು, ದೂರತಃ- ದೂರದಲ್ಲಿ, ವಸನ್ಯದಿ-ಇರುವನಾದರೆ, ಅಪ್ರಗಲ್ಭಃ-ಮೂಢನಾಗುತ್ತಾನೆ, ಕ್ಷಾಂತ್ಯಾ- ಕ್ಷಮಾಗುಣದಿಂದ. ಭೀರುಃ-ಭಯವುಳ್ಳವನಾಗುತ್ತಾನೆ. ನಸಹತೇಯದಿ- ಸಹಿಸದೆಯಿರುವನಾದರೆ, ನಾಭಿಜಾತಃ- ಅಯೋಗ್ಯವಂಶೀಯನಾಗುತ್ತಾನೆ, ಪ್ರಾಯಶಃ-ಬಹು ಪ್ರಕಾರವಾಗಿ, ಸೇವಾಧರ್ಮಃ- ಸೇವಾವೃತ್ತಿಯು, ಯೋಗಿನಾಮಪಿ-ಯೋಗಾಭ್ಯಾಸದಿಂದ, ಭೂತಭವಿಷ್ಯದ್ವರ್ತಮಾನಗಳನ್ನು ತಿಳಿದ ಯೋಗಿಜನರಿಗೂಕೂಡ, ಅಗಮ್ಯಃ- ಗಮನಿಸುವದಕ್ಕೆ ಅಸಾಧ್ಯವಾದಂಥಾದ್ದು, ಅಂದರೆ-ಮಾಡುವದಕ್ಕೆ ಕಷ್ಟತರವಾದಂಥಾದ್ದು. ಈ ಶ್ಲೋಕದಲ್ಲಿ ಸಾದೃಶ್ಯವಾಗಿ ಮನುಷ್ಯರಿಗೆ ರಾಜಸೇವಾ ಸಂಬಂಧವಿದ್ದಾಗ್ಯೂ ಅಸಂಬಂಧೋಕ್ತಿ ಹೇಳಿಯಿರುವದರಿಂದ ಅತಿಶಯೋಕ್ತ್ಯಲಂಕಾರಭೇದವು (ಮಂದಾಕ್ರಾಂತಾ ವೃತ್ತ.)

ಈ ವೃತ್ತವು ಚತುರ್ಥ ಷಷ್ಠ ಸಪ್ತಮ ವರ್ಣಗಳಲ್ಲಿ ಯತಿಯೂ ಮಗಣ, ಭಗಣ, ಮಗಣ, ನಗಣ, ತಗಣಗಳೂ, ಎರಡುಗುರುವೂ ಉಳ್ಳದ್ದಾಗಿ ಯಿರುತ್ತೆ.

ತಾತ್ಪರ್ಯ —ರಾಜಸೇವೆಯೆಂಬುವದು ಮನುಷ್ಯರಿಗೆ ಅತಿಕಷ್ಟತರವಾದದ್ದು. ತತ್ರಾಪಿ ದುಷ್ಟರಾಜನ ಸೇವೆಯೆಂಬುವದು ಭೂತಭವಿಷ್ಯದ್ವ

ತ್ವಜ್ಞಾನ ತಿಳಿದ ಯೋಗೀಶ್ವರರಿಗೂ ಅಸಾಧ್ಯವೆಂಬುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ರಾಜಸೇವಕನು ಮೌನವಾಗಿದ್ದರೆ ರಾಜನು ಈ ಮನುಷ್ಯನಿಗೆ ಮಾತನಾಡುವದಕ್ಕೆ ಬರುವದಿಲ್ಲವೆಂದು ಹೀನಗಳೆಯುವನು. ಚೆನ್ನಾಗಿ ಮಾತನಾಡುವದಕ್ಕೆ ಬಂದರೆ ಇವನು ಬಹಳ ವಾಚಾಳಕ ಬಹು ಭಾಷಿಯೆಂದು ಅಸಡ್ಡೆಮಾಡುವನು. ಪಾರ್ಶ್ವಭಾಗದಲ್ಲಿ ಬರುತ್ತಲಿರುವದನ್ನು ನೋಡಿದರೆ ಇವನು ಬುದ್ಧಿಹೀನನು ಮರ್ಯಾದೆ ತಿಳಿಯದವನೆಂದು ತಿರಸ್ಕರಿಸುತ್ತಾನೆ. ರಾಜನಿಗೆ ದೂರವಾಗಿ ಬರುತ್ತಲಿದ್ದರೆ ಈ ಮನುಷ್ಯನು ಪ್ರಾಜ್ಞನಲ್ಲ ಮೂಢನೆಂದು ಹೇಳುವನು. ಕ್ಷಮಾಗುಣದಿಂದ ಭಯದಲ್ಲಿದ್ದರೆ ಕೈಲಾಗದ ಹೇಡಿಮನುಷ್ಯನೆಂದು ಹೇಳುವನು. ಮಾತುಗಳನ್ನು ಸಹಿಸದಿದ್ದರೆ ಇವನು ಕೆಟ್ಟವಂಶದಲ್ಲಿ ಹುಟ್ಟಿದವನೆಂದು ದೂಷಿಸುವನು. ಹೀಗೆ ರಾಜಸೇವೆಯಲ್ಲಿ ಹೇಗೆ ಇದ್ದಾಗ್ಯೂ ಅತಿ ಕಷ್ಟತರವಾದಂಥಾದ್ದಾಗಿದೆ ಈ ಕಾರಣದಿಂದ ರಾಜಸೇವೆಯೆಂಬುವದು ಯೋಗಾಭ್ಯಾಸ ಮಾಡಿದ ಮಹಾಯೋಗಿಗಳಿಗೂ ಕೂಡ ಕಷ್ಟತರವಾದದ್ದೆಂದು ಭಾವವು. ||೪೭||

ಶ್ಲೋ|| ಉದ್ಭಾಸಿತಾಖಿಲಖಲಸ್ಯವಿಶೃಂಖಲಸ್ಯ ಪ್ರೋದ್ಗಾಢ
ವಿಸ್ಮೃತನಿಜಾಧಮಕರ್ಮವೃತ್ತೇಃ | ದೈವಾದವಾಪ್ತ
ವಿಭವಸ್ಯಗುಣದ್ವಿಷೋಽಸ್ಯನೀಚಸ್ಯಗೋಚರಗತೈಃ
ಸುಖಮಾಪ್ಯತೇಕೈಃ ||೪೮||

ಟೀಕು|| ಉದ್ಭಾಸಿತಾಖಿಲಖಲಸ್ಯ-ಉದ್ಭಾಸಿತ- ಪ್ರಕಾಶವಾಗಿ ಮಾಡಲ್ಪಟ್ಟ, ಅಖಿಲ-ಸಮಸ್ತವಾದ, ಖಲಸ್ಯ-ದುರ್ಜನರುಳ್ಳಂಥ, ವಿಶೃಂಖಲಸ್ಯ- ವಿಧಿನಿಷೇಧವಿಲ್ಲದೆಯಿರುವ, ಪ್ರೋದ್ಗಾಢ ವಿಸ್ಮೃತನಿಜಾಧಮಕರ್ಮವೃತ್ತೇಃ- ಪ್ರೋದ್ಗಾಢ- ಅತ್ಯಂತವಾಗಿ, ವಿಸ್ಮೃತ- ಮರೆಯಲ್ಪಟ್ಟ, ನಿಜ ಸ್ವಕೀಯವಾದಂಥ, ಅಧಮಕರ್ಮ - ನೀಚವ್ಯಾಪಾರದ, ವೃತ್ತೇಃ- ಚರ್ಯವುಳ್ಳಂಥಾ, ದೈವಾತ್ ದೈವಾಧೀನದದೆಸೆಯಿಂದ, ಅವಾಪ್ತವಿಭವಸ್ಯ- ಅವಾಪ್ತ- ಹೊಂದಲ್ಪಟ್ಟ, ವಿಭವಸ್ಯ- ಐಶ್ವರ್ಯವುಳ್ಳಂಥಾ, ಗುಣದ್ವಿಷಃ- ಗುಣ - ಒಳ್ಳೆಗುಣವಂತರಲ್ಲಿ, ದ್ವಿಷಃ- ದ್ವೇಷಮಾಡುತ್ತಲಿರುವ ನೀಚಸ್ಯ - ನೀಚಮನುಷ್ಯನ ಗೋಚರಗತೈಃ-ಗೋಚರ ದೃಷ್ಟಿಯನ್ನು, ಗತೈಃ-ಹೊಂದಿರುವ, ಕೈಃ ಯಾವಜನಗಳಿಂದ, ಸುಖಂ-ಸುಖವು, ಆಪ್ಯತೇ-ಹೊಂದಲ್ಪಡುತ್ತೆ. ಪದಾರ್ಥಹೇತುಕಕಾವ್ಯಲಿಂಗಾಲಂಕಾರಃ || ವಸಂತತಿಲಕಾವೃತ್ತಂ ||೪೮||

ತಾತ್ಪರ್ಯ —ದುಷ್ಟನಾದ ರಾಜಾಶ್ರಯವನ್ನು ಮಾಡಿದ ಮನುಷ್ಯನು ಜೀವದಿಂದ ಬದುಕುವದೆ ಕಷ್ಟಕ್ಕೆ ಬರುತ್ತೆಂಬುವ ಸಂಗತಿಯನ್ನು ಹೇಳು ತ್ತಾನೆ;-ಹೇಗಂದರೆ ದುರ್ಜನರನ್ನು ಅಭಿವೃದ್ಧಿಮಾಡಿ ಪಾಪಪುಣ್ಯವೆಂಬುವ ವಿಧಿನಿಷೇಧಜ್ಞಾನವಿಲ್ಲದೆ ಸಜ್ಜನರನ್ನು ದೂಷಣೆಮಾಡುತಾ ಸ್ವೇಚ್ಛೆಯ ವೃತ್ತಿಯಲ್ಲಿ ಇರುವ ದುಷ್ಟರಾಜನ ದೃಷ್ಟಿಗೋಚರರಾದ ಯಾವಜನಗಳು ತಾವೇ ಸುಖವನ್ನು ಹೊಂದುತಾರೆ? ಯಾರೂ ಹೊಂದುವದಿಲ್ಲ. ಆದ್ದ ರಿಂದ ರಾಜರನ್ನು ಆಶ್ರಯ ಮಾಡಬಾರದೆಂಬುವ ತಾತ್ಪರ್ಯವು. (ವಸಂತತಿ ಲಕವೃತ್ತ) ಕಾವ್ಯಲಿಂಗಾಲಂಕರ ಭೇದ) ||೪೮||

**ಶ್ಲೋ|| ಆರಂಭಗುರ್ವೀಕ್ಷಯಿಣೀಕ್ರಮೇಣಲಘ್ವೀಪುರಾವೃದ್ಧಿ ಮುಪೈತಿಪಶ್ಚಾತ್ || ದಿನಸ್ಯಪೂರ್ವಾರ್ಧಪರಾರ್ಧ ಭಿನ್ನಾಛಾಯೇವಮೈತ್ರೀಖಲಸಜ್ಜನಾನಾಂ || ೪೯ ||**

ದಿನಸ್ಯ- ದಿವಸದ, ಪೂರ್ವಾರ್ಧಪರಾರ್ಧಭಿನ್ನಾ - ಪೂರ್ವಾರ್ಧ-ಪ್ರಾತಃ ಕಾಲದಿಂದ. ಪರಾರ್ಧ-ಮಧ್ಯಾಹ್ನಕಾಲದಿಂದ, ಭಿನ್ನಾ- ಭೇದವನ್ನು ಹೊಂದಿ ದಂಥ, ಛಾಯೇವ- ನೆರಳಿನೋಪಾದಿಯಲ್ಲಿ, ಖಲಸಜ್ಜನಾನಾಂ ಖಲ ದುರ್ಜ ನರ, ಸಜ್ಜನಾನಾಂ- ಸತ್ಪುರುಷರ, ಮೈತ್ರೀ ಸ್ನೇಹವು, ಆರಂಭಗುರ್ವೀ- ಆರಂಭ- ಪ್ರಾರಂಭದಲ್ಲಿ, ಗುರ್ವೀ- ಅಧಿಕವಾದಂಥಾದ್ದು. ಕ್ರಮೇಣ-ಕಾಲ ಕ್ರಮದಿಂದ, ಕ್ಷಯಿಣೀ-ಕ್ಷಯವಾಗುವಂಥಾದ್ದು. ಭವತಿ ಆಗುತ್ತೆ, ಮೈತ್ರೀ ಸಜ್ಜನರಲ್ಲಿ ಸ್ನೇಹವೂ, ಪುರಾ- ಮೊದಲು, ಲಘ್ವೀ - ಕೊಂಚವಾದದ್ದಾಗಿ, ಪಶ್ಚಾತ್-ಅನಂತರದಲ್ಲಿ, ವೃದ್ಧಿಂ-ಬೆಳೆಯುವಿಕೆಯನ್ನು, ಉಪೈತಿ ಹೊಂದು ವಂಥಾದ್ದಾಗುತ್ತದೆ, || ಯಥಾಸಂಖ್ಯಾಸಂಕೀರ್ಣೋಪಮಾಲಂಕಾರ|| ವೃತ್ತ ಮುಪಜಾತಿಃ || || ೪೯ ||

ತಾತ್ಪರ್ಯ —ದುರ್ಜನ ಸಜ್ಜನರ ಮೈತ್ರೀಭೇದವನ್ನು ಹೇಳುತಾನೆ. ದುರ್ಜನ ಸ್ನೇಹವು ಹಗಲಲ್ಲಿ ಬೆಳಗಿನ ಛಾಯವು ಆರಂಭದಲ್ಲಿ ಹೆಚ್ಚಾಗಿ ಯದ್ದು ಕೊಂಚಕಾಲದ ಮೇಲೆ ಹೇಗೆ ಕಮ್ಮಿ ಆಗುತ್ತೊ ಹಾಗೆಯೆ ಮೊದ ಲು ಹೆಚ್ಚಾಗಿ ಕ್ರಮೇಣ ಕಮ್ಮಿಯಾಗುತ್ತೆ. ಸಜ್ಜನಮೈತ್ರಿಯು ಮಧ್ಯಾ ಹ್ನದಮೇಲೆ ಮನುಷ್ಯನ ಛಾಯವು ಮೊದಲು ಕಮ್ಮಿಯಾಗಿದ್ದು ಕ್ರಮೇಣ ಹೇಗೆ ಹೆಚ್ಚಾಗುತಾ ಬರುತ್ತೊ ಅದರಂತೆ ಮೊದಲು ಕೊಂಚವಾಗಿದ್ದು ಕ್ರಮೇಣ ಹೆಚ್ಚಾಗುತಾ ಬರುತ್ತೆಂದು ತಾತ್ಪರ್ಯವು. ||೪೯||

ಶ್ಲೋ॥ ಮೃಗಮೀನಸಜ್ಜನಾನಾಂ ತೃಣಜಲಸಂತೋಷವಿಹಿತ
ವೃತ್ತೀನಾಂ॥ ಲುಬ್ಧಕಧೀವರಪಿಶುನಾನಿಷ್ಕಾರಣಮೇವ
ವೈರಿಣೋಜಗತಿ ॥ ೫೦ ॥

ಟೀಕು ॥ ತೃಣಜಲಸಂತೋಷವಿಹಿತವೃತ್ತೀನಾಂ - ತೃಣ - ಹುಲ್ಲು ಜಲ- ನೀರು, ಸಂತೋಷ-ಆನಂದವೂ ಇವುಗಳಿಂದ, ವಿಹಿತ-ಯೋಗ್ಯವಾದ, ವೃತ್ತೀನಾಂ- ವ್ಯಾಪಾರವುಳ್ಳ, ಮೃಗಮೀನಸಜ್ಜನಾನಾಂ- ಮೃಗ - ಜಿಂಕೆ ಗಳಿಗೂ, ಮೀನ- ಮತ್ಸ್ಯಗಳಿಗೂ, ಸಜ್ಜನಾನಾಂ - ಸತ್ಪುರುಷರು ಇವರು ಗಳಿಗೆ, ಜಗತಿ- ಲೋಕದಲ್ಲಿ, ಲುಬ್ಧಕಧೀವರಪಿಶುನಾಃ- ಲುಬ್ಧಕ- ಬೇಡರು ಧೀವರ- ಬೆಸ್ತರು, ಪಿಶುನಾಃ - ದುರ್ಜನರು, ನಿಷ್ಕಾರಣಮೇವ - ಕಾರಣ ವಿಲ್ಲವೇನೆ, ವೈರಿಣಃ- ವೈರವುಳ್ಳಂಥಾವರುಗಳು, ಭವಂತಿ - ಆಗುತ್ತಾರೆ. ಯಥಾ ಸಂಖ್ಯಾಲಂಕಾರಃ ॥ ಆರ್ಯಾವೃತ್ತಂ ॥೫೦॥

ತಾತ್ಪರ್ಯ—ಸತ್ಪುರುಷರಿಗೆ ಯಾವಾಗಲೂ ದುರ್ಜನರಿಂದ ಬಾಧೆ ವುಂಟೆಂಬುವದನ್ನು ಹೇಳುತಾನೆ. ಜಿಂಕೆ ಮೀನು ಸಜ್ಜನರು ಇವರುಗ ಳು ಹುಲ್ಲು ಮತ್ತು ನೀರು ಸಂತೋಷ ಇವುಗಳಿಂದ ಕಾಲಕಳೆಯುತಾ ಇರುತ್ತಾರೆ. ಅಂದರೆ ಜಿಂಕೆ ಅಡವಿ ಹುಲ್ಲನ್ನು ತಿಂದು ಜೀವಿಸುತ್ತಲೂ ಮೀನು ನೀರಿನಲ್ಲಿ ವಾಸಮಾಡುತ್ತಲೂ ಸತ್ಪುರುಷರು ಯಾವಾಗ್ಯೂ ಸಂ ತೋಷವ್ಯಾಪಾರದಲ್ಲಿ ಇದ್ದು ಕಾಲಕಳೆಯುತ್ತಾರೆ. ಇಂಥಾವರಿಗೆ ಲೋ ಕದಲ್ಲಿ ಬೇಡರು ಜಿಂಕೆಗೆ ವೈರಿಗಳು, ಬೆಸ್ತರು ಮೀನುಗಳಿಗೆ ವೈರಿಗಳು, ಸಜ್ಜನರಿಗೆ ದುರ್ಜನರು ಕಾರಣವಿಲ್ಲದ ವೈರದಿಂದ ಹಿಂಸೆಮಾಡುತ್ತಾರೆಂದು ತಾತ್ಪರ್ಯವು. ॥೫೦॥

ಇತಿದುರ್ಜನ ಪದ್ಧತಿಃ ಸಮಾಪ್ತಾ !

—ಸುಜನ ಪದ್ಧತಿ ಪ್ರಾರಂಭಃ.—

ಶ್ಲೋ॥ ವಾಂಛಾಸಜ್ಜನಸಂಗತೌ ಪರಗುಣೇಪ್ರೀತಿರ್ಗುರೌ
ನಮ್ರತಾವಿದ್ಯಾಯಾಂವ್ಯಸನಂಸ್ವಯೋಷಿತಿರತಿ
ರ್ಲೋಕಾಪವಾದಾದ್ಭಯಂ॥ ಭಕ್ತಿಶ್ಶೂಲಿನಿಶಕ್ತಿರಾ
ರಾತ್ಮದಮನೇಸಂಸರ್ಗಮುಕ್ತಿಃಖಲೈರೇತೇಯೇಷುವ
ಸಂತಿನಿರ್ಮಲಗುಣಾಸ್ತೇಭ್ಯೋಮಹದ್ಭ್ಯೋನಮಃ॥

ಟೀಕು ॥ ಸಜ್ಜನಸಂಗತೌ - ಸಜ್ಜನ- ಸತ್ಪುರುಷರ, ಸಂಗತೌ - ಕೂಡೋಣದರಲ್ಲಿ, ವಾಂಛಾ- ಇಚ್ಛೆಯು, ಪರಗುಣೇ- ಪರ- ಅನ್ಯರ, ಗುಣೇ- ಸುಗುಣದಲ್ಲಿ, ಪ್ರೀತಿಃ- ವಿಶ್ವಾಸವು, ಗುರೌ - ಗುರುಜನದಲ್ಲಿ, ನಮ್ರತಾ ನಮ್ರತ್ವವು, ವಿದ್ಯಾಯಾಂ- ವಿದ್ಯೆಯಲ್ಲಿ, ವ್ಯಸನಂ- ಕುತೂಹಲವು ಸ್ವಯೋಷಿತಿ- ಸ್ವ- ತನ್ನ, ಯೋಷಿತಿ-ಸ್ತ್ರೀಯಲ್ಲಿ, ರತಿಃ-ಕಾಮವ್ಯಾಪಾರವು, ಅಥವಾ ರತಿಸುಖವು. ಲೋಕಾಪವಾದಾತ್ - ಜನದ ಅಪವಾದಪಸೆಯಿಂದ, ಭಯಂ- ಭೀತಿಯು. ಶೂಲಿನಿ - ಈಶ್ವರನಲ್ಲಿ, ಭಕ್ತಿಃ- ಭಕ್ತಿಯು, ಆತ್ಮದಮನೇ- ಆತ್ಮ- ತನ್ನ, ದಮನೆ- ತಿರಸ್ಕಾರದಲ್ಲಿ, ಶಕ್ತಿಃ- ಪರಾಕ್ರಮವು, ಖಲೈಃ- ದುರ್ಜನರೊಡನೆ, ಸಂಸರ್ಗಮುಕ್ತಿ- ಸಂಸರ್ಗ- ಸಂಗದ, ಮುಕ್ತಿಃ-ಬಿಡುಗಡೆಯು ಏತೆ ಈ, ನಿರ್ಮಲಗುಣಾಃ- ನಿರ್ಮಲ ಪವಿತ್ರವಾದ, ಗುಣಾಃ- ಗುಣಗಳು, ಯೇಷು- ಯಾರುಗಳಲ್ಲಿ, ವಸಂತಿ ಇರುತ್ತವೆಯೋ ತೇಭ್ಯಃ- ಅಂಥಾ, ಮಹದ್ಭ್ಯಃ- ಮಹಾತ್ಮರುಗಳಿಗೋಸ್ಕರ, ನಮಃ- ನಮಸ್ಕಾರವು. ಶಾರ್ದೂಲವಿಕ್ರೀಡಿತವೃತ್ತಂ ॥ ೫೧ ॥

ತಾತ್ಪರ್ಯ—ಸಜ್ಜನರ ಗುಣಗಳನ್ನು ಹೇಳುತ್ತಾನೆ ಹೇಗೆಂದರೆ:— ಯಾರಿಗೆ ಸಜ್ಜನರಲ್ಲಿಯೇ ಆಸಕ್ತಿಯುಂಟೋ, ಪರಗುಣದಲ್ಲಿ ವಿಶ್ವಾಸವೂ ಗುರುವಿನಲ್ಲಿ ನಮ್ರತ್ವವೂ, ವಿದ್ಯಾಸಂಗ್ರಹ ಮಾಡಬೇಕೆಂಬ ವ್ಯಸನವೂ, ತನ್ನ ಸ್ತ್ರೀಯಲ್ಲಿ ಕಾಮವ್ಯಾಪಾರವೂ, ಜನಾಪವಾದಕ್ಕೆ ಭಯವೂ, ಈಶ್ವರನಲ್ಲಿ ಭಕ್ತಿಯೂ, ಆತ್ಮಪ್ರಶಂಸೆಯನ್ನು ಮಾಡಿಕೊಳ್ಳದೆ ಮನಸ್ಸನ್ನು ನಿಗ್ರಹಿಸುವದೂ, ದುರ್ಜನ ಸಂಗವನ್ನು ಬಿಡುವದು, ಇಂಥಾ ಉತ್ತಮವಾದ ಗುಣಗಳು ಯಾರಲ್ಲಿರುತ್ತವೆಯೋ ಅಂಥಾ ಮಹಾತ್ಮರುಗಳಿಗೋಸ್ಕರ ನಮಸ್ಕಾರ ಮಾಡುತ್ತೇನೆ. ಅಂದರೆ ಇಂಥಾ ಉತ್ತಮಗುಣಗಳು ಉಳ್ಳವರೆ ನಮಸ್ಕಾರಕ್ಕೆ ಅರ್ಹರೆಂದು ಭಾವವು. ॥೫೧॥

ಶ್ಲೋ॥ ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ ಸದಸಿ ವಾಕ್ಪಟುತಾ ಯುಧಿ ವಿಕ್ರಮಃ ॥ ಯಶಸಿ ಚಾಭಿರತಿರ್ವ್ಯಸನಂ ಶ್ರುತೌ ಪ್ರಕೃತಿಸಿದ್ಧಮಿದಂ ಹಿ ಮಹಾತ್ಮನಾಂ ॥ ೫೨ ॥

ಟೀಕು ॥ ವಿಪದಿ - ಆಪತ್ಕಾಲದಲ್ಲಿ, ಧೈರ್ಯಂ - ಧೈರ್ಯವು. ಅಥ- ಅನಂತರದಲ್ಲಿ, ಅಭ್ಯುದಯೇ - ಸಂಪತ್ಕಾಲದಲ್ಲಿ, (ಅಥವಾ ಉಚ್ಛ್ರಯಕಾಲದಲ್ಲಿ) ಕ್ಷಮಾ ಶಾಂತಿಯು, ಸದಸಿ- ಸಭಾಸದಲ್ಲಿ, ವಾಕ್ಪಟುತಾ- ವಕ್ತೃತ್ವವೂ

ಅಥವಾ ವಾಚಾಪಟುತ್ವವೂ, ಯುಧಿ- ಯುದ್ಧದಲ್ಲಿ, ವಿಕ್ರಮಃ ಪರಾಕ್ರಮವು ಯಶಸಿ - ಕೀರ್ತಿಯಲ್ಲಿಯೂ ಕೂಡ, ಅಭಿರತಿಃ - ಅಪೇಕ್ಷೆಯು, ಶ್ರುತೌ, ವೇದದಲ್ಲಿ, ವ್ಯಸನಂ- ಕುತೂಹಲವು, ಮಹಾತ್ಮನಾಂ- ಮಹಾತ್ಮರುಗಳಿಗೆ ಇದಂ ಈ ಗುಣವು, ಪ್ರಕೃತಿಸಿದ್ಧಂ- ಪ್ರಕೃತಿ- ಸ್ವಭಾವವಾಗಿ, ಸಿದ್ಧಂ- ಹುಟ್ಟಿದಂಥಾದ್ದು, ದ್ರುತವಿಲಂಬಿತ ವೃತ್ತಂ ॥ ೨ ॥

ತಾತ್ಪರ್ಯ—ಮಹಾತ್ಮರಿಗೆ ಯಾವಾಗಲೂ ಸದ್ವ್ಯಾಪಾರದಲ್ಲಿಯೇ ಬುದ್ಧಿಯಿರುತ್ತೆಂಬುವದನ್ನು ಹೇಳುತ್ತಾನೆ, ಹೇಗೆಂದರೆ:-ಮಹಾತ್ಮರುಗಳಿಗೆ ವಿಪತ್ಕಾಲದಲ್ಲಿ ಧೈರ್ಯವೂ, ಸಂಪತ್ತು ಬಂದಾಗ ಕ್ಷಮಾಗುಣವೂ, ಸಭೆಯಲ್ಲಿ ವಾಕ್ಪ್ರವೃತ್ತಿತ್ವವೂ, ಯುದ್ಧದಲ್ಲಿ ಪರಾಕ್ರಮವೂ, ಯಶಸ್ಸನ್ನು ಸಂಪಾದನೆ ಮಾಡೋಣದರಲ್ಲಿ ಆಸಕ್ತಿಯೂ, ವೇದಶಾಸ್ತ್ರದಲ್ಲಿ ಕುತೂಹಲವೂ, ಈ ಗುಣಗಳು ಸ್ವಭಾವದಿಂದ ಹುಟ್ಟುವವೆಂದು ತಾತ್ಪರ್ಯವು

ಶ್ಲೋ॥ ಕರೇ ಶ್ಲಾಘ್ಯಸ್ತ್ಯಾಗಶ್ಶಿರಸಿಗುರುಪಾದಪ್ರಣಯಿತಾ
ಮುಖೇ ಸತ್ಯಾವಾಣೀ ವಿಜಯಿಭುಜಯೋರ್ವೀರ್ಯಮತುಲಂ ॥ ಹೃದಿಸ್ವಚ್ಛಾವೃತ್ತಿಶ್ಶ್ರುತಮಧಿಗತಂಚ
ಶ್ರವಣಯೋರ್ವಿನಾಪ್ಯೈಶ್ವರ್ಯೇಣಪ್ರಕೃತಿಮಹತಾಂ
ಮಂಡನಮಿದಂ ॥ ೫೩ ॥

ಟೀಕು॥ ಕರೇ- ಹಸ್ತದಲ್ಲಿ, ತ್ಯಾಗಃ- ದಾನವು, ಶ್ಲಾಘ್ಯಃ ಶ್ರೇಷ್ಠವು ಶಿರಸಿ- ತಲೆಯಲ್ಲಿ, ಗುರುಪಾದಪ್ರಣಯಿತಾ - ಗುರು - ವಿದ್ಯಾಗುರುವಿನಲ್ಲಿ, ಅಥವಾ ಶ್ರೇಷ್ಠರಾದವರ, ಪಾದ- ಪಾದಗಳಲ್ಲಿ, ಪ್ರಣಯಿತಾ- ನಮ್ರಭಾವವು ಅಥವಾ ನಮಸ್ಕಾರವು, ಮುಖೇ - ಮುಖದಲ್ಲಿ, ಸತ್ಯಾ - ಯಥಾರ್ಥವಾದ, ವಾಣೀ- ಮಾತು, ಭುಜಯೋಃ- ಬಾಹುಗಳಿಗೆ, ಅತುಲಂ ಅಧಿಕವಾದ ವಿಜಯಿ- ಜಯಶೀಲವಾದ, ವೀರ್ಯಂ- ಪರಾಕ್ರಮವು, ಹೃದಿ- ಮನಸ್ಸಿನಲ್ಲಿ ಸ್ವಚ್ಛಾ- ನಿರ್ಮಲವಾದ, ವೃತ್ತಿಃ- ವ್ಯಾಪಾರವು, ಶ್ರವಣಯೋಃ ಶ್ರೋತ್ರಗಳಿಗೆ, ಅಧಿಗತಂ - ಅಭ್ಯಾಸಮಾಡಲ್ಪಟ್ಟ, ಶ್ರುತಂ - ವೇದಶಾಸ್ತ್ರವನ್ನು ಕೇಳೋಣವು, ಐಶ್ವರ್ಯೇಣ- ಐಶ್ವರ್ಯದಿಂದ, ವಿನಾಪಿ- ರಹಿತವಾದಂಥಾದ್ದಾದಾಗ್ಯೂ, ಮಹಾತ್ಮನಾಂ - ಮಹಾತ್ಮರುಗಳಿಗೆ, ಇದಂ - ಮೇಲೆ ಹೇಳಲ್ಪಟ್ಟಂಥದ್ದು, ಮಂಡನಂ ಅಲಂಕಾರವು, ಪ್ರಕೃತಿಸಿದ್ಧಂ- ಪ್ರಕೃತಿ ಸ್ವಭಾವದಿಂದ, ಸಿದ್ಧಂ ಪ್ರಾಪ್ತವಾದದ್ದು. (ಶಿಖರಿಣೀವೃತ್ತಂ) ॥ ೫೩ ॥

ತಾತ್ಪರ್ಯ—ಸತ್ಪುರುಷರಿಗೆ ಐಶ್ವರ್ಯ ಇಲ್ಲದೇನೆ ಸ್ವಭಾವಸಿದ್ಧವಾದ ಅಲಂಕಾರವನ್ನು ಹೇಳುತ್ತಾನೆ. ದಾನವನ್ನು ಮಾಡುವದು ಹಸ್ತಕ್ಕೆ ಅಲಂಕಾರ. ಕಂಕಣಾದಿಗಳಲ್ಲ ಗುರುಹಿರಿಯರಿಗೆ ನಮಸ್ಕಾರಮಾಡುವದು ಶಿರಸ್ಸಿಗೆ ಅಲಂಕಾರವು ಸತ್ಯವಾದ ಮಾತುಗಳನ್ನು ಆಡುವದು ಮುಖಕ್ಕೆಅಲಂಕಾರವು ಭುಜಗಳಿಗೆ ಜಯಶೀಲತ್ವವು, ಕಿವಿಗಳಿಗೆ ವೇದಶಾಸ್ತ್ರ ಶ್ರವಣವು ಅಲಂಕಾರವು ಇವುಗಳು ಮಹಾತ್ಮರಿಗೆ ಐಶ್ವರ್ಯವಿಲ್ಲದೇನೆ ಸ್ವಭಾವಸಿದ್ಧವಾದ ಅಲಂಕಾರವು ಎಂದುಭಾವವು. ||೫೩||

ಶ್ಲೋ|| ಪ್ರಾಣಾಘಾತಾನ್ನಿವೃತ್ತಿಃಪರಧನಹರಣೇಸಂಯಮ
ಸ್ಸತ್ಯವಾಕ್ಯಂಕಾಲೇಶಕ್ತ್ಯಾಪ್ರದಾನಂಯುವತಿಜನ
ಕಥಾಮೂಕಭಾವಃಪರೇಷಾಂ || ತೃಷ್ಣಾಸ್ರೋತೋ
ವಿಭಂಗೋಗುರುಷುಚವಿನಯಸ್ಸರ್ವಭೂತಾನುಕಂಪಾ
ಸಾಮಾನ್ಯಂಸರ್ವಶಾಸ್ತ್ರೇಷ್ವನುಪಹತವಿಧಿಶ್ಶ್ರೇ
ಯಸಾಮೇಷಪಂಥಾಃ || ೫೪ ||

ಟೀಕು | ಪ್ರಾಣಾಘಾತಾತ್ - ಕೊಲ್ಲುವುದರ ದೆಸೆಯಿಂದ, ನಿವೃತ್ತಿಃ- ಹಿಂದಿರುಗೋಣವು, ಪರಧನಹರಣೇ, ಪರ- ಅನ್ಯರ, ಧನ - ದ್ರವ್ಯವನ್ನು, ಹರಣೇ - ಅಪಹರಿಸೋಣದರಲ್ಲಿ, ಸಂಯಮಃ - ಇಂದ್ರಿಯ ನಿಗ್ರಹವು, (ಅಥವಾ ನಿರಾಸೆಯೂ) ಸತ್ಯವಾಕ್ಯಂ - ಸತ್ಯ - ಯಥಾರ್ಥವಾದ ವಾಕ್ಯಂ- ಮಾತು, ಕಾಲೆ- ಸಮಯದಲ್ಲಿ, ಶಕ್ತ್ಯಾ -ತನ್ನ ಸಾಮರ್ಥ್ಯದೊಡನೆ, ಪ್ರದಾನಂ ಕೊಡೋಣವು, ಯುವತಿಜನಕಥಾಮೂಕಭಾವಃ - ಯುವತಿಜನ- ಯೌವನ ಸ್ತ್ರೀಯರುಗಳ, ಕಥಾ - ಪ್ರಸ್ತಾಪದಲ್ಲಿ, ಮೂಕಭಾವಃ - ಜಡಭಾವವು, ಪರೇಷಾಂ- ಅನ್ಯರುಗಳ, ತೃಷ್ಣಾ - ಯಾಚನಾಶೆಯೆಂಬುವಂಥ, ಸ್ರೋತಃ- ನದಿಯು, ವಿಭಂಗಃ- ನಿರೋಧವು, ಗುರುಷುಚ- ಗುರುಜನಗಳಲ್ಲಿ. ವಿನಯಃ ನಮ್ರಭಾವವು, ಸರ್ವಭೂತಾನುಕಂಪಾ- ಸರ್ವ- ಸಮಸ್ತವಾದಂಥಾ, ಭೂತ- ಪ್ರಾಣಿಗಳಲ್ಲಿ, ಅನುಕಂಪಾ- ದಯವು, ಸರ್ವಶಾಸ್ತ್ರೇಷು - ಸರ್ವ- ಸಮಸ್ತವಾದಂಥಾ, ಶಾಸ್ತ್ರೇಷು - ಶಾಸ್ತ್ರಗಳಲ್ಲಿ, ಸಾಮಾನ್ಯವಾದ, ಅನುಪಹತ - ಅಪ್ರತಿಹತವಾದಂಥ, ಏಷವಿಧಿಃ- ಈ ವಿಧಿಯು, ಶ್ರೇಯಸಾಂ- ಶ್ರೇಯಸ್ಸುಗಳಿಗೆ, ಪಂಥಾಃ-ಮಾರ್ಗಸ್ವರೂಪವಾಗಿದ್ದವು. ಸ್ರಗ್ಧರಾವೃತ್ತ |೫೪|

ತಾತ್ಪರ್ಯ—ಸತ್ಪುರುಷರ ಸ್ವಭಾವವನ್ನು ಹೇಳುತ್ತಾನೆ. ಹೇಗೆಂದರೆ: ಪ್ರಾಣವನ್ನು ಕೊಲ್ಲದೆ ಇರೋಣವು, ಪರದ್ರವ್ಯಕ್ಕೆ ಆಶೆಪಡದೆ ಇರೋಣವು ಯೌವನಸ್ತ್ರೀಯರುಗಳ ಕಥಾಲಾಪವನ್ನು ಮಾಡದೆ ಇರೋಣವು, ಸಕಾಲದಲ್ಲಿ ತನ್ನ ಶಕ್ತ್ಯನುಸಾರ ದಾನವನ್ನು ಕೊಡೋಣವು, ಪರರನ್ನು ಯೋಚನೆ ಮಾಡದೆ ಇರೋಣವು, ಗುರುಜನಗಳಲ್ಲಿ ನಮ್ರಭಾವವಾ ಈ ಮೊದಲಾದವುಗಳೆ ಶ್ರೇಯಸ್ಸಿಗೆ ಮಾರ್ಗವಾಗಿರುತ್ತದೆಂದು ಭಾವವು.

ಶ್ಲೋ॥ ಸಂಪತ್ಸುಮಹತಾಂಚಿತ್ತಂಭವೇದುತ್ಪಲಕೋಮಲಂ
ಆಪತ್ಸುಚಮಹಾಶೈಲಶಿಲಾಸಂಘಾತಕರ್ಕಶಂ ॥೫೫॥

ಟೀಕು॥ ಸಂಪತ್ಸು- ಐಶ್ವರ್ಯಕಾಲದಲ್ಲಿ, ಮಹತಾಂ- ಮಹಾತ್ಮರುಗಳ, ಚಿತ್ತಂ-ಮನಸ್ಸು, ಉತ್ಪಲಕೋಮಲಂ ಉತ್ಪಲ-ನೈದಿಲೆ ಹುವ್ವಿನೋಪಾದಿಯಲ್ಲಿ, ಕೋಮಲಂ-ಮೃದುವಾದದ್ದು, ಆಪತ್ಸುಚ- ಆಪತ್ಕಾಲದಲ್ಲಿಯೂ ಕೂಡ ಮಹತಾಂ-ಮಹಾತ್ಮರುಗಳ, ಚಿತ್ತಂ-ಮನಸ್ಸು, ಶಿಲಾಸಂಘಾತಕರ್ಕಶವು- ಶಿಲಾ- ಕಲ್ಲಿನ, ಸಂಘಾತ-ಸಮೂಹದೋಪಾದಿಯಲ್ಲಿ, ಕರ್ಕಶಂ ಕಠಿನವಾದದ್ದು.

ತಾತ್ಪರ್ಯ—ಮಹಾತ್ಮರು ಆಪತ್ಕಾಲದಲ್ಲಿ ದುಃಖಪಡದೆ ಸಂತೋಷವಾಗಿರುತ್ತಾರೆ. ಎಂಬುವದನ್ನು ಹೇಳುತ್ತಾನೆ:-ಮಹಾತ್ಮರು ಕಷ್ಟಕಾಲದಲ್ಲಿ ದುಃಖಪಡದೆ ಮನಸ್ಸನ್ನು ಕಲ್ಲುಮಾಡಿಕೊಂಡಿರುತ್ತಾರೆ. ಸಂಪತ್ತು ಬಂದಕಾಲದಲ್ಲಿ ಮಹಾತ್ಮರ ಮನಸ್ಸು ಪುಷ್ಪದೋಪಾದಿಯಲ್ಲಿ ಕೇವಲ ಮೃದುವಾಗಿರುತ್ತೆ. ಅನುಷ್ಟುಭ ವೃತ್ತ ॥ ॥೫೫॥

ಶ್ಲೋ॥ ಪ್ರಿಯಾನ್ಯಾಯ್ಯಾವೃತ್ತಿರ್ಮಲಿನಮಸುಭಂಗೇಪ್ಯ
ಸುಕರಂತ್ವಸಂತೋನಾಭ್ಯರ್ಥ್ಯಾಸ್ಸುಹೃದಪಿನಯಾ
ಚ್ಯಃಕೃಶಧನಃ ॥ ವಿಪದ್ಯುಚ್ಚೈಃಸ್ಥೇಯಂಪದಮ
ನುವಿಧೇಯಂಚಮಹತಾಂಸತಾಂಕೇನೋದ್ದಿಷ್ಟಂವಿಷ
ಮಮಸಿಧಾರಾವ್ರತಮಿದಂ ॥ ೫೬ ॥

ಟೀಕು॥ ಮಹಾತ್ಮರುಗಳಿಗೆ. ನ್ಯಾಯ್ಯಾ- ನ್ಯಾಯುವಾದಂಥ, ವೃತ್ತಿಃ-ವ್ಯಾಪಾರವು, ಪ್ರಿಯಾ-ಇಷ್ಟವಾದಂಥಾದ್ದು, ಅಸುಭಂಗೇಪಿ- ಪ್ರಾಣಪ್ರಯಾಣ ಸಮಯದಲ್ಲೂ, ಮಲಿನಂ-ಮಾಲಿನ್ಯ, (ಅಥವಾ ದುಷ್ಕರ್ಮವು) ಅಸುಕ

ರಂ ಯೋಗ್ಯವಾದಂಥ ದ್ದಲ್ಲ ಅಸಂತಃ- ಅಯೋಗ್ಯಮನುಷ್ಯರು, ನಾಭ್ಯ
ರ್ಥ್ಯಾಃ- ಪ್ರಾರ್ಥನೆ ಮಾಡುವದಕ್ಕ ಯೋಗ್ಯರಲ್ಲವು, ಸುಹೃದಪಿ- ಸ್ನೇಹಿ
ತನೂ ಕೂಡ, ಕೃಶಧನಶ್ಚೇತ್- ಧನಹೀನನಾದಂಥಾವನಾದರೆ, ನಯಾಚ್ಯಃ-
ಯಾಚನೆ ಮಾಡುವದಕ್ಕೆ ಯೋಗ್ಯನಲ್ಲ, ವಿಪದಿ - ವಿಪತ್ಕಾಲದಲ್ಲಿ, ಉಚ್ಚೈಃ
ಅಧಿಕವಾದಂಥಾ, ಸ್ಥೈರ್ಯಂ- ಸ್ಥಿರತ್ವವೂ, ಮಹತಾಂ-ಮಹಾತ್ಮರಾದಂಥಾ
ವರುಗಳಿಗೆ, ಅನುವಿಧೇಯಂ-ಅನುಕೂಲವಾದಂಥ, ಪದಂಚ-ವ್ಯವಸಾಯವೂ
ಕೂಡ, ಇದಂ- ಈ ಪೂರ್ವೋಕ್ತವಾದ ವಿಷಮಂ-ವ್ಯತ್ಯಾಸವಾದ, ಅಸಿಧಾರಾವ,
ತಂ-ಅಸಿ-ಕತ್ತಿಯ, ಧಾರಾ-ಹದದ, ವ್ರತಂ- ನಿಯಮವು, ಕೇನೋದ್ದಿಷ್ಟಂ-
ಕೇನ-ಯಾರಿಂದ, ಉದ್ದಿಷ್ಟಂ ಉಪದೇಶ-ಮಾಡಲ್ಪಟ್ಟಿತು. (ಶಿಖರಿಣೀವೃತ್ತಂ)

ತಾತ್ಪರ್ಯ— ಈಶ್ಲೋಕದಲ್ಲಿ ಮಹಾತ್ಮರ ವ್ಯಾಪಾರವನ್ನೇ ಹೇಳ
ತ್ತಾನೆ-ನ್ಯಾಯವಾದ ವೃತ್ತಿಯಲ್ಲಿ ವಿಶ್ವಾಸವೂ, ಪ್ರಾಣಪ್ರಯಾಣ ಸಮ
ಯದಲ್ಲಿಯೂ ನ್ಯಾಯವಾದ ವೃತ್ತಿಯು ಕುಟಕಾರಿಗಳಿಂದ ಸಂಭಾಷಣೆ
ಮಾಡುವದಕ್ಕೆ ಯೋಗ್ಯವಲ್ಲದೆ ಇರೋಣವು ಕಷ್ಟಕಾಲದಲ್ಲಿ ಧೈರ್ಯವೂ
ಬಹು ಅನುಕೂಲವಾದ ವ್ಯಾಪಾರವೂ, ಪರರನ್ನು ಯಾಚನೆ ಮಾಡದಿರೋ
ಣವು ಈ ಮೊದಲಾದ ಅಸಿಧಾರಾ ವ್ರತವು ಮಹಾತ್ಮರುಗಳಿಗೆ ಯಾರಿಂದ
ಉಪದೇಶಿಸಲ್ಪಟ್ಟಿದೆಯೊ ತಿಳಿಯದೆಂಬ ಭಾವವು. ||೫೬||

ಶ್ಲೋ|| ಪ್ರದಾನಂಪ್ರಚ್ಛನ್ನಂಗೃಹಮುಪಗತೇಸಂಭ್ರಮವಿಧಿಃ
ಪ್ರಿಯಂಕೃತ್ವಾಮೌನಂಸದಸಿಕಥನಂಚಾಪ್ಯುಪಕೃ
ತೇಃ || ಅನುತ್ಸೇಕೋಲಕ್ಷ್ಮ್ಯಾಂನಿರಭಿಭವಸಾರಾಃಪರ
ಕಥಾಸ್ಸತಾಂಕೇನೋದ್ದಿಷ್ಟಂವಿಷಮಮಸಿಧಾರಾವ್ರ
ತಮಿದಂ ||೫೭||

ಟೀಕಾ|| ಪ್ರದಾನಂ-ಕೊಡೋಣವು, ಪ್ರಚ್ಛನ್ನಂ-ಗೋಪ್ಯವಾದಂಥಾ
ದ್ದು, ಅತಿಥೌ-ಅಭ್ಯಾಗತರು, ಅಥವಾ ಯಾಚಕರು, ಗೃಹಂ-ಮನೆಯನ್ನು,
ಉಪಗತೇಸತಿ-ಹೊಂದಿದಂಥಾವರಾಗುತ್ತಿರಲಾಗಿ, ಸಂಭ್ರಮವಿಧಿಃ- ಸಂಭ್ರ
ಮ-ಸಂತೋಷವಾದ,ವಿಧಿಃ-ವ್ಯಾಪಾರವು, ಪ್ರಿಯಂ-ಪರಹಿತವನ್ನು, ಕೃತ್ವಾ-
ಮಾಡಿ, ಮೌನಂ ಮೌನವಾಗಿ ಇರೋಣವು, ಸದಸಿ - ಸಭಾದಲ್ಲಿ, ಉಪಕೃ
ತೇಃ-ಉಪಕಾರದ, ಕಥನಂ- ಹೇಳೋಣವು, ಲಕ್ಷ್ಮ್ಯಾಂ- ಐಶ್ವರ್ಯ ಬಂದ
ಕಾಲದಲ್ಲಿ, ಅನುತ್ಸೇಕಃ-ಗರ್ವ ಇಲ್ಲದೆ ಇರೋಣವು, ಪರಕಥಾ-ಪರ-ಅನ್ಯರ,

ಕಥಾಃ-ಆಲಾಪಗಳು, ನಿರಭಿಭವಸಾರಾಃ- ನಿರ್-ಹೋದಂಥಾ, ಅಭಿಭವ-ತಿರಸ್ಕಾರದ, ಸಾರಾಃ-ಸ್ಫುರಣಾಂಶವುಳ್ಳವು ಇದು ಈ ಪೂರ್ವೋಕ್ತವಾದ, ವಿಷಮಂ-ವ್ಯಾತ್ಯಾಸವಾದ, ಅಸಿಧಾರಾವ್ರತಂ-ಅಸಿ-ಕತ್ತಿಯು, ಧಾರಾ-ಹದದ ವ್ರತಂ-ವ್ರತವು, ಸತಾಂ ಸತ್ಪುರುಷರಿಗೆ, ಕೇನೋದ್ದಿಷ್ಟಂ- ಕೇನ ಯಾವ ಪುರುಷರಿಂದ, ಉದ್ದಿಷ್ಟಂ-ಉಪದೇಶಿಸಲ್ಪಟ್ಟಿತೊ, ಶಿಖರಿಣೀವೃತ್ತಂ ॥೫೭॥

ತಾತ್ಪರ್ಯ—ಸತ್ಪುರುಷರು ತಾವು ಮಾಡಿದ ದಾನವನ್ನು ಒಬ್ಬರ ಕೈಯಲ್ಲಿ ಹೇಳುವದಿಲ್ಲ. ತಮ್ಮ ಮನೆಗೆ ಅತಿಥಿ ಅಭ್ಯಾಗತರು ಬಂದರೆ ಕೇವಲ ವಿಶ್ವಾಸದಿಂದ ಅವರ ಇಷ್ಟಾರ್ಥವನ್ನು ನೆರವೇರಿಸುವರು ಪರರು ತಮಗೆ ಮಾಡಿದಂಥ ಉಪಕಾರವನ್ನು ರಾಜಸಭಾದಲ್ಲಿಯೂ ವಿದ್ವತ್ಸಭಾದಲ್ಲಿಯೂ ಹೇಳುವರು. ಪರನಿಂದನೆಯ ಮಾತುಗಳನ್ನು ಆಡರು. ಇಂಥಾ ಕಷ್ಟತರವಾದ ವ್ರತವನ್ನು ಯಾರಿಂದ ಉಪದೇಶಮಾಡಿಸಿಕೊಂಡರೋ ಎಂದು ಭಾವವು. ॥೫೭॥

ಶ್ಲೋ॥ ಸಂತಪ್ತಾಯಸಿಸಂಸ್ಥಿತಸ್ಯಪಯಸೋನಾಮಾಪಿನ
ಶ್ರೂಯತೇಮುಕ್ತಾಕಾರತಯಾ ತದೇವನಳಿನೀಪತ್ರ
ಸ್ಥಿತಂದೃಶ್ಯತೇ । ಅಂತಸ್ಸಾಗರಶುಕ್ತಿಮಧ್ಯಪತಿತಂ
ತನ್ಮೌಕ್ತಿಕಂ ಜಾಯತೇ ಪ್ರಾಯೇಣಾ ಧಮಮಧ್ಯ
ಮೋತ್ತಮಜುಷಾಮೇವಂವಿಧಾವೃತ್ತಯಃ ॥೫೮॥

ಟೀಕು॥ ಸಂತಪ್ತಾಯಸಿ - ಸಂತಪ್ತ- ಚನ್ನಾಗಿ ಸುಡಲ್ಪಟ್ಟ, ಅಯಸಿ- ಕಬ್ಬಿಣದಲ್ಲಿ, ಸಂಸ್ಥಿತಸ್ಯ-ಇರುವಂಥ, ಪಯಸಃ ಉದಕದ, ನಾಮಾಪಿ ಹೆಸರೂಕೂಡ, ನಶ್ರೂಯತೇ- ಕೇಳಲ್ಪಡುವದಿಲ್ಲ, ತದೇವ-ಆವುದಕವೆ, ನಳಿನೀಪತ್ರೇಷು- ನಳಿನೀ-ಕಮಲದ, ಪತ್ರೇಷು ಎಲೆಗಳಲ್ಲಿ, ಮುಕ್ತಾಕಾರತಯಾ- ಮುತ್ತಿನ ಆಕಾರದೊಡನೆ, ಸಂದೃಶ್ಯತೆ ಕಾಣಲ್ಪಡುತ್ತದೆ, ತದೇವ ಆವುದಕವೆ, ಅಂತಸ್ಸಾಗರ ಶುಕ್ತಿಮಧ್ಯಪತಿತಂಸತ್ - ಅಂತಸ್ಸಾಗರ - ಸಮುದ್ರಮಧ್ಯದಲ್ಲಿರುವ, ಶುಕ್ತಿ-ಮುತ್ತಿನ ಚಿಪ್ಪಿನ, ಮಧ್ಯ- ಮಧ್ಯಭಾಗದಲ್ಲಿ, ಪತಿತಂಸತ್-ಬಿದ್ದದ್ದಾಗಿ, ತತ್-ಅದು, ಮೌಕ್ತಿಕಂ-ಮುಕ್ತಾಫಲವಾಗಿ, ಜಾಯತೇ-ಹುಟ್ಟುತ್ತದೆ, ಏವಂ- ಹೀಗೆ, ಪ್ರಾಯೇಣ- ಬಹು ಪ್ರಕಾರವಾಗಿ, ಅಧಮಮಧ್ಯಮೋತ್ತಮಜುಷಾಂ- ಅಧಮ-ನೀಚ ಆಶ್ರಯವನ್ನು, ಮಧ್ಯಮ-ಮಧ್ಯಮ ಪುರುಷರ ಆಶ್ರಯವನ್ನು, ಉತ್ತಮ- ಉತ್ತಮ ಪುರುಷರ ಆಶ್ರ

ಯುವನ್ನು, ಜುಷಾಂ-ಹೊಂದಿದಂಥಾವರುಗಳ, ವೃತ್ತಯಃ- ವ್ಯಾಪಾರಗಳು, ಏವಂವಿಧಾಃ- ಈ ರೀತಿಗಳು, ಭವಂತಿ-ಇರುತ್ತವೆ, ಯಥಾ ಸಂಖ್ಯಾಲಂಕಾರಃ ಶಾರ್ದೂಲ ವಿಕ್ರೀಡಿತವೃತ್ತಂ. ||೫೮||

ತಾತ್ಪರ್ಯ—ನೀಚರ ಆಶ್ರಯುವನ್ನು ಮಾಡಬಾರದು. ಮಹದಾಶ್ರಯುವನ್ನು ಮಾಡಬೇಕೆಂಬುವ ಸಂಗತಿಯನ್ನು ಹೇಳುತ್ತಾನೆ. ಹೇಗೆಂದರೆ:- ಸ್ವಾತಿಮಳೆ ಹನಿಯುನೀರು ಕಾವಕಾವಲಿಯುಲ್ಲಿ ಬಿದ್ದರೆ ಅದು ಬೇಳುತ್ತಲೆ ಅದರ ಹೆಸರೆ ಇಲ್ಲದಹಾಗೆ ಸೀದುಹೋಗುತ್ತೆ. ಅದೇಹನಿಯು ತಾವರೆ ಹೂವಿನ ರೇಖಿನ ಮೇಲೆ ಬಿದ್ದರೆ ಮುತ್ತಿನ ಹಾಗೆಕಾಣುತ್ತೆ ಹೊರತು ಮುತ್ತಲ್ಲ ಅದೇ ಸ್ವಾತೀಮಳೆ ಹನಿನೀರು ಸಮುದ್ರಮಧ್ಯವಲ್ಲಿ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಆಣಿಮುತ್ತುಗಳೆ ಆಗುತ್ತವೆ. ಹೀಗೆ ಪ್ರಾಯೇಣ ಅಧಮ ಮನುಷ್ಯರು ಮಧ್ಯಮ ಮನುಷ್ಯರು ಉತ್ತಮ ಮನುಷ್ಯರು ಇವರುಗಳನ್ನು ಹೊಂದಿದಂಥಾವರುಗಳ ವ್ಯಾಪಾರವು ಈ ರೀತಿಯಾಗುತ್ತೆಂದು ಭಾವವು. ||೫೮||

ಶ್ಲೋ|| ಯಃಪ್ರೀಣಯೇತ್ಸುಚರಿತ್ರೈಃಪಿತರಂ ಸಪುತ್ರೋಯ
ದ್ಭರ್ತುರೇವಹಿತಮಿಚ್ಛತಿತತ್ಕಳತ್ರಂ| ತನ್ಮಿತ್ರಮಾ
ಪದಿಸುಖೇಚಸಮಕ್ರಿಯಂಯದೇತತ್ತ್ರಯಂಜಗತಿ
ಪುಣ್ಯಕೃತೋಲಭಂತೇ ||೫೯||

ಟೀಕು || ಯಃ - ಯಾವ ಮನುಷ್ಯನು, ಸುಚರಿತ್ರೈಃ - ಒಳ್ಳೇ ಚರಿತ್ರೆಯಿಂದ, ಪಿತರಂ-ತಂದೆಯನ್ನು, ಪ್ರೀಣಯೇತ್-ಸಂತೋಷಪಡಿಸುತ್ತಾನೋ ಸಃ- ಅವನೇ, ಪುತ್ರಃ- ಮಗನು, ಯತ್- ಯಾವಳು, ಭರ್ತುಃ ಗಂಡನಿಗೆ, ಹಿತಂ- ಇಷ್ಟವನ್ನು, ಇಚ್ಛತಿ- ಕೋರುತ್ತಾಳೋ, ತತ್- ಅವಳೇ, ಕಳತ್ರಂ ಹೆಂಡತಿಯು, ಯತ್ - ಯಾರು, ಆಪದಿ- ಆಪತ್ಕಾಲದಲ್ಲಿಯೂ, ಸುಖೇಚ- ಸಂತೋಷಕಾಲದಲ್ಲಿಯೂ, ಸಮಕ್ರಿಯಂ-ಸಮಾನ ವ್ಯಾಪಾರವುಳ್ಳವನೋ ತತ್- ಅವನೆ. ಮಿತ್ರಂ- ಸ್ನೇಹಿತನು, ಏತತ್- ಈ, ತ್ರಯಂ- ಮೂರನ್ನೂ ಜಗತಿ- ಲೋಕದಲ್ಲಿ. ಪುಣ್ಯಕೃತಃ ಪುಣ್ಯವನ್ನು ಮಾಡಿದಂಥಾವರು, ಲಭಂತೇ ಹೊಂದುತ್ತಾರೆ | ೫೯ |

ತಾತ್ಪರ್ಯ—ಯಾವನು ಒಳ್ಳೆಯ ಚರಿತ್ರೆಯಿಂದ ತಂದೆಯನ್ನು ಸಂತೋಷಪಡಿಸುತ್ತಾನೋ ಅವನೇ ಮಗನು. ಯಾವಳು ಗಂಡನಿಗೇ ಹಿತವನ್ನುಂ

ಟು ಮಾತುಕಾಲದಲ್ಲಿ ಅವನ ಹೊಡೆಕಾಯು. ಕಷ್ಟಕಾಲದಲ್ಲಿಯೂ ಸುಖ ಕಾಲದಲ್ಲಿಯೂ ಸಮನಾದ ವ್ಯವಹಾರವುಳ್ಳವನೆ ಮಿತ್ರನು. ಇದು ಲೋಕದಲ್ಲಿ ಪುಣ್ಯವಂತರಿಗೆ ಲಭಿಸುತ್ತದೆಂದು ಭಾವವು. ||೫೯||

ಶ್ಲೋ|| ನಮ್ರತ್ವೇನೋನ್ನಮಂತಃಪರಗುಣಕಥನೈಸ್ಸ್ವಾನ್ಗುಣಾನ್ಖ್ಯಾಪಯಂತಸ್ಸ್ವಾರ್ಥಾನ್ಸಂಪಾದಯಂತೋ ವಿತತಪೃಥುತರಾರಂಭಯತ್ನಾಃಪರಾರ್ಥೇ || ಕ್ಷಾಂತ್ಯೈವಾಕ್ಷೇಪರೂಕ್ಷಾಕ್ಷರಮುಖರಮುಖಾನ್ದುರ್ಜನಾನ್ದುಃಖಯಂತಸ್ಸಂತಸ್ಸಾಶ್ಚರ್ಯಚರ್ಯಾಜಗತಿ ಬಹುಮತಾಃಕಸ್ಯನಾಭ್ಯರ್ಥನೀಯಾಃ || ೬೦ ||

ಟೀಕು || ನಮ್ರತ್ವೇನ - ನಮ್ರಭಾವದಿಂದ, ಉನ್ನಮಂತಃ - ಉನ್ನತ ಸ್ಥಿತಿಯನ್ನು ಹೊಂದಿದಂಥಾ, ಪರಗುಣಕಥನೈಃ- ಪರ - ಅನ್ಯರ, ಗುಣ- ಸದ್ಗುಣಗಳ, ಕಥನೈಃ - ಹೇಳೋಣದರಿಂದ, ಸ್ವಾನ್‌ಗುಣಾನ್ - ಸ್ವಕೀಯ ಗುಣಗಳನ್ನು ಖ್ಯಾಪಯಂತಃ - ಪ್ರಖ್ಯಾತಿಯನ್ನು ಹೊಂದಿಸುತ್ತಲಿರುವ, ಪರಾರ್ಥೇ-ಅನ್ಯರ ಪ್ರಯೋಜನಕ್ಕೋಸ್ಕರ, ವಿತತಪೃಥುತರಾರಂಭಯತ್ನಾಃ ವಿತತ- ವಿಸ್ತಾರವಾದ| ಪೃಥು ಹೆಚ್ಚಿದ, ಆರಂಭ- ಕಾರ್ಯೋದ್ಯೋಗದಲ್ಲಿ ಯತ್ನಾಃ- ಪ್ರಯತ್ನಗಳುಳ್ಳಂಥಾವರಾಗಿ, ಸ್ವಾರ್ಥಾನ್- ಸ್ವಕೀಯ ಪ್ರಯೋಜನಗಳನ್ನು, ಸಂಪಾದಯಂತಃ - ಸಂಪಾದಿಸಿಕೊಳ್ಳುವಂಥಾವರಾಗುತ್ತಾರೆ, ಕ್ಷಾಂತ್ಯೈವ- ಕ್ಷಮಾಗುಣದಿಂದಲೆ, ಆಕ್ಷೇಪರೂಕ್ಷಾಕ್ಷರಮುಖರಮುಖಾನ್- ಆಕ್ಷೇಪ - ಪರರ ಆಕ್ಷೇಪವಿಂದ, ರೂಕ್ಷ - ಕ್ರೂರವಾದ, ಅಕ್ಷರ - ಅಕ್ಷರಗಳಿಂದ ಅಥವಾ ವರ್ಣಗಳಿಂದ, ಮುಖರ:- ಶಬ್ದಗಳಾದ, ಮುಖಾನ್ ಮುಖಗಳುಳ್ಳಂಥ, ದುರ್ಜನಾನ್- ದುಷ್ಟಜನಗಳನ್ನು ದುಃಖಯಂತಃ- ಸಂಕಟಗೊಳಿಸುತ್ತಲಿರುವ, ಸಾಶ್ಚರ್ಯಚರ್ಯಾಃ- ಸಾಶ್ಚರ್ಯ- ಆಶ್ಚರ್ಯದಿಂದ ಕೂಡಿದ, ಚರ್ಯಾಃ- ವ್ಯಾಪಾರಗಳುಳ್ಳ, ಸಂತಃ- ಸತ್ಪುರುಷರು ಬಹುಮತಾಸ್ಸಂತಃ- ಬಹುಮಾನವುಳ್ಳಂಥಾವರಾಗಿ, ಕಸ್ಯ ಯಾವಮನುಷ್ಯರಿಗೆ, ನಾಭ್ಯರ್ಥನೀಯಾಃ- ಪ್ರಾರ್ಥನೆ ಮಾಡುವದಕ್ಕೆ ಯೋಗ್ಯರಲ್ಲ. ಅಥವಾ ಪೂಜಾರ್ಹರಾಗುವದಿಲ್ಲ ಅರ್ಥಾಂತರನ್ಯಾಸೋಲಂಕಾರಃ. ವಂಶಸ್ಥವೃತ್ತಂ

ತಾತ್ಪರ್ಯ|| ಸತ್ಪುರುಷರು ಆಶ್ಚರ್ಯವ್ಯಾಪಾರದಿಂದ ಸರ್ವಜನರಿಗೂ ಪೂಜನೀಯರಾಗಿರುತ್ತಾರೆಂಬುವದನ್ನು ಹೇಳುತ್ತಾನೆ. ತಾವು ಎಲ್ಲರಲ್ಲೂ

ನಮ್ರರಾಗಿರುವದರಿಂದ ಎಲ್ಲರೂ ಅವರಿಗೆ ಗೌರವವನ್ನು ಮಾಡುತ್ತಾರೆ. ಪರರ ಗುಣಶ್ಲಾಘನೆ ಮಾಡುವದರಿಂದ ತಮ್ಮಲ್ಲಿರುವ ಒಳ್ಳೆ ಗುಣಗಳನ್ನು ಪ್ರಕಾಶಮಾಡಿಕೊಳ್ಳುತ್ತಾರೆ. ಅನ್ಯರ ಪ್ರಯೋಜನಕ್ಕೋಸ್ಕರ ಪ್ರಯತ್ನ ಮಾಡುವವರಿಂದ ಸ್ವಪ್ರಯೋಜನವನ್ನು ಹೊಂದುತ್ತಾರೆ. ತಮ್ಮ ಕ್ಷಮಾಗುಣದಿಂದ ದುಷ್ಟಜನಗಳನ್ನು ದುಃಖಪಡಿಸುತ್ತಾರೆ. ಹೀಗೆ ಆಶ್ಚರ್ಯ ವ್ಯಾಪಾರ ವುಳ್ಳ ಸತ್ಪುರುಷರನ್ನು ಯಾರು ತಾನೆ ಪ್ರಾರ್ಥಿಸುವದಿಲ್ಲ ಎಲ್ಲರೂ ಪ್ರಾರ್ಥಿಸುತ್ತಾರೆಂದು ಭಾವವು. ||೬೦||

ಸುಜನ ಪದ್ಧತಿ ಸ್ಸಮಾಪ್ತಾ

—ಅಥಪರೋಪಕಾರ ಪದ್ಧತಿ ಪ್ರಾರಂಭವು—

ಶ್ಲೋ|| ಭವಂತಿನಮ್ರಾಸ್ತರವಃಫಲೋದ್ಗಮೈರ್ನವಾಂಬುಭಿ
ರ್ದೂರವಿಲಂಬಿನೋಘನಾಃ || ಅನುದ್ಧತಾಸ್ಸತ್ಪುರುಷಾ
ಸ್ಸಮೃದ್ಧಿಭಿಸ್ಸ್ವಭಾವಏವೈಷಪರೋಪಕಾರಿಣಾಂ ||

ಟೀಕು || ತರವಃ- ವೃಕ್ಷಗಳು, ಫಲೋದ್ಗಮೈಃ - ಫಲ - ಫಲಗಳ, ಉದ್ಗಮೈಃ ಭಾರಗಳಿಂದ, ನಮ್ರಾಃ- ಬಗ್ಗಿದಂಥಾವುಗಳು, ಭವಂತಿ- ಆಗುತ್ತವೆ, ಘನಾಃ - ಮೇಘಗಳು, ನವಾಂಬುಭಿಃ - ನವ - ನೂತನವಾದಂಥ ಅಂಬುಭಿಃ- ಉದಕಗಳಿಂದ, ದೂರವಿಲಂಬಿನಃ- ದೂರ - ದೂರವಾಗಿ, ವಿಲಂಬಿಃ- ಬಗ್ಗುವಂಥಾವುಗಳು, ಭವಂತಿ- ಆಗುತ್ತವೆ, ಸತ್ಪುರುಷಾಃ- ಸಜ್ಜನರುಗಳು, ಸಮೃದ್ಧಿಭಿಃ- ಐಶ್ವರ್ಯಗಳಿಂದ, ಅನುದ್ಧತಾಃ - ಉದ್ಧತರಾಗದೆ ಇರುವಂಥಾವರುಗಳು ಅಥವಾ ಗರ್ವಿಷ್ಠರಾಗದೆ ಇರತಕ್ಕಂಥಾವರು, ಭವಂತಿ ಆಗುತ್ತಾರೆ. ಪರೋಪಕಾರಿಣಾಂ - ಪರ - ಅನ್ಯರಿಗೆ, ಉಪಕಾರಿಣಾಂ - ಹಿತವನ್ನು ಮಾಡುತ್ತಾ ಇರುವಂಥಾ, ಸತಾಂ - ಸತ್ಪುರುಷರುಗಳ, ಸ್ವಭಾವಃ- ಸ್ವರೂಪವು, ಏಷಏವ- ಇದೇನೆ. ವೃತ್ತ ವುಪಜಾತಿಃ || ೬೧ ||

ತಾತ್ಪರ್ಯ|| ಪರೋಪಕಾರದ ರೀತಿಯನ್ನು ಹೇಳುತ್ತಾನೆ. ವೃಕ್ಷಗಳು ಫಲಗಳನ್ನು ಬಿಟ್ಟು ಅನಂತರ ಜನಗಳ ಉಪಕಾರಕ್ಕೋಸ್ಕರ ನೆಲದ ಕಡೆ ಬಗ್ಗುವಂಥಾದ್ದಾಗುತ್ತವೆ. ಮೇಘಗಳು ನೀರುತುಂಬಿಕೊಂಡು ಬಂದು ಭೂಮಿಯವರಿಗೂ ಬಗ್ಗಿ ಮಳೆಯನ್ನು ಹೊಯ್ಯುವಂಥಾದ್ದಾಗುತ್ತ

ಸತ್ಪುರುಷರು ಐಶ್ವರ್ಯದಿಂದ ಕೂಡಿದ ಕಾಲದಲ್ಲಿ ಗರ್ವಿಷ್ಠರಾಗದೆ ತಗ್ಗಿ ನಡೆಯುವಂಥಾವರಾಗುತ್ತಾರೆ. ಲೋಕದಲ್ಲಿ ಪರೋಪಕಾರವನ್ನು ಮಾಡುವ ಸಜ್ಜನರ ಸ್ವಭಾವವು ಹೀಗಿರುತ್ತದೆ ಎಂದು ಭಾವವು. ||೬೧||

ಶ್ಲೋ|| ಶ್ರೋತ್ರಂಶ್ರುತೇನೈವನಕುಂಡಲೇನ ದಾನೇನಪಾಣಿ
ರ್ನತುಕಂಕಣೇನ || ವಿಭಾತಿಕಾಯಃಕರುಣಾಕುಲಾನಾಂ
ಪರೋಪಕಾರೇಣನಚಂದನೇನ || ೬೨ ||

ಟೀಕು|| ಕರುಣಾಕುಲಾನಾಂ - ಕರುಣಾ-ದಯೆಯಿಂದ, ಆಕುಲಾನಾಂ-ವ್ಯಾಪ್ತರಾದಂಥ, ಸತಾಂ-ಸತ್ಪುರುಷರ, ಶ್ರೋತ್ರಂ-ಕರ್ಣವು, ಶ್ರುತೇನೈವ-ಧರ್ಮಶಾಸ್ತ್ರಗಳ ಶ್ರವಣದಿಂದಲೆ, ವಿಭಾತಿ-ಪ್ರಕಾಶಿಸುತ್ತದೆ, ಕುಂಡಲೇನ-ಕರ್ಣಕುಂಡಲದಿಂದ, ನವಿಭಾತಿ-ಪ್ರಕಾಶಿಸುವದಿಲ್ಲ, ಪಾಣಿಃ-ಹಸ್ತವು, ದಾನೇನ-ದಾನದಿಂದ, ವಿಭಾತಿ ಪ್ರಕಾಶಿಸುತ್ತದೆ, ಕಂಕಣೇನತು - ಕಂಕಣದಿಂದಲಾದರೋ, ನವಿಭಾತಿ-ಪ್ರಕಾಶಿಸುವದಿಲ್ಲ, ಕಾಯಃ- ದೇಹವು, ಪರೋಪಕಾರೇಣ ಇತರರಿಗೆ ಹಿತವನ್ನು ಮಾಡುವದರಿಂದಲೇ, ಚಂದನೇನ-ಶ್ರೀಗಂಧ ಲೇಪನದಿಂದ, ನ-ಅಲ್ಲ, |೬೨||

ತಾತ್ಪರ್ಯ— ಮಹಾತ್ಮರಿಗೆ ಸ್ವಭಾವವಾದ ಅಲಂಕಾರವನ್ನು ಹೇಳುತ್ತಾನೆ:-ಹೇಗೆಂದರೆ- ಕಿವಿಗಳಿಗೆ ವೇದಶಾಸ್ತ್ರ ಶ್ರವಣಗಳೆ ಅಲಂಕಾರವು, ಹಾಗಲ್ಲದೆ ಕುಂಡಲಾದಿಗಳು ಅಲಂಕಾರವಲ್ಲ. ಶರೀರಕ್ಕೆ ಪರೋಪಕಾರವೇ ಅಲಂಕಾರವಲ್ಲದೆ ಪರಿಮಳ ಗಂಧಲೇಪನೆ ಅಲಂಕಾರವಲ್ಲ. ಇದು ಕರುಣಾಶಾಲಿಗಳಾದ ಮಹಾತ್ಮರಿಗೆ ಈರೀತಿ ಅಲಂಕಾರವಾಗಿದೆ. ಅಂದರೆ ಕೈಗಳಿಂದ ದಾನ ಮಾಡಬೇಕು. ಕಿವಿಗಳಿಂದ ವೇದಶಾಸ್ತ್ರವನ್ನು ಕೇಳಬೇಕು, ಶರೀರದಿಂದ ಪರೋಪಕಾರವನ್ನು ಮಾಡಬೇಕು. ಯಾದಾಗಲೂ ದಯಾಳುವಾಗಿರಬೇಕು ಎಂದು ಭಾವವು. ||೬೨||

ಶ್ಲೋ|| ಪದ್ಮಾಕರಂದಿನಕರೋವಿಕಚಂಕರೋತಿಚಂದ್ರೋವಿಕಾ
ಸಯತಿಕೈರವಚಕ್ರವಾಳಂ || ನಾಭ್ಯರ್ಥಿತೋಜಲಧ
ರೋಪಿಜಲಂದದಾತಿಸಂತಸ್ಸ್ವಯಂಪರಹಿತೇವಿಹಿತಾ
ಭಿಯೋಗಾಃ || ೬೩ ||

ಟೀಕಾ ॥ ಪದ್ಮಾಕರಂ - ಸರೋವರವನ್ನು. ದಿನಕರಃ - ಸೂರ್ಯನು, ವಿಕಚಂ- ವಿಕಾಸವನ್ನು ಕರೋತಿ - ಮಾಡುತ್ತಾನೆ, ಚಂದ್ರಃ - ಚಂದ್ರನು, ಕೈರವಚಕ್ರವಾಳಂ ಕೈರವ - ನೈದಿಲೆ ಹೂವಿನ, ಚಕ್ರವಾಳಂ - ಸಮೂಹವನ್ನು, ವಿಕಾಸಯತಿ - ಅರಳಿಸುತ್ತಾನೆ, ಜಲಧರಃ - ಮೇಘವು, ನಾಭ್ಯರ್ಥಿತೋಪಿ - ಯಾಚನೆ ಮಾಡಲ್ಪಡದೇನೆ, ಜಲಂ - ಉದಕವನ್ನು, ದದಾತಿ - ಕೊಡುತ್ತದೆ, ಸಂತಃ- ಸತ್ಪುರುಷರು, ಸ್ವಯಂ- ತಾವೆ, ಪರಹಿತೇ- ಪರ- ಅನ್ಯರ, ಹಿತೇ- ಇಷ್ಟದಲ್ಲಿ, ವಿಹಿತಾಭಿಯೋಗಾಃ- ವಿಹಿತ- ಉಂಟುಮಾಡಲ್ಪಟ್ಟಂಥ, ಅಭಿಯೋಗಾಃ- ಇಷ್ಟವುಳ್ಳಂಥಾವರುಗಳು ಆಗುತ್ತಾರೆ, ಸ್ವಭಾವೋಕ್ತ್ಯಲಂಕಾರಃ ॥ ೬೩ ॥

ತಾತ್ಪರ್ಯ.—ಸೂರ್ಯನು ಕಮಲಗಳನ್ನು ಅರಳಿಸಿ ಸರೋವರಗಳನ್ನು ಪ್ರಕಾಶ ಮಾಡುತ್ತಾನೆ. ಚಂದ್ರನು ಕನ್ನೈದಿಲೆ ಪುಷ್ಪಗಳನ್ನು ಅರಳಿಸುತ್ತಾನೆ. ಮೇಘವು ಜನಗಳು ಯಾಚಿಸದಿದ್ದರೂ, ಪರಹಿತಕ್ಕೋಸ್ಕರ ಮಳೆಯನ್ನು ಸುರಿಸುತ್ತದೆ. ಹಾಗೆಯೇ ಸತ್ಪುರುಷರೂ ಕೂಡ ಪರರಿಗೆ ಹಿತವನ್ನು ಉಂಟುಮಾಡುತ್ತಾರೆಂದು ತಾತ್ಪರ್ಯವು. ॥ ೬೩ ॥

ಶ್ಲೋ॥ ಏಕೇಸತ್ಪುರುಷಾಃಪರಾರ್ಥಘಟಕಾಸ್ಸ್ವಾರ್ಥಾನ್ ಪರಿ
ತ್ಯಜ್ಯಯೇಸಾಮಾನ್ಯಾಸ್ತುಪರಾರ್ಥಮುದ್ಯಮುದ್ಯ
ಮಭೃತಸ್ಸ್ವಾರ್ಥಾವಿರೋಧೇನಯೇ ॥ ತೇಮೀಮಾ
ನುಷರಾಕ್ಷಸಾಃಪರಹಿತಂ ಸ್ವಾರ್ಥಾಯನಿಘ್ನಂತಿಯೇ
ಯೇತುಘ್ನಂತಿನಿರರ್ಥಕಂ ಪರಹಿತಂತೇಕೇನಜಾನೀ
ಮಹೇ ॥ ೬೪ ॥

ಟೀಕಾ॥ ಯೇ- ಯಾರುಗಳು, ಸ್ವಾರ್ಥಾನ್- ಸ್ವಪ್ರಯೋಜನಗಳನ್ನು, ಪರಿತ್ಯಜ್ಯ-ಬಿಟ್ಟು, ಪರಾರ್ಥಘಟಕಾಃ - ಪರ-ಅನ್ಯರ, ಅರ್ಥ- ಪ್ರಯೋಜನವನ್ನು, ಘಟಕಾಃ-ಉಂಟುಮಾಡುತ್ತಾರೋ, ತೇ- ಅವರುಗಳು, ಸತ್ಪುರುಷಾಃ- ಸಿಪಾಚೀನವಾದ ಮನುಷ್ಯರು, ಅಥವಾ ಸತ್ಪುರುಷರು, ಯೇತು- ಯಾರುಗಳು, ಸ್ವಾರ್ಥಾವಿರೋಧೇನ- ಸ್ವಾರ್ಥ- ಸ್ವಪ್ರಯೋಜನದ, ಅವಿರೋಧೇನ-ಹಾನಿಯಿಲ್ಲದೆ ಇತರೋಣದರೊಡನೆ, ಪರಾರ್ಥಮುದ್ಯಮಭೃತಃ- ಪರಾರ್ಥಂ- ಅನ್ಯರ ಪ್ರಯೋಜನಕ್ಕೋಸ್ಕರ, ಉದ್ಯಮ- ವ್ಯಾಪಾರವನ್ನು, ಭೃತಃ - ಹೊಂದಿರತಕ್ಕ, ತೇ - ಅವರುಗಳು, ಸಾಮಾನ್ಯಾಃ ಸಾಮಾನ್ಯ

ಮನುಷ್ಯರೆನ್ನಿಸಿ ಕೊಳ್ಳುತ್ತಾರೆ, ಯೇತು-ಯಾರುಗಳು, ಸ್ವಾರ್ಥಾ-ಯು- ಸ್ವ ಪ್ರಯೋಜನಕ್ಕೋಸ್ಕರ, ಪರಹಿತಂ-ಅನ್ಯರ ಪ್ರಯೋಜನವನ್ನು, ನಿಘ್ನಂತಿ- ಹೋಗಲಾಡಿಸುತ್ತಾರೋ, ತೇಮೀ-ತೆ ಪರಗಳು, ಮಾನ-ಷರಾಕ್ಷಸಾಃ- ಮನುಷ್ಯರಲ್ಲಿ ರಾಕ್ಷಸರೆನ್ನಿಸಿ ಕೊಳ್ಳುತ್ತಾರೆ, ಯೇತು- ಯಾವಜನಗಳು, ಅದರೋ ಪರಹಿತಂ- ಅನ್ಯರ ಪ್ರಯೋಜನವನ್ನು, ನಿರರ್ಥಕಂ ನಿಷ್ಪ್ರಯೋಜನವಾಗಿ, ಘ್ನಂತಿ ಹೋಗಲಾಡಿಸುತ್ತಾರೋ, ತೇ- ಅವರುಗಳು ಕೇ- ಯಾರೋ, ನಜಾನೀಮಹೇ - ತಿಳಿಯುಲಾರೆವು ಶಾರ್ದೂಲ ವಿಕ್ರೀಡಿತವೃತ್ತ. ಈಶ್ಲೋಕದಲ್ಲಿ ಉತ್ತಮ ಮಧ್ಯಮ ಅಥವಾ ಅಧಮಾಧಮ ಮನುಷ್ಯರನ್ನು ಹೇಳುತ್ತಾನೆ. ||೬೪||

ತಾತ್ಪರ್ಯ—ಯಾವ ಮನುಷ್ಯರು ಪರರ ಪ್ರಯೋಜನಕ್ಕೋಸ್ಕರ ತಮ್ಮ ಪ್ರಯೋಜನವನ್ನಾದರೂ ಬಿಟ್ಟು ಪರರ ಪ್ರಯೋಜನವನ್ನುಂಟು ಮಾಡುತ್ತಾರೋ ಅವರು ಉತ್ತಮ ಮನುಷ್ಯರು. ಯಾರು ತಮ್ಮ ಪ್ರಯೋಜನವನ್ನು ಹಾಳು ಮಾಡಿಕೊಳ್ಳದೆ ಪರರ ಪ್ರಯೋಜನವನ್ನು ಮಾಡುತ್ತಾರೊ ಅವರು ಸಾಮಾನ್ಯ ಮನುಷ್ಯರು ಯಾರು ತಮ್ಮ ಪ್ರಯೋಜನಕ್ಕೋಸ್ಕರ ಪರರಿಗೆ ಆಗುವ ಪ್ರಯೋಜನವನ್ನು ಕೆಡಿಸುತ್ತಾರೋ ಅವರು ಮನುಷ್ಯರಲ್ಲಿ ರಾಕ್ಷಸರು ಎಂದು ಹೇಳಬೇಕು. ಯಾರು ತಮಗೂ ಪ್ರಯೋಜನವಿಲ್ಲದೆ ಎರಡನೆಯವರಿಗೆ ಆಗುವ ಪ್ರಯೋಜನವನ್ನು ಕಡಿಸುತ್ತಾರೋ ಅಂಥಾವರನ್ನು ಯಾರೆಂತಲೂ ಹೇಳುವವಕ್ಕೆ ಆಗುವದಿಲ್ಲ. ಅಂದರೆ ಅವರು ರಾಕ್ಷಸರಿಗಿಂತ ಕನಿಷ್ಠರೆಂದು ಹೇಳಬೇಕು. (ಶಾರ್ದೂಲ ವಿಕ್ರೀಡಿತ ವೃತ್ತಂ) ||೬೪||

ಶ್ಲೋ|| ಪಾಪಾನ್ನಿವಾರಯತಿಯೋಜಯತೇಹಿತಾಯಗುಹ್ಯಂ
ನಿಗೂಹತಿಗುಣಾನ್ಪ್ರಕಟೀಕರೋತಿ । ಆಪದ್ಗತಂ
ಚನಜಹಾತಿದದಾತಿಕಾಲೇಸನ್ಮಿತ್ರಲಕ್ಷಣಮಿದಂ ಪ್ರ
ವದಂತಿಸಂತಃ ||೬೫||

ಟೀಕು|| ಪಾಪಾತ್-ಪಾಪಗಳನ್ನು, ನಿವಾರಯತಿ-ಹೋಗಲಾಡಿಸುತ್ತದೆ, ಹಿತಾಯ- ಶ್ರೇಯಸ್ಸಿಕ್ಕೋಸ್ಕರ, ಯೋಜಯತೇ - ಕೂಡಿಸುತ್ತದೆ, ಗುಹ್ಯಂ- ರಹಸ್ಯವನ್ನು, ನಿಗೂಹತಿ- ಗೋಪನ ಮಾಡುತ್ತದೆ, ಗುಣಾನ್-ಒಳ್ಳೆ ಗುಣಗಳನ್ನು, ಪ್ರಕಟೀಕರೋತಿ-ಪ್ರಕಾಶ ಮಾಡುತ್ತದೆ, ಕಾಲೇ- ಕಷ್ಟಕಾಲದಲ್ಲಿ,

ದದಾತಿ-ಕೊಡುತ್ತಾನೆ, ಆಪದ್ಗತಂಚ-ಆಪತ್ಕಾಲದಲ್ಲಿ ಪ್ರಾಪ್ತವಾದ್ದನ್ನು, ನ ಜಹಾತಿ- ಬಿಡುವದಿಲ್ಲ, ಇದಂ- ಈ ಸಮಸ್ತವನ್ನು, ಸಂತಃ- ಸತ್ಪುರುಷರು, ಸನ್ಮಿತ್ರಲಕ್ಷಣಂ-ಸತ-ಸಮೀಚೀನವಾದ ಮಿತ್ರ-ಸ್ನೇಹಿತರ ಲಕ್ಷಣಂ-ಸ್ವಭಾವವೆಂದು, ಪ್ರವದಂತಿ-ಹೇಳುತ್ತಾರೆ, ಸ್ವಭಾವೋಕ್ತ್ಯಲಂಕಾರಃ ವಸಂತತಿಲಕಾವೃತ್ತಂ. ||೬೫||

ತಾತ್ಪರ್ಯ—ಸನ್ಮಿತ್ರ ಸ್ವಭಾವವನ್ನು ಹೇಳುತ್ತಾನೆ, ಸನ್ಮಿತ್ರನು ಒಳ್ಳೆ ಬೋಧನೆಗಳಿಂದ ಸ್ನೇಹಿತನ ಪಾಪಗಳನ್ನು ಹೋಗಲಾಡಿಸಿ ಅವನಿಗೆ ಪುಣ್ಯವನ್ನುಂಟು ಮಾಡುತ್ತಾನೆ. ಸ್ನೇಹಿತನ ರಹಸ್ಯವಾದ ಸಂಗತಿಗಳನ್ನು ಪ್ರಕಟ ಮಾಡುವದಿಲ್ಲ. ಒಳ್ಳೇಗುಣಗಳನ್ನು ಪ್ರಕಟ ಮಾಡುತ್ತಾನೆ ಆಪತ್ಕಾಲದಲ್ಲಿ ಬಂದದ್ದನ್ನು ಬಿಡದೆ ಅನುಭವಿಸುತ್ತಾನೆ. ಅಂಥಾ ಆಪತ್ಕಾಲದಲ್ಲಿಯೂ ಯಾಚನೆಮಾಡಿದವರಿಗೆ ಕೊಡುತ್ತಾರೆ. ಈ ಎಲ್ಲವೂ ಸನ್ಮಿತ್ರ ಲಕ್ಷಣವೆಂದು ಸತ್ಪುರುಷರು ಹೇಳುತ್ತಾರೆ. ||೬೫||

ಶ್ಲೋ|| ಕ್ಷೀರೇಣಾತ್ಮಗತೋದಕಾಯಹಿಗುಣಾದತ್ತಾಃಪುರಾ
ತೇಖಿಲಾಃಕ್ಷೀರೋತ್ತಾಪಮವೇಕ್ಷ್ಯತೇನಪಯಸಾಸ್ವಾ
ತ್ಮಾ ಕೃಶಾನೌಹುತಃ || ಗಂತುಂಪಾವಕಮುನ್ಮನಸ್ತ
ದಭವ ದ್ದೃಷ್ಟ್ವಾತುಮಿತ್ರಾಪದಂಯುಕ್ತಂತೇನಜ
ಲೇನಶಾಮ್ಯತಿಸತಾಂ ಮೈತ್ರೀಪುನಸ್ತ್ವೀದೃಶೀ ||೬೬||

ಟೀಕು! ಕ್ಷೀರೇಣ-ಹಾಲಿನಿಂದ, ಆತ್ಮಗತೋದಕಾಯ- ಆತ್ಮ- ತನ್ನನ್ನು, ಗತ-ಹೊಂದಿದಂಥ, ಉದಕಾಯ- ನೀರಿಗೋಸ್ಕರ, ಪುರಾ- ಮೊದಲು, ಅಖಿಲಾಃ ಸಮಸ್ತಗಳಾದ, ಗುಣಾ-ಧಾವಳ್ಯ ಮಾಧುರ್ಯಾದಿ ಗುಣಗಳು, ದತ್ತಾಹಿ-ಕೊಡಲ್ಪಟ್ಟವಷ್ಟೆ, ತತಃ ಅನಂತರದಲ್ಲಿ, ಕ್ಷೀರೋತ್ತಾಪಂ- ಕ್ಷೀರ-ಹಾಲಿನ, ಉತ್ತಾಪಂ- ಸಂತಾಪವನು, ಅವೇಕ್ಷ್ಯ- ನೋಡಿ, ಪಯಸ-ಉದಕದಿಂದ, ಸ್ವಾತ್ಮಾ-ತಾನು, ಕೃಶಾನೌ ಅಗ್ನಿಯಲ್ಲಿ, ಹುತಃ-ಹೋಮಮಾಡಲ್ಪಟ್ಟಿತು, ತತ್-ಆಕ್ಷೀರವು, ಮಿತ್ರಾಪದಂ-ಮಿತ್ರ-ಸ್ನೇಹಿತನ, ಆಪದಂ-ವಿಪತನ್ನು, ದೃಷ್ಟ್ವಾ ನೋಡಿ, ಪಾವಕಂ- ಅಗ್ನಿಯನ್ನು, ಗಂತುಂ- ಹೊಂದುವದಕ್ಕೋಸ್ಕರ. ಉನ್ಮನಾಃ ಉದ್ಯುಕ್ತವಾದ ಮನಸ್ಸುಳ್ಳಂಥಾದ್ದು, ಅಭವತ್-ಆಯಿತು, ಯುಕ್ತಂಹಿ-ಯೋಗ್ಯವಾದ್ದೇ ಸರಿ, ತೇನ ಆ ಪೂರ್ವೋಕ್ತವಾದ, ಜಲೇನ ಉದಕದಿಂದ, ಶಾಮ್ಯತಿ - ಶಾಂತಿಯನ್ನು ಹೊಂದುತ್ತದೆ,

ಸತಾಂ-ಸತ್ಪುರುಷರ, ವೃತ್ತಿಃ ಪುನಃ-ವಿಚಿತ್ರತ್ವವಾದರೋ, ಈದೃಶೀ-ಇಂ ಥಾದ್ದು, ಉತ್ಪ್ರೇಕ್ಷಾಲಂಕಾರೋತ್ಥಾಪಿತ ಅರ್ಥಾಂತರನ್ಯಾಸಾಲಂಕಾರಃ. ವಸಂತತಿಲಕಾವೃತ್ತಂ. ||೬೬||

ತಾತ್ಪರ್ಯ—ಈ ಶ್ಲೋಕದಲ್ಲಿ ಸತ್ಪುರುಷರ ವೃತ್ತಿಯನ್ನು ಹೇಳು ತ್ತಾನೆ. ಹೇಗೆಂದರೆ:-ಕ್ಷೀರದ ಜೊತೆಯಲ್ಲಿ ಸೇರಿದ ನೀರಿಗೆ ಕ್ಷೀರವು ತನ್ನಲ್ಲಿರುವ ಮಾಧುರ್ಯವನ್ನು ಧಾವಳ್ಯ ಮುಂತಾದ ಎಲ್ಲಗುಣಗಳನ್ನು ಕೊಡುತ್ತದೆ. ಅನಂತರ ಆಕ್ಷೀರವನ್ನು ಕಾಯುವದಕ್ಕೆ ಇಟ್ಟಕಾಲದಲ್ಲಿ ನೀರು ಕ್ಷೀರದ ಸಂತಾಪವನ್ನು ನೋಡಲಾರದೆ ತನ್ನನ್ನು ಅಗ್ನಿಗೆ ಆಹುತಿಮಾಡಿ ಕೊಡುತ್ತದೆ. ಕ್ಷೀರವು ನೀರನ್ನುನೋಡಿ ಅಗ್ನಿಯನ್ನು ಶಾಂತಿಗೊಂದಿಸುವದಕ್ಕೋಸ್ಕರ ಮೇಲಕ್ಕೆ ಉಕ್ಕಿಬರುತೆ. ಹಾಗೆ ಪುನಃ ಆಕ್ಷೀರದ ಮೇಲೆ ನೀರು ಹಾಕೋಣ ಆನೀರಿನಿಂದ ಶಾಂತಿಯನ್ನು ಹೊಂದುತ್ತದೆ. ಸತ್ಪುರುಷರ ವೃತ್ತಿಯೂ ಹೀಗೆಯೇ ಇರುತ್ತದೆ ಎಂದು ಅಭಿಪ್ರಾಯವು.

ಶ್ಲೋ|| ಇತಸ್ಸ್ವಪಿತಿಕೇಶವಃಕುಲಮಿತಸ್ತದೀಯದ್ವಿಷಾಮಿ
ತ್ರಶ್ಚರಣಾರ್ಥಿನಾಂಶಿಖರಿಣಾಂಗಣಾಶ್ಶೇರತೇ || ಇತೋ
ಪಿಬಡಬಾನಲಸ್ಸಹಸಮಸ್ತಸಂವರ್ತಕೈರಹೋವಿತತ
ಮೂರ್ಜಿತಂಭರಸಹಂಚಸಿಂಧೋರ್ವಪುಃ ||೬೭||

ಟೀಕಾ|| ಇತಃ-ಈ ಪ್ರದೇಶದಲ್ಲಿ, ಕೇಶವಃ-ವಿಷ್ಣುವು, ಸ್ವಪಿತಿ-ಮಲಗಿ ಇದ್ದಾನೆ, ಇತಃ-ಮತ್ತೊಂದು ಪ್ರದೇಶದಲ್ಲಿ, ತದೀಯದ್ವಿಷಾಂ-ತದೀಯ-ವಿಷ್ಣುಸಂಬಂಧವಾದಂಥ. ದ್ವಿಷಾಂ-ದ್ವೇಷಿಗಳ, ಕುಲಂ-ಸಮೂಹವು, ತಿಷ್ಠತಿ-ಇದೆ, ಇತಶ್ಚ-ಈ ಸ್ಥಳದಲ್ಲಿ, ಶರಣಾರ್ಥಿನಾಂ-ಶರಣ-ಸಂರಕ್ಷಣೆಯನ್ನು, ಅರ್ಥಿನಾಂ ಯಾಚಿಸುತ್ತಲಿರುವಂಥಾ, ಶಿಖರಿಣಾಂ ಪರ್ವತಗಳ, ಗಣಾಃ-ಸಮೂಹಗಳು, ಶೇರತೇ-ಇರುತ್ತವೆ, ಸಮಸ್ತಸಂವರ್ತಕೈಃ-ಸಮಸ್ತ ಅನೇಕಗಳಾದಂಥ. ಸಂವರ್ತಕೈಸ್ಸಹ-ಕಾಲಮೇಘಗಳೊಡನೆ ಕೂಡಿ, ಇತೋಪಿ-ಈ ಪ್ರದೇಶದಲ್ಲಿ, ಬಡಬಾನಲಃ-ಬಡಬಾಗ್ನಿಯು, ವರ್ತತೇ-ಇದೆ, ಊರ್ಜಿತಂ-ಊರ್ಜಿತವಾದಂಥ, ವಿತತಂ-ವಿಸ್ತಾರವಾದ, ಭರಸಹಂ-ಭರ ಭಾರವನ್ನು ಸಹಂ-ಸಹಿಸತಕ್ಕಂಥಾ, ಸಿಂಧೋಃ-ಸಮುದ್ರನ, ವಪುಃ ಶರೀರವು, ಅಹೋ-ಆಶ್ಚರ್ಯವಾದದ್ದು, ಅಧಿಕಾಲಂಕಾರಃ. ಪೃಥ್ವೀವೃತ್ತಂ. ||೬೭||

ತಾತ್ಪರ್ಯ—ಸಮುದ್ರರಾಜನ ಸಹನವು ಅತ್ಯಾಶ್ಚರ್ಯವಾಗಿರುತ್ತದೆ. ಹೇಗೆಂದರೆ— ಸಕಲ ಭುವನವನ್ನು ಹೊಟ್ಟೆಯಲ್ಲಿಟ್ಟುಕೊಂಡಿರುವ ಕೃಷ್ಣನನ್ನು ಒಂದು ಪ್ರದೇಶದಲ್ಲಿಯೂ ಮತ್ತೊಂದು ಕಡೆಯಲ್ಲಿ ಹಿರಣ್ಯಾಕ್ಷ ರಾವಣಾದಿಗಳ ಸಮೂಹವನ್ನು, ಮತ್ತೊಂದು ಪ್ರದೇಶದಲ್ಲಿ ಶರಣಾರ್ಥಿಗಳಾದ ಮೈನಕಾದಿ ಪರ್ವತಗಳ ಸಮೂಹವನ್ನು, ಇನ್ನೊಂದು ಪ್ರದೇಶದಲ್ಲಿ ಕಾಲಮೇಘಗಳಿಂದೊಡಗೂಡಿದ ಬಡಬಾಗ್ನಿಯನ್ನು, ಇಟ್ಟುಕೊಂಡಿರುವ ಸಮುದ್ರರಾಜನ ಶರೀರದ ಸಹನವು ಅತ್ಯಾಶ್ಚರ್ಯಕರವಾದುದು. ಸನ್ಮಿತ್ರರು ತಮಗೆ ಎಷ್ಟು ಶ್ರಮವಾದರೂ ಸಹಿಸಿಕೊಂಡು ತಮ್ಮನ್ನು ಹೊಂದಿದವರಿಗೆ ಸುಖವನ್ನುಂಟು ಮಾಡುತ್ತಾರೆಂದು ತಾತ್ಪರ್ಯವು. ||೬೭||

ಶ್ಲೋ|| ಜಾತಃ ಕೂರ್ಮಸ್ಸ ಏಕಃ ಪೃಥುಭುವನಭರಾಯಾರ್ಪಿತಂ
ಯೇನ ಪೃಷ್ಠಂ ಶ್ಲಾಘ್ಯಂ ಜನ್ಮ ಧ್ರುವಸ್ಯ ಭ್ರಮತಿ ನಿಯ
ಮಿತಂ ಯತ್ರ ತೇಜಸ್ವಿಚಕ್ರಂ || ಸಂಜಾತವ್ಯರ್ಥ
ಪಕ್ಷಾಃ ಪರಹಿತಕರಣೇ ನೋಪರಿಷ್ಟಾನ್ನ ಚಾಧೋ ಬ್ರ
ಹ್ಮಾಂಡೋದುಂಬರಾಂತರ್ಮಶಕವದಪರೇ ಜಂತವೋ
ಜಾತನಷ್ಟಾಃ || ೬೮ ||

ಟೀಕಾ|| ಯೇನ - ಯಾವ ಕೂರ್ಮನಿಂದ, ಪೃಥುಭುವನಭರಾಯ - ಪೃಥು-ದೊಡ್ಡದಾದ, ಭುವನ-ಲೋಕಗಳ, ಭರಾಯ-ಭಾರವಹನಕ್ಕೋಸ್ಕರ ಪೃಷ್ಠಂ-ಬೆನ್ನು ಅಥವಾ ಪೃಷ್ಠಭಾಗವು, ಅರ್ಪಿತಂ - ಕೊಡಲ್ಪಟ್ಟಿತೊ ಜಾತಃ-ಹುಟ್ಟಿದಂಥ, ಸಏಕಃ-ಆ ಯಾ ಕೂರ್ಮನೊಬ್ಬನು, ಯತ್ರ-ಯಲ್ಲಿ, ನಿಯಮಿತಂ-ಕ್ಲುಪ್ತಮಾಡಲ್ಪಟ್ಟ, ತೇಜಸ್ವಿಚಕ್ರಂ-ತೇಜೋಮಂಡಲವನ್ನು, ಅಂದರೆ ನಕ್ಷತ್ರ ಮಂಡಲವನ್ನು, ಭ್ರಮತಿ- ತಿರಿಗಿಸುತ್ತಾನೊ, ಅಥವಾ ತನ್ನ ಅಧೀನವಾಗಿ ಮಾಡಿಕೊಂಡು ಇದ್ದಾನೊ (ಅಂಥ) ಧ್ರುವಸ್ಯ- ಧ್ರುವನ, ಜನ್ಮ-ಜನನವು, ಶ್ಲಾಘ್ಯಂ ಶ್ರೇಷ್ಠವಾದದ್ದು, ಸಂಜಾತವ್ಯರ್ಥಪಕ್ಷಾಃ- ಸಂಜಾತ ಹುಟ್ಟಿದಂಥಾ, ವ್ಯರ್ಥ-ನಿರರ್ಥಕಗಳಾದಂಥ, ಪಕ್ಷಾಃ ರೆಕ್ಕೆಗಳುಳ್ಳಂಥಾ ಅಥವಾ ಸಂಜಾತವ್ಯರ್ಥವಕ್ಷಾಃ - ಸಂಜಾತ - ಹುಟ್ಟಿದಂಥ, ವ್ಯರ್ಥ - ನಿಷ್ಪ್ರಯೋಜನಗಳಾದ, ವಕ್ಷಾಃ - ವಕ್ಷಸ್ಥಳಗಳುಳ್ಳ, ಜಂತವಃ- ಪ್ರಾಣಿಗಳು. ಪರಹಿತಕರಣೇ-ಪರ-ಅನ್ಯರಿಗೆ, ಹಿತ- ಇಷ್ಟವನ್ನು, ಕರಣೇ- ಉಂಟು ಮಾಡುವುದರಲ್ಲಿ, ಉಪರಿಷ್ಟಾತ್-ಮೇಲುಭಾಗದಲ್ಲಿರುವವುಗಳು, ನಚ-ಇಲ್ಲ,

ಅಧಃ-ಕೆಳಭಾಗದಲ್ಲಿರುವವುಗಳು, ನಚ- ಇಲ್ಲ. ಕಿಂತು-ಮತ್ತೇನೆಂದರೋ, ಬ್ರಹ್ಮಾಂಡೋದುಂಬರಾತ್ಮಶಕವತ್, ಬ್ರಹ್ಮಾಂಡ-ಬ್ರಹ್ಮಾಂಡವೆಂಬುವಂಥ, ಔದುಂಬರ- ಅತ್ತಿಹಣ್ಣಿನ, ಅಂತಃ - ಒಳಗಡೆಯಲ್ಲಿರುವ, ಮಶಕವತ್-ಸೊಳ್ಳೆಗಳೋಪಾದಿಯಲ್ಲಿ, ಜಾತನಷ್ಟಾಃ ಜತ-ಹುಟ್ಟುವದು, ನಷ್ಟಾಃ-ಸಾಯುವದು, ಭವಂತಿ - ಆಗುತ್ತವೆ, ರೂಪಕೋಪಮಾನಯೋಃ ಸಂಕರಃ, ಸ್ರಗ್ಧರಾವೃತಂ, ||೬೮||

ತಾತ್ಪರ್ಯ — ಕೂರ್ಮನು ಅವತಾರ ಮಾಡಿ ಚತುರ್ದಶ ಲೋಕಗಳ ಭಾರವನ್ನು ವಹಿಸಿಕೊಂಡು ತನ್ನ ಬೆನ್ನಿನಮೇಲೆ ಭೂಮಿಯನ್ನು ಪಾತಾಳದಲ್ಲಿ ಹೊತ್ತುಕೊಂಡಿದ್ದಾನೆ. ಆದಿಕೂರ್ಮನು ಹುಟ್ಟಿದ್ದು ಸಾರ್ಥಕವಾಯಿತು. ಮೇಲುಭಾಗದಲ್ಲಿ ಧ್ರುವನು ಶಿಂಶುಮಾರಚಕ್ರವನ್ನು ಹಿಡಿದುಕೊಂಡಿದ್ದಾನೆ. ಈ ಧ್ರುವನು ಹುಟ್ಟಿದ್ದು ಸಾರ್ಥಕವಾಯಿತು. ಮಿಕ್ಕವರು ಹುಟ್ಟಿದ್ದು ಅತ್ತಿಹಣ್ಣಿನಲ್ಲಿ ಹುಟ್ಟಿದ ಸೊಳ್ಳೆಗಳಂತೆ ಈ ಬ್ರಹ್ಮಾಂಡಗೋಳವೆಂಬ ಅತ್ತಿಹಣ್ಣಿನಲ್ಲಿರುವ ಜಂತುಗಳು ಹುಟ್ಟುತ್ತಲೂ ಸಾಯುತ್ತಲೂ ಇವೆ. ಇವುಗಳಿಂದ ಕೆಳಭಾಗಕ್ಕೂ ಪ್ರಯೋಜನವಿಲ್ಲ ಮೇಲುಭಾಗಕ್ಕೂ ಪ್ರಯೋಜನ ವಿಲ್ಲವೆಂಬ ತಾತ್ಪರ್ಯವು. ||೬೮||

ಶ್ಲೋ|| ತೃಷ್ಣಾಂಛಿಂಧಿಭಜಕ್ಷಮಾಂಜಹಿಮದಂಪಾಪೇರತಿಂ
ಮಾಕೃಥಾಃಸತ್ಯಂಬ್ರೂಹ್ಯನುಯಾಹಿ ಸಾಧುಪದ
ವೀಂಸೇವಸ್ವವಿದ್ವಜ್ಜನಂ || ಮಾನ್ಯಾನ್ಮಾನಯವಿ
ದ್ವಿಷೋಪ್ಯನುನಯ ಪ್ರಖ್ಯಾಪಯಪ್ರಶ್ರಯಂಕೀ
ರ್ತಿಂ ಪಾಲಯದುಃಖಿತೇಕುರುದಯಾ ಮೇತತ್ಸತಾಂ
ಚೇಷ್ಟಿತಂ ||೬೯||

ಟೀಕು|| ಹೇನರ-ಎಲೈ ಮನುಷ್ಯನೆ, ತೃಷ್ಣಾಂ-ಆಶೆಯನ್ನು, ಛಿಂಧಿ-ಭೇದಿಸು, ಕ್ಷಮಾಂ ಶಾಂತಿಯನ್ನು, ಭಜ-ಹೊಂದು, ಮದಂ-ಗರ್ವವನ್ನು, ಜಹಿ- ಜಯಿಸು, ಪಾಪೇ- ಪಾಪದಲ್ಲಿ- ರತಿಂ- ಆಸಕ್ತಿಯನ್ನು, ಮಾಕೃಥಾಃ- ಮಾಡಬೇಡ, ಸತ್ಯಂ ಯಥಾರ್ಥವನ್ನು, ಬ್ರೂಹಿ ಹೇಳು, ಸಾಧುಪದವೀಂ- ಸಾಧು ಒಳ್ಳೆಯದಾದ, ಪದವೀಂ-ಮಾರ್ಗವನ್ನು, ಅನುಯಾಹಿ ಅನುಸರಿಸಿ ಹೋಗು, ವಿದ್ವಜ್ಜನಂ-ವಿದ್ವಾಂಸರನ್ನು, ಸೇವಸ್ವ-ಸೇವಿಸು, ಮಾನ್ಯಾನ್-

ಟೀ॰ಕ॥ ನೀತಿನಿಪುಣಾಃ-ನೀತಿ-ನೀತಿಯಲ್ಲಿ, ನಿಪುಣಾಃ ಪ್ರವೀಣರಾದಂಥ, ಧೀರಾಃ-ಧೈರ್ಯಶಾಲಿಗಳು, ನಿಂದಂತು-ನಿಂದಿಸಲಿ, ಇಲ್ಲವೆ ಹೋದರೆ, ಸ್ತುವಂತು-ಸ್ತೋತ್ರಮಾಡಲಿ, ಯಥೇಷ್ಟಂ-ಅಧಿಕವಾಗಿ, ಲಕ್ಷ್ಮೀಃ ಐಶ್ವರ್ಯವು, ಸಮಾವಿಶತು-ಬಂದಾಗ್ಯೂ, ಗಚ್ಛತುವಾ-ಹೊರಟು ಹೋದಾಗ್ಯೂ. ಅದ್ಯೈವ-ಈಗಲೇ ಮರಣಂ-ಮರಣವು, ಅಸ್ತುವಾ-ಆಗಲಿ ಯುಗಾಂತರೇವಾ-ಯುಗಾಂತರದಲ್ಲಿ ಆಗಲಿ, ನ್ಯಾಯ್ಯಾತ್-ನ್ಯಾಯವಾದಂಥ ಪಥಃ-ಮಾರ್ಗದ ದೆಸೆಯಿಂದ, ಪದಂ-ಪಾದವನ್ನು, ನಪ್ರವಿಚಲಂತಿ-ದಾಟುವದಿಲ್ಲ, (ಅಥವಾ ಚಲಿಸುವದಿಲ್ಲ) ॥೭೪॥

ತಾತ್ಪರ್ಯ—ನ್ಯಾಯಶಾಲಿಗಳಾದ ಧೀರರು ತಮ್ಮನ್ನು ಪರರು ನಿಂದಿಸಿದಾಗ್ಯೂ ಅಥವಾ ಸ್ತೋತ್ರಮಾಡಿದಾಗ್ಯೂ ಯಥೇಚ್ಛವಾದ ಐಶ್ವರ್ಯ ಪ್ರಾಪ್ತಿಯಾದರೂ ಐಶ್ವರ್ಯ ನಷ್ಟವಾಗಿ ಹೋದರೂ ಈಗಲೇ ಮರಣವಾಗಲಿ ಯುಗಾಂತರದಲ್ಲಿ ಮರಣವಾಗಲಿ ಧರ್ಮವನ್ನು ಬಿಟ್ಟು ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ನೀಡುವದಿಲ್ಲ. ಅಂದರೆ ಧರ್ಮತಪ್ಪಿ ನಡೆಯುವದಿಲ್ಲವೆಂದು ತಾತ್ಪರ್ಯವು. ॥೭೪॥

ಶ್ಲೋ॥ ಕಾಂತಾಕಟಾಕ್ಷವಿಶಿಖಾನಲುನಂತಿ ಯಸ್ಯ ಚಿತ್ತಂ ನ ನಿರ್ದಹತಿ ಕೋಪಕೃಶಾನುತಾಪಃ ॥ ಕರ್ಷಂತಿ ಭೂರಿವಿಷಯಾಶ್ಚ ನಲೋಭಪಾಶಾ ಲೋಕತ್ರಯಂ ಜಯತಿ ಕೃತ್ಸ್ನಮಿದಂ ಸಧೀರಃ ॥೭೫॥

ಟೀ॰ಕ॥ ಯಸ್ಯ-ಯಾರ ಚಿತ್ತಂ-ಮನಸ್ಸನ್ನು, ಕಾಂತಾಕಟಾಕ್ಷವಿಶಿಖಾಃ-ಸ್ತ್ರೀಯ ಕಡೆಗಣ್ಣೆಂಬ ಬಾಣಗಳು, ನಲುನಂತಿ-ಭೇದಿಸುವದಿಲ್ಲವೋ, ಕೋಪಕೃಶಾನುತಾಪಃ ಕೋಪ-ಕೋಪವೆಂಬುವಂಥ, ಕೃಶಾನು-ಅಗ್ನಿಯ ತಾಪಃ ಜ್ವಾಲೆಯು, ಚಿತ್ತಂ-ಮನಸ್ಸನ್ನು, ನನಿರ್ದಹತಿ-ದಹಿಸುವದಿಲ್ಲವೋ, ಭೂರಿವಿಷಯಾಃ-ಭೂರಿ-ಅಧಿಕವಾದ, ವಿಷಯಾಃ ಶಬ್ದಾದಿ ವಿಷಯಗಳುಳ್ಳಂಥ ಪಾಶಾಃ ರಜ್ಜುಗಳು, ನಕರ್ಷಂತಿ-ಎಳೆಯುವದಿಲ್ಲವೋ, (ಅಥವಾ) ನಕರ್ಷಂತಿ-ಎಳೆಯುವದಿಲ್ಲವೋ, ಸಧೀರಃ-ಅಂಥಾಧೀರನು, ಕೃತ್ಸ್ನಂ-ಕಷ್ಟತರವಾದಂಥ ಇದಂ-ಈ ಲೋಕತ್ರಯಂ-ಮೂರುಲೋಕವನ್ನು, ಜಯತಿ ಜಯಿಸುತ್ತಾನೆ. ॥೭೫॥

ತಾತ್ಪರ್ಯ—ಧೀರಪುರುಷನಿಗೆ ಯಾವ ಕಾರ್ಯವು ಅಸಾಧ್ಯವಲ್ಲವೆಂಬುವ ಸಂಗತಿಯನ್ನು ಹೇಳುತ್ತಾನೆ. ಯಾವಧೀರ ಪುರುಷನ ಮನಸ್ಸು

ರುಷ, ನಿತ್ಯಂ-ನಿರಂತರದಲ್ಲೂ, ಪರಗುಣಪರಮಾಣೂನ್-ಪರ-ಅನ್ಯರ, ಗುಣ-ಗುಣಗಳ, ಪರಮಾಣೂನ್- ಲೇಶಗಳನ್ನು, ಪರ್ವತೀಕೃತ್ಯ- ಪರ್ವತವನ್ನಾಗಿ ಮಾಡಿ, ನಿಜಹೃದಿ-ನಿಜ-ತಮ್ಮ, ಹೃದಿ- ಮನಸ್ಸಿನಲ್ಲಿ, ವಿಕಸಂತಃ-ವಿಸ್ತಾರವಾಗಿ ಕಾಣುವ, ಸಂತಃ ಸತ್ಪುರುಷರು, ಕಿಯಂತಃ ಎಷ್ಟು ಜನ, ಸಂತಿ-ಇದ್ದಾರು, ಮಾಲಿನೀವೃತ್ತಂ. ‖ ‖೬೯‖

ತಾತ್ಪರ್ಯ—ಸತ್ಪುರುಷರ ಲಕ್ಷಣವನ್ನೇ ಹೇಳುತ್ತಾನೆ:-ಮನೋವಾಕ್ಕಾಯಗಳಿಂದ ಮಾಡಿದ ಪುಣ್ಯವೆಂಬುವ ಅಮೃತದಿಂದ ಪೂರ್ಣರಾದಂಥಾವರಾಗಿಯೂ ಮೂರು ಲೋಕದ ಜನಗಳಿಗೂ ಮಾಡುವ ಉಪಕಾರ ಪರಂಪರೆಯಿಂದ ಸಂತೋಷ ಪಡಿಸುತ್ತಲೂ ಅಲ್ಪವಾದ ಒಳ್ಳೆ ಗುಣವನ್ನು ಮಹತ್ತಾಗಿಯೂ ಹೇಳುವ ಯಾವಾಗ್ಯೂ ನಿರ್ಮಲವಾದ ಮನಸ್ಸುಳ್ಳಂಥಾ ಸತ್ಪುರುಷರು ಲೋಕದಲ್ಲಿ ಎಷ್ಟು ಜನವಿದ್ದಾರು? ಅಂದರೆ ಸತ್ಪುರಷರು ವಿರಳವಾಗಿದ್ದಾರೆ. ದುರ್ಜನಗಳು ಹೇರಳವಾಗಿದ್ದಾರೆಂದು ತಾತ್ಪರ್ಯವು

ಪರೋಪಕಾರ ಪದ್ಧತಿ ಸ್ಸಂಪೂರ್ಣಂ.

## ಅಥಧೈರ್ಯಪದ್ಧತಿ ಪ್ರಾರಂಭಃ.

ಶ್ಲೋ॥ ರತ್ನೈರ್ಮಹಾಬ್ಧೇಸ್ತುತುಷುರ್ನದೇವಾನಭೇಜಿರೇಭೀಮ
ವಿಷೇಣಭೀತಿಂ ॥ ಸುಧಾಂವಿನಾಪ್ರಾಯಯುರ್ವಿರಾಮಂ
ನನಿಶ್ಚಿತಾರ್ಥಾದ್ವಿರಮಂತಿಧೀರಾಃ ॥೭೧॥

ಟೀಕು॥ ದೇವಾಃ-ದೇವತೆಗಳು, ಮಹಾಬ್ಧೇಃ- ಮಹಾಸಮುದ್ರದ, ರತ್ನೈಃ- ಜಾತಿ ರತ್ನಗಳಿಂದ, ನತುತುಷುಃ- ಸಂತೋಷವನ್ನು ಹೊಂದಲಿಲ್ಲ, ಭೀಮವಿಶೇಷ-ಭೀಮ-ಭಯಂಕರವಾದ, ವಿಷೇಣ-ವಿಷದಿಂದ, ಭೀತಿಂ-ಭಯವನ್ನು, ನಭೇಜಿರೇ-ಹೊಂದಲಿಲ್ಲ, ಸುಧಾಂವಿನಾ-ಅಮೃತವನ್ನು ವಿನಾಯಿಸಿ, ವಿರಾಮಂ- ಶಾಂತಿಯನ್ನು, ನಪ್ರಾಯಯುಃ- ಹೊಂದಲಿಲ್ಲ, ತಥಾಹಿ- ಅದು ಯುಕ್ತವೇಸರಿ, ಧೀರಾಃ ಧೈರ್ಯಶಾಲಿಗಳು, ನಿಶ್ಚಿತಾರ್ಥಾತ್- ನಿಶ್ಚಿತ-ನಿಶ್ಚಯಿಸಲ್ಪಟ್ಟ, ಅರ್ಥಾತ್ ಪ್ರಯೋಜನ ಪರಿಯಂತರವೂ, ನವಿರಮಂತಿ ವಿರಾಮವನ್ನು ಹೊಂದುವದಿಲ್ಲ, ಅರ್ಥಾಂತರನ್ಯಾಸಾಲಂಕಾರಃ,ಉಪಜಾತಿವೃತ್ತಂ

ತಾತ್ಪರ್ಯ—ಧೈರ್ಯಶಾಲಿಗಳ ವ್ಯವಸಾಯವನ್ನು ಹೇಳುತ್ತಾನೆ. ಸಮುದ್ರಮಥನಕಾಲದಲ್ಲಿ ದೇವತೆಗಳು ಸಮುದ್ರದ ದೆಸೆಯಿಂದ ಹುಟ್ಟಿದ ರ

ತ್ನಗಳಿಂದ ಸಂತೋಷಪಟ್ಟು ಸಮುದ್ರ ಮಥನ ಕಾರ್ಯವನ್ನು ಬಿಡಲಿಲ್ಲ. ಮತ್ತು ಸಮುದ್ರದಲ್ಲಿ ಹುಟ್ಟಿದ ವಿಷದಿಂದ ಭಯಪಡಲಿಲ್ಲ. ಅಮೃತ ಪಟ್ಟುವವರೆಗೂ ಕಾರ್ಯವನ್ನು ಸಾಧಿಸಿದರು. ಇದು ಯುಕ್ತವಾದದ್ದೇಸರಿ ಧೀರರಾದ ಸತ್ಪುರುಷರು ತಮ್ಮ ಉದ್ದೇಶ ಪ್ರಯೋಜನ ಪ್ರಾಪ್ತಿಯವರೆಗೂ ಕಾರ್ಯವನ್ನು ಸಾಧಿಸದೆ ಬಿಡುವದಿಲ್ಲವೆಂದು ತಾತ್ಪರ್ಯವು. ॥೭೧॥

ಶ್ಲೋ॥ ಪ್ರಾರಭ್ಯತೇನಖಲುವಿಘ್ನಭಯೇನ ನೀಚೈಃಪ್ರಾರಭ್ಯ
ವಿಘ್ನನಿಹತಾವಿರಮಂತಿಮಧ್ಯಾಃ ॥ ವಿಘ್ನೈರ್ಮುಹುರ್ಮುಹುರಪಿಪ್ರತಿಹನ್ಯಮಾನಾಃಪ್ರಾರಬ್ಧಮುತ್ತಮ ಗುಣಾ
ನಪರಿತ್ಯಜಂತಿ ॥ ॥೭೨॥

ಟೀಕಾ॥ ನೀಚೈಃ- ನೀಚಮನುಷ್ಯರಿಂದ, ಕಾರ್ಯಂ ಕಾರ್ಯವು, ವಿಘ್ನಭಯೇನ ವಿಘ್ನ-ಅಂತರಾಯಗಳ, ಭಯೇನ-ಭೀತಿಯಿಂದ, ನಪ್ರಾರಭ್ಯತೇಖಲು ಪ್ರಾರಂಭವಾಡಲ್ಪಡುವದಿಲ್ಲವಷ್ಟೆ? ಮಧ್ಯಾಃ-ಮಧ್ಯಮ ಪುರುಷರು, ಕಾರ್ಯಂ-ಕಾರ್ಯವನ್ನು, ಪ್ರಾರಭ್ಯ ಪ್ರಾರಂಭಿಸಿ, ವಿಘ್ನನಿಹತಾಸ್ಸಂತಃ- ವಿಘ್ನ-ಅಂತರಾಯಗಳಿಂದ, ನಿಹತಾಸ್ಸಂತಃ- ಹೊಡೆಯಲ್ಪಟ್ಟಂಥಾವರುಗಳಾಗಿ, ವಿರಮಂತಿ ವಿರಾಮವನ್ನು ಹೊಂದುತ್ತಾರೆ, ಉತ್ತಮಗುಣಾಃ ಉತ್ತಮ-ಶ್ರೇಷ್ಠವಾದ, ಗುಣಾಃ- ಗುಣಗಳುಳ್ಳಂಥಾ ಜನಗಳು, ಪ್ರಾರಭ್ಯ- ಪ್ರಾರಂಭಿಸಿ, ವಿಘ್ನೈಃ- ಅಂತರಾಯಗಳಿಂದ, ಮುಹುರ್ಮುಹುಃ - ಬಾರಿಬಾರಿಗೂ, ಪ್ರತಿಹನ್ಯಮಾನಾಅಪಿ ಹೊಡೆಯಲ್ಪಟ್ಟಂಥಾವರಾದಾಗ್ಯಾದರೂ, ಕಾರ್ಯಂ ಕೆಲಸವನ್ನು, ನಪರಿತ್ಯಜಂತಿ-ಬಿಡುವುದಿಲ್ಲ. ॥೭೨॥

ತಾತ್ಪರ್ಯ—ಉತ್ತಮ ಮಧ್ಯಮ ಅಧಮ ಮನುಷ್ಯರ ಕಾರ್ಯಗಳನ್ನು ಹೇಳುತ್ತಾನೆ:-ಅಧಮ ಮನುಷ್ಯರು ಅಂದರೆ ನೀಚಮನುಷ್ಯರು ಕಾರ್ಯವನ್ನು ಆರಂಭಿಸುವದಕ್ಕೆ ಮೊದಲೆ ವಿಘ್ನಕ್ಕೆ ಭಯಪಟ್ಟು ಕಾರ್ಯವನ್ನೇ ಬಿಡುತ್ತಾರೆ. ಉತ್ತಮ ಪುರುಷರು ಕಾರ್ಯವನ್ನು ಆರಂಭಿಸಿದ ಮೇಲೆ ಎಷ್ಟು ವಿಘ್ನಗಳು ಬಂದಾಗ್ಯೂ ವಿಘ್ನನಿವಾರಣೆಯನ್ನು ಮಾಡಿಕೊಂಡು ಭಯಪಡದೆ ಕಾರ್ಯವನ್ನು ಬಿಡದೆ ಸಾಧಿಸುತ್ತಾರೆ. ಮಧ್ಯಮ ಪುರುಷರು ಕಾರ್ಯವನ್ನು ಆರಂಭಿಸಿ ವಿಘ್ನಪ್ರಾಪ್ತಿಯಾಗುವ ಕಾರ್ಯವನ್ನು ಬಿಡುತ್ತಾರೆಂದು ತಾತ್ಪರ್ಯವು. ॥೭೨॥

ಶ್ಲೋ॥ ಕ್ವಚಿತ್ಪೃಥ್ವೀಶಯ್ಯಃ ಕ್ವಚಿದಪಿಚ ಪರ್ಯಂಕಶಯನಃ
ಕ್ವಚಿಚ್ಛಾಕಾಹಾರಃ ಕ್ವಚಿದಪಿಚಶಾಲ್ಯೋದನರುಚಿಃ ॥
ಕ್ವಚಿತ್ಕಂಥಾಧಾರೀ ಕ್ವಚಿದಪಿಚದಿವ್ಯಾಂಬರಧರೋ
ಮನಸ್ವೀಕಾರ್ಯಾರ್ಥೀನಗಣಯತಿದುಃಖಂನಚಸುಖಂ॥

ಟೀಕು॥ ಕ್ವಚಿತ್- ಕೆಲವು ಕಾಲದಲ್ಲಿ, ಪೃಥ್ವೀಶಯ್ಯಃ-ಪೃಥ್ವೀ- ಭೂಮಿಯೆ, ಶಯ್ಯಃ-ಹಾಸಿಗೆಯಾಗಿವುಳ್ಳಂಥ, ಕ್ವಚಿದಪಿ- ಕೆಲವು ಕಾಲದಲ್ಲಿ, ಪರ್ಯಂಕಶಯನಃ-ಪರ್ಯಂಕ-ಮಂಚವೆ, ಶಯನಃ ಹಾಸಿಯಾಗಿವುಳ್ಳಂಥ, ಕ್ವಚಿದಪಿ-ಕೆಲವು ಕಾಲದಲ್ಲಿ. ಶಾಕಾಹಾರಃ-ಶಾಕ- ಕಾಯಿ ಶಾಕಗಳೆ, ಆಹಾರಃ- ಆಹಾರವಾಗಿವುಳ್ಳಂಥ, ಕ್ವಚಿದಪಿಚ ಕೆಲವು ಕಾಲದಲ್ಲಿ, ಶಾಲ್ಯೋದನರುಚಿಃ- ಶಾಲ್ಯೋದನ-ಪನ್ನಷ್ಟಾನ್ನದ, ರುಚಿಃ-ಸ್ವಾದವುಳ್ಳ, ಕ್ವಚಿತ್-ಕೆಲವು ಕಾಲದಲ್ಲಿ, ಕಂಥಾಧಾರೀ ಕಂಥಾ-ಛಿದ್ರವಸ್ತ್ರಗಳನ್ನು, ಧಾರೀ- ಧರಿಸಿಕೊಂಡಿರುವ, ಕ್ವಚಿದಪಿಚ-ಕೆಲವು ಕಾಲದಲ್ಲಿ, ದಿವ್ಯಾಂಬರಧರಃ ದಿವ್ಯ- ಪ್ರಕಾಶಮಾನವಾದ, ಅಂಬರ-ವಸ್ತ್ರವನ್ನು. ಧರಃ-ಧರಿಸಿಕೊಂಡಿರುವಂಥ, ಕಾರ್ಯಾರ್ಥೀ - ಕಾರ್ಯ-ಪ್ರಯೋಜನವನ್ನು, ಅಥವಾ ಇಷ್ಟಕಾರ್ಯವನ್ನು, ಅರ್ಥೀ- ಅಪೇಕ್ಷಿಸುತ್ತಲಿರುವ, ಮನಸ್ವಿ- ಧೀರನು, ಸುಖಂ- ಸುಖವನ್ನು, ದುಃಖಂಚ -ದುಃಖವನ್ನು ಕೂಡ, ನಗಣಯತಿ-ಎಣಿಸುವದಿಲ್ಲ ॥೭೩॥

ತಾತ್ಪರ್ಯ—ಕಾರ್ಯವನ್ನು ಸಾಧಿಸತಕ್ಕ ಧೀರನು ಕೆಲವು ಕಾಲ ಭೂಮಿಯಮೇಲೆ ಮಲಗಿದರೂ ಮಂಚದಮೇಲೆ ಮಲಗಿಕೊಂಡಿದ್ದಾಗ್ಯೂ ಕೆಲವು ಕಾಲದಲ್ಲಿ ಶಾಕಾದಿಗಳನ್ನು ಆಹಾರವಾಡಿದಾಗ್ಯೂ ಕೆಲವು ಕಾಲ ಶಾಲ್ಯೋದನವನ್ನು ಭೋಜನ ಮಾಡಿದಾಗ್ಯೂ ಬಂತೆವಾಡಿದ ಜೀರ್ಣವಸ್ತ್ರವನ್ನೇ ಧಾರಣೆ ಮಾಡಿದಾಗ್ಯೂ ಪೀತಾಂಬರವನ್ನು ಧಾರಣೆ ಮಾಡಿದಾಗ್ಯೂ ಮನಸ್ಸಿನಕಾರ್ಯವನ್ನು ಸಾಧಿಸತಕ್ಕ ಧೀರನು ಸುಖದುಃಖಗಳನ್ನು ಗಣನೆ ಮಾಡದೆ ಅಂದರೆ ಸಹಿಸಿಕೊಂಡು ತನ್ನ ಸ್ವಾರ್ಥವನ್ನು ಸಾಧಿಸುವನು ಎಂದು ಭಾವವು. ॥೭೩॥

ಶ್ಲೋ॥ ನಿಂದಂತುನೀತಿನಿಪುಣಾಯದಿವಾಸ್ತುವಂತು ಲಕ್ಷ್ಮೀಸ್ಸಮಾವಿಶತುಗಚ್ಛತುವಾಯಥೇಷ್ಟಂ ॥ ಅದ್ಯೈವ ವಾಮರಣಮಸ್ತುಯುಗಾಂತರೇವಾನ್ಯಾಯ್ಯಾತ್ಪಥಃಪ್ರವಿಚಲಂತಿಪದಂನಧೀರಾಃ ॥೭೪॥

ಟೀ॰ ಕಾ॥ ನೀತಿನಿಪುಣಾಃ-ನೀತಿ-ನೀತಿಯಲ್ಲಿ, ನಿಪುಣಾಃ ಪ್ರವೀಣರಾದಂಥ, ಧೀರಾಃ-ಧೈರ್ಯಶಾಲಿಗಳು, ನಿಂದಂತು-ನಿಂದಿಸಲಿ, ಯದಿವಾ ಹಾಗಿಲ್ಲದೆ ಹೋದರೆ, ಸ್ತುವಂತು-ಸ್ತೋತ್ರಮಾಡಲಿ, ಯಥೇಷ್ಟಂ ಅಧಿಕವಾಗಿ, ಲಕ್ಷ್ಮೀಃ ಐಶ್ವರ್ಯವು, ಸಮಾವಿಶತು-ಬಂದಾಗ್ಯೂ, ಗಚ್ಛತುವಾ-ಹೊರಟು ಹೋದಾಗ್ಯೂ, ಅದ್ಯೈವ-ಈಗಲೇ ಮರಣಂ-ಮರಣವು, ಅಸ್ತುವಾ-ಆಗಲಿ ಯುಗಾಂತರೇವಾ-ಯುಗಾಂತರದಲ್ಲಿ ಆಗಲಿ, ನ್ಯಾಯ್ಯಾತ್-ನ್ಯಾಯವಾದಂಥ ಪಥಃ-ಮಾರ್ಗದ ದಸೆಯಿಂದ, ಪದಂ-ಪಾದವನ್ನು, ನಪ್ರವಿಚಲಂತಿ-ದಾಟುವದಿಲ್ಲ, (ಅಥವಾ ಚಲಿಸುವದಿಲ್ಲ) ॥೭೪॥

ತಾತ್ಪರ್ಯ—ನ್ಯಾಯಶಾಲಿಗಳಾದ ಧೀರರು ತಮ್ಮನ್ನು ಪರರು ನಿಂದಿಸಿದಾಗ್ಯೂ ಅಥವಾ ಸ್ತೋತ್ರಮಾಡಿದಾಗ್ಯೂ ಯಥೇಚ್ಛವಾದ ಐಶ್ವರ್ಯ ಪ್ರಾಪ್ತಿಯಾದರೂ ಐಶ್ವರ್ಯ ನಷ್ಟವಾಗಿ ಹೋದರೂ ಈಗಲೇ ಮರಣವಾಗಲಿ ಯುಗಾಂತರದಲ್ಲಿ ಮರಣವಾಗಲಿ ಧರ್ಮವನ್ನು ಬಿಟ್ಟು ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ನೀಡುವದಿಲ್ಲ. ಅಂದರೆ ಧರ್ಮತಪ್ಪಿ ನಡೆಯುವದಿಲ್ಲವೆಂದು ತಾತ್ಪರ್ಯವು. ॥೭೪॥

ಶ್ಲೋ॥ ಕಾಂತಾಕಟಾಕ್ಷವಿಶಿಖಾನಲುನಂತಿಯಸ್ಯಚಿತ್ತಂನನಿರ್ದಹತಿಕೋಪಕೃಶಾನುತಾಪಃ ॥ ಕರ್ಷಂತಿಭೂರಿವಿಷಯಾಶ್ಚನಲೋಭಪಾಶಾಲೋಕತ್ರಯಂಜಯತಿಕೃತ್ಸ್ನಮಿದಂಸಧೀರಃ ॥೭೫॥

ಟೀ॰ ಕಾ॥ ಯಸ್ಯ-ಯಾರ ಚಿತ್ತಂ-ಮನಸ್ಸನ್ನು, ಕಾಂತಾಕಟಾಕ್ಷವಿಶಿಖಾಃ-ಸ್ತ್ರೀಯರಕಡೆಗಣ್ಣೆಂಬ ಬಾಣಗಳು, ನಲುನಂತಿ-ಭೇದಿಸುವದಿಲ್ಲವೋ, ಕೋಪಕೃಶಾನುತಾಪಃ ಕೋಪವೆಂಬುವಂಥ, ಕೃಶಾನು-ಅಗ್ನಿಯ ತಾಪಃ ಜ್ವಾಲೆಯು, ಚಿತ್ತಂ-ಮನಸ್ಸನ್ನು, ನನಿರ್ದಹತಿ-ದಹಿಸುವದಿಲ್ಲವೋ, ಭೂರಿವಿಷಯಾಃ-ಭೂರಿ-ಅಧಿಕವಾದ, ವಿಷಯಾಃ ಶಬ್ದಾದಿ ವಿಷಯಗಳುಳ್ಳಂಥ ಪಾಶಾಃ ಹಗ್ಗಗಳು, ನಕರ್ಷಂತಿ-ಎಳೆಯುವದಿಲ್ಲವೋ, (ಅಥವಾ) ನಕರ್ಷಂತಿ-ಎಳೆಯುವದಿಲ್ಲವೋ, ಸಧೀರಃ-ಅಂಥಾಧೀರನು, ಕೃತ್ಸ್ನಂ-ಕಷ್ಟತರವಾದಂಥ ಇದಂ-ಈ ಲೋಕತ್ರಯಂ-ಮೂರುಲೋಕವನ್ನು, ಜಯತಿ ಜಯಿಸುತ್ತಾನೆ. ॥೭೫॥

ತಾತ್ಪರ್ಯ—ಧೀರಪುರುಷನಿಗೆ ಯಾವ ಕಾರ್ಯವು ಅಸಾಧ್ಯವಲ್ಲವೆಂಬುವ ಸಂಗತಿಯನ್ನು ಹೇಳುತ್ತಾನೆ ಯಾವಧೀರ ಪುರುಷನ ಮನಸ್ಸು

ಕಾಂತಾ ಕಟಾಕ್ಷವೀಕ್ಷಣೆಗೆ ಸಿಕ್ಕುವದಿಲ್ಲವೋ ಕೋಪಾದಿಗಳನ್ನು ಜಯಿಸಿರುತ್ತಾನೋ ಲೋಭಮೋಹಾದಿಗಳನ್ನು ಬಿಟ್ಟಿರುತ್ತಾನೋ ಅಂಥಾವನಿಗೆ ಮೂರುಲೋಕವೂ ಸ್ವಾಧೀನವಾಗಿರುತ್ತೆಂದು ತಾತ್ಪರ್ಯವು. ||೭೫||

ಶ್ಲೋ|| ಕದರ್ಥಿತಸ್ಯಾಪಿಹಿಧೈರ್ಯವೃತ್ತೇರ್ನ ಶಕ್ಯತೇಧೈರ್ಯ
ಗುಣಃಪ್ರಮಾಷ್ಟುಂ || ಅಧೋಮುಖಸ್ಯಾಪಿಕೃತಸ್ಯ
ವಹ್ನೇರ್ನಾಧಃಶಿಖಾಯಾಂತಿಕದಾಚಿದೇವ || ೭೬ ||

ಟೀಕು|| ಕದರ್ಥಿತಸ್ಯಾಪಿ-ಕುತ್ಸಿತಾರ್ಥ ಉಳ್ಳಂಥಾವನಾದಾಗ್ಯಾದರೂ ಕೂಡ, ಧೈರ್ಯವೃತ್ತೇ- ಧೈರ್ಯ- ಧೈರ್ಯದಿಂದ, ವೃತ್ತೇ-ವ್ಯಾಪಾರವುಳ್ಳಂಥಾ ಪುರುಷನ, ಧೈರ್ಯಗುಣಃ-ಧೈರ್ಯವಾದ ಗುಣವು, ಪ್ರಮಾಷ್ಟುಂ-ಅಳಿಸುವದಕ್ಕೋಸ್ಕರ, ನಶಕ್ಯತೆ-ಆಗಲ್ಪಡುವದಿಲ್ಲ, ತಥಾಹಿ-ಅದು ಯುಕ್ತವೇ ಸರಿ, ಅಧೋಮುಖಸ್ಯ-ಕೆಳಮುಖವಾಗಿ, ಕೃತಸ್ಯ-ಮಾಡಲ್ಪಟ್ಟಂಥ, ವಹ್ನೇಃ-ಯಜ್ಞೇಶ್ವರನ, ಶಿಖಾ ಜ್ವಾಲೆಯು, ಕದಾಚಿದಪಿ-ಯಾವಾಗ್ಯೂ,ಅಧಃ-ಕೆಳಭಗದಲ್ಲಿ, ನಯಾತ್ಯೇವ ಹೋಗುವದಿಲ್ಲವಷ್ಟೆ, ಅರ್ಥಾಂತರನ್ಯಾಸಾಲಂಕಾರಃ.

ತಾತ್ಪರ್ಯ— ಧೈರ್ಯಶಾಲಿಗೆ ಬಡತನಬಂದರೂ ಧೈರ್ಯಗುಣವನ್ನು ಹೋಗಲಾಡಿಸುವದಕ್ಕೆ ಆಗುವದಿಲ್ಲ. ಹೇಗೆಂದರೆ ಕೆಂಕಿಉರಿಯನ್ನು ಕೆಳಮುಖವಾಗಿ ಹಿಡಿಸುಕೊಂಡರೆ ಅದರ ಉರಿಯು ಮೇಲಭಾಗಕ್ಕೆ ಬರುವದೆ ಹೊರತು ಕೆಳಭಾಗಕ್ಕೆ ಹೋಗುವದಿಲ್ಲ. ಅದರಂತೆ ಧೈರ್ಯಶಾಲಿ ಎಂಬುವನಿಗೆ ಇರುವ ಧೈರ್ಯಗುಣವು ಯಾವಾಗ್ಯೂ ಹೋಗುವದಿಲ್ಲ. ಎಂದುಭಾವವು

ಶ್ಲೋ|| ವರಂಶೃಂಗೋತ್ಸಂಗಾದ್ಗುರುಶಿಖರಿಣಃಕ್ವಾಪಿವಿಷಮೇ
ಪತಿತ್ವಾಯಂಕಾಯಃ ಕಠಿನದೃಷದಂತೇವಿಗಳಿತಃ ||
ವರಂನ್ಯಸ್ತೋಹಸ್ತಃ ಫಣಿಪತಿಮುಖೇತೀಕ್ಷ್ಣದಶನೇ
ವರಂವನ್ಹೌಪಾತಃತದಪಿನಕೃತಶ್ಶೀಲವಿಲಯಃ ||೭೭||

ಟೀಕು|| ಗುರುಶಿಖರಿಣಃ-ಗುರು ಉನ್ನತವಾದ, ಶಿಖರಿಣಃ-ಪರ್ವತದ, ಶೃಂಗೋತ್ಸಂಗಾತ್-ಶೃಂಗ ಶಿಖರದ, ಉತ್ಸಂಗಾತ್- ಸಮೀಪದಸೆಯಿಂದ, ಕ್ವಾಪಿ-ಒಂದಾನೊಂದಾದ, ವಿಷಮೇ-ದುರ್ಗಸ್ಥಾನವಾದ, ದೃಷದಂತೆ-ದೃಷತ್-ಪಾಷಾಣದ, ಅಂತೇ- ಕೊನೆಭಾಗದಲ್ಲಿ, ಅಯಂಕಾಯಃ-ಈ ಶರೀರವು, ಪತಿತ್ವಾ-ಬಿದ್ದು, ವಿಗಳಿತಶ್ಚೇತ್-ಸೀಳಿಛಿದ್ರವಾಗಿ ಹೋದರೂ, ವರಂ ಶ್ರೇ

ಷ್ಟವಾದದ್ದು, ತೀಕ್ಷ್ಣದಶನೇ ತೀಕ್ಷ್ಣ- ಕ್ರೂರವಾದ, ದಶನೇ- ಹಲ್ಲುಗಳು ಉಳ್ಳ, ಫಣಿಪತಿಮುಖೇ ಫಣಿಪತಿ-ಆದಿಶೇಷನ, (ಸರ್ಪದ) ಮುಖೇ-ಬಾಯಿ ನಲ್ಲಿ, ನ್ಯಸ್ತಃ-ಇಡಲ್ಪಟ್ಟ, ಹಸ್ತಃ-ಕೈಯ್ಯು, ವರಂ-ಶ್ರೇಷ್ಠವಾದದ್ದು, ತದಪಿ- ಅದಕ್ಕಿಂತಲೂ, ಶೀಲವಿಲಯಃ- ಶೀಲ-ಸ್ವಭಾವದ, ವಿಲಯಃ- ನಾಶವು, ನಕೃತಃ-ಮಾಡಲ್ಪಡತಕ್ಕದ್ದಲ್ಲ. ||೭೭||

ತಾತ್ಪರ್ಯ—ಉತ್ತಮಜನಗಳು ತಮ್ಮ ಧರ್ಮಸ್ವಭಾವವನ್ನು ಬಿಡುವದಿಲ್ಲವೆಂಬುವ ಸಂಗತಿಯನ್ನು ಹೇಳುತ್ತಾನೆ. ಪರ್ವತಾಗ್ರದಿಂದ ದುರ್ಗಮವಾದ ಬಂಡೆಯಮೇಲೆ ಬಿದ್ದು ಪ್ರಾಣವನ್ನಾದರೂ ಕಳೆದುಕೊಳ್ಳತಕ್ಕದ್ದು ಯೋಗ್ಯವಾದದ್ದು ವಿಷಭರಿತವಾದ ದಂತಗಳುಳ್ಳ ಫಣಿಪತಿಯ ಬಾಯಲ್ಲಾದರೂ ಕೈಯನ್ನಿಡುವದು ಯೋಗ್ಯವು. ಸುಡುವ ಬೆಂಕಿಯಲ್ಲಾದರೂ ಬೀಳುವದು ಯೋಗ್ಯವಾದದ್ದು. ತಮ್ಮ ನಿಜವಾದ ಧರ್ಮಶೀಲವನ್ನು ಬಿಡತಕ್ಕದ್ದು ಯೋಗ್ಯವಲ್ಲ. (ಅಂದರೆ ಮೇಲೆ ಹೇಳಿದ ಅಸಾಧ್ಯ ಕಾರ್ಯಗಳನ್ನು ಮಾಡಿದರೂ ತಮ್ಮ ಧರ್ಮಶೀಲವನ್ನು ಬಿಡದಿರುತ್ತಾರೆಂದು ತಾತ್ಪರ್ಯವು) ||೭೭||

ಶ್ಲೋ|| ವಹ್ನಿಸ್ತಸ್ಯ ಜಲಾಯತೇ ಜಲನಿಧಿಃ ಕುಲ್ಯಾಯತೇ ತತ್‌ಕ್ಷಣಾ ನ್ಮೇರುಸ್ಸ್ವಲ್ಪಶಿಲಾಯತೇ ಮೃಗಪತಿಸ್ಸದ್ಯಃ ಕುರಂಗಾಯತೇ || ವ್ಯಾಳೋ ಮಾಲ್ಯಗುಣಾಯತೇ ವಿಷರಸಃ ಪೀಯೂಷವರ್ಷಾಯತೇ ಯಸ್ಯಾಂಗೇಽಖಿಲ ಲೋಕವಲ್ಲಭತರಂ ಶೀಲಂ ಸಮುನ್ಮೀಲತಿ ||೭೮||

ಟೀಕಾ|| ಯಸ್ಯ-ಯಾರ, ಅಂಗೆ-ಶರೀರದಲ್ಲಿ, ಅಖಿಲಲೋಕವಲ್ಲಭತರಂ ಅಖಿಲಲೋಕ-ಎಲ್ಲಾಜನಕ್ಕೂ, ವಲ್ಲಭತರಂ- ಅತ್ಯಂತ ಪ್ರಿಯಕರವಾದ, ಶೀಲಂ-ಒಳ್ಳೆಸ್ವಭಾವವು, ಸಮುನ್ಮೀಲತಿ-ಪ್ರಕಾಶಿಸುತ್ತದೆಯೋ, ತತ್ - ಆ ಪುರುಷನಿಗೆ, ವಹ್ನಿಃ-ಅಗ್ನಿಯು, ಜಲಾಯತೇ-ನೀರಿನೋಪಾದಿಯಲ್ಲಿ ಆಚರಿಸುತ್ತದೆ, ಜಲನಿಧಿಃ- ಸಮುದ್ರವು, ಕುಲ್ಯಾಯತೇ- ಅಲ್ಪವಾದ (ಕೃತ್ರಿಮ) ಸರಸ್ಸಿನೋಪಾದಿಯಲ್ಲಿ ಆಚರಿಸುತ್ತದೆ, ತತ್‌ಕ್ಷಣಾತ್- ಆಕ್ಷಣದಲ್ಲಿಯೇ ಮೇರುಃ-ಮೇರುಪರ್ವತವು, ಸ್ವಲ್ಪಶಿಲಾಯತೇ-ಕಲ್ಲಿನೋಪಾದಿಯಲ್ಲಿ ಆಚರಿಸುತ್ತದೆ, ಸದ್ಯಃ-ತತ್‌ಕ್ಷಣದಲ್ಲಿ, ಮೃಗಪತಿಃ-ಸಿಂಹವು, ಕುರಂಗಾಯತೇ- ಜಿಂಕೆಯೋಪಾದಿಯಲ್ಲಿ ಆಚರಿಸುತ್ತದೆ, ವ್ಯಾಳಃ- ಸರ್ಪವು, ಮಾಲ್ಯಗುಣಾ

ಯತೇ ಮಾಲ್ಯ-ಪುಷ್ಪಮಾಲಿಕೆಗೆ, ಗುಣಾಯತೇ-ದಾರದಹಾಗೆ ಸಾದಿಯಲ್ಲಿ ಆಚ ರಿಸುತ್ತದೆ, ವಿಷರಸಃ-ವಿಷ-ವಿಷದ, ರಸಃ-ಸಾರವು, ಪೀಯೂಷವರ್ಷಾಯ ತೇ-ಪೀಯೂಷ-ಅಮೃತದ, ವರ್ಷಾಯತೇ-ಧಾರಾಸಂಪಾತದಹಾಗೆ ಸಾದಿಯಲ್ಲಿ ಆಚರಿಸುತ್ತದೆ, ಉಪಮಾಲಂಕಾರ ಭೇದಃ. ॥೭೭॥

ತಾತ್ಪರ್ಯ—ಯಾವಮನುಷ್ಯನಿಗೆ ಧೈರ್ಯವಾದ ಶಾಂತಿ ಸ್ವಭಾವವು ಇರುತ್ತೊ ಅಂಥಾವನಿಗೆ ದುಃಖ ಹೇತುಕವಾದ ಪದಾರ್ಥಗಳು ಸುಖಜನ ಕವಾಗಿಯೇ ಕಾಣಬರುತ್ತೆ. ಅದು ಹೇಗೆಂದರೆ:-ಸುಡುವ ಅಗ್ನಿಯಾದರೂ ತಣ್ಣಗಿರುತ್ತೆ. ಕಚ್ಚುವ ಸರ್ಪವಾದರೂ ಪುಷ್ಪವನ್ನು ಕಟ್ಟುವ ದಾರ ದೋಪಾದಿಯಲ್ಲಿ ಆಚರಿಸುತ್ತದೆ. ದೊಡ್ಡ ಸಮುದ್ರವಾದಗೂ ಸಣ್ಣ ಬಾ ವಿಯಂತೆ ಕಾಣುತ್ತೆ, ಮೇರು ಪರ್ವತವು ಸಣ್ಣ ಗುಂಡಿನೋಪಾದಿಯಲ್ಲಿ ಕಾಣುತ್ತದೆ. ವಿಷಸ್ರೋಕೂಡ ಅಮೃತ ಧಾರೆಯೋಪಾದಿಯಲ್ಲಿ ಆಚರಿಸು ತ್ತಲಿರುವದು. ಈರೀತಿ ದುಃಖಜನಕ ವಾದಾಗ್ಯೂ ಸುಖಜನಕವಾಗಿಯೇ ತೋರುತಾ ಇರುತ್ತದೆಂದು ತಾತ್ಪರ್ಯವು. ॥೭೮॥

ಶ್ಲೋ॥ ಛಿನ್ನೋಪಿರೋಹತಿತರುಃ ಕ್ಷೀಣೋಪ್ಯುಪಚೀಯತೇ
ಪುನಶ್ಚಂದ್ರಃ ॥ ಇತಿವಿಮೃಶಂತಸ್ಸಂತಸ್ಸಂತಪ್ಯಂತೇ
ನವಿಶ್ಲಥೇಷ ಲೋಕೇಷು ॥ ೭೯ ॥

ಟೀಕು॥ ತರುಃ-ವೃಕ್ಷವು, ಛಿನ್ನೋಪಿ-ಕಡಿಯಲ್ಪಟ್ಟಂಥಾದ್ದಾದಾಗ್ಯೂ ದರೂ, ರೋಹತಿ-ಬೆಳೆಯುತ್ತದೆ, ಚಂದ್ರಃ-ಚಂದ್ರನು, ಕ್ಷೀಣೋಪಿ-ಕೃ ಷ್ಣಪಕ್ಷ ದಿವಸದಲ್ಲಿ ಕ್ಷೀಣವಾದಂಥಾವನಾದಾಗ್ಯೂ, ಪುನಃ-ತಿರುಗೂ, ಉಪ ಚೀಯತೇ-ವೃದ್ಧಿಯನ್ನು ಹೊಂದುವನಾಗುತ್ತಾನೆ. ಇತಿ-ಈ ಪ್ರಕಾರವಾಗಿ- ಸಂತಃ-ಸತ್ಪುರುಷರು, ವಿಮೃಶಂತಸ್ಸಂತಃ-ವಿಮರ್ಶಾ-ಜ್ಞಾನವುಳ್ಳವರಾಗಿ, ವಿಶ್ಲಥೇಷು-ಶಿಥಿಲವಾಗಾನು ಬಂಧವುಳ್ಳ, (ಅಥವಾ ಅಶಾಶ್ವತವಾದ) ಲೋ ಕೇಷು-ಪ್ರಪಂಚದಲ್ಲಿ ನಸಂತಪ್ಯಂತೇ-ಸಂತಾಪವನ್ನು ಹೊಂದುವದಿಲ್ಲ, ದೃಷ್ಟಾಂತಾಲಂಕಾರಃ, ವೃತ್ತಂ ಆರ್ಯಾಭೇದಃ. ॥೭೯॥

ತಾತ್ಪರ್ಯ—ಸತ್ಪುರುಷರು ಪ್ರಪಂಚವ್ಯಾಪಾರದಲ್ಲಿ ದುಃಖವನ್ನು ಹೊಂದುವದಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ:-ಮರಗ ಳು ರಂಬೆಗಳನ್ನು ಕಡಿದರೆ ಪುನಃ ಚಿಗುರುತ್ತವೆ. ಚಂದ್ರನು ಕೆಲವು ಕಾಲದ ಲ್ಲಿ (ಅಂದರೆ) ಕೃಷ್ಣಪಕ್ಷದಲ್ಲಿ ಕಳಾಹೀನನಾಗಿದ್ದರೂ ಶುಕ್ಲಪಕ್ಷದಲ್ಲಿ ಕ

ಳಾ ಪೂರ್ಣನಾಗುತ್ತಾನೆ. ಅದರಂತೆ ಅಶಾಶ್ವತದ ಸಂಸಾರವು ಜನನ ಮರಣ ಪ್ರವಾಹವಾಗಿದೆ, ಇದರಲ್ಲಿ ಇಡುವ ರಾಗಾನುಬಂಧಗಳು ದೃಢತರವಲ್ಲವೆಂದು ತಿಳಿಯುತ್ತಾರೆ. (ಅಂದರೆ ಶಾಶ್ವತವಲ್ಲವೆಂದು ತಿಳಿಯುತ್ತಾರೆಂದು ಭಾವವು. ||೬೯||

ಶ್ಲೋ|| ಐಶ್ವರ್ಯಸ್ಯವಿಭೂಷಣಂಸುಜನತಾಶೌರ್ಯಸ್ಯವಾಕ್ಸಂ
ಯಮೋಜ್ಞಾನಸ್ಯೋಪಶಮಶ್ಶ್ರುತಸ್ಯವಿನಯೋ
ವಿತ್ತಸ್ಯಪಾತ್ರೇವ್ಯಯಃ || ಅಕ್ರೋಧಸ್ತಪಸಃಕ್ಷಮಾ
ಪ್ರಭವಿತುರ್ಧರ್ಮಸ್ಯನಿರ್ವ್ಯಾಜತಾ ಸರ್ವೇಷಾಮಪಿ
ಸರ್ವಕಾರಣಮಿದಂಶೀಲಂಪರಂಭೂಷಣಂ ||೭೦||

ಟೀಕು|| ಐಶ್ವರ್ಯಸ್ಯ-ಭಾಗ್ಯಕ್ಕೆ, ಸುಜನತಾ- ಸೌಜನ್ಯವು, ವಿಭೂಷಣಂ-ಅಲಂಕಾರವು, ಶೌರ್ಯಸ್ಯ- ಸಾಮರ್ಥ್ಯಕ್ಕೆ ಅಥವಾ ಪರಾಕ್ರಮಕ್ಕೆ, ವಾಕ್ಸಂಯಮಃ-ಭೂಷಣಂ ಅಲಂಕಾರವು, ಜ್ಞಾನಸ್ಯ ಮೋಕ್ಷಬುದ್ಧಿಗೆ, ಉಪಶಮಃ ಶಾಂತಿಯು, ಭೂಷಣಂ-ಅಲಂಕಾರವು ಶ್ರುತಸ್ಯ ಶಾಸ್ತ್ರಕ್ಕೆ, ವಿನಯಃ-ನಮ್ರತೆಯು, ವಿಭೂಷಣಂ ಅಲಂಕಾರವಾದದ್ದು, ವಿತ್ತಸ್ಯ-ದ್ರವ್ಯಕ್ಕೆ, ಪಾತ್ರೇ- ಯೋಗ್ಯಜನಗಳಲ್ಲಿ, ವ್ಯಯಃ ವಿನಿಯೋಗವು, ಭೂಷಣಂ ಅಲಂಕಾರವು, ತಪಸಃ - ತಪಸ್ಸಿಗೆ, ಅಕ್ರೋಧಃ - ಕ್ರೋಧವಿಲ್ಲದ ಇರೋಣವು, ಭೂಷಣಂ- ಅಲಂಕಾರವು, ಪ್ರಭವಿತುಃ ಪ್ರಭುಭಾವಕ್ಕೆ ಅಂದರೆ ರಾಜತ್ವಕ್ಕೆ ಕ್ಷಮಾ- ಶಾಂತಿಯು, ಭೂಷಣಂ ಅಲಂಕಾರವು, ಧರ್ಮಸ್ಯ- ಧರ್ಮಕ್ಕೆ, ನಿರ್ವ್ಯಾಜತಾ - ನಿಷ್ಕಾರಣತ್ವವು, ಭೂಷಣಂ ಅಲಂಕಾರವು. ಸರ್ವೇಷಾಮಪಿ - ಎಲ್ಲವುಗಳಿಗೂ ಕೂಡ, ಇದಂ - ಈ ಮೇಲೆ ಹೇಳಲ್ಪಟ್ಟದ್ದು, ಸರ್ವಕಾರಣಂ- ಸಮಸ್ತಕಾರಣವು, ಶೀಲಂ - ಸತ್ಸ್ವಭಾವವು, ಪರಂ - ಅತ್ಯಂತವಾದ ಭೂಷಣಂ- ಅಲಂಕಾರವು. ||೭೦||

ತಾತ್ಪರ್ಯ—ಮನುಷ್ಯ ಸರ್ವಕಾಲದಲ್ಲಿಯೂ ಒಳ್ಳೇಸ್ವಭಾವವುಳ್ಳವರಾಗಿ ಇರಬೇಕೆಂಬುವದನ್ನು ಹೇಳುತ್ತಾನೆ. ಐಶ್ವರ್ಯಾದಿ ಧರ್ಮಾಂತವಾಗಿ ಹೇಳಿರುವವುಗಳಿಗೆ ಬಂದಕ್ಕೆ ಒಂದು ಗುಣವು ಅಲಂಕಾರವಾಗಿದೆ. ಈ ಎಲ್ಲವುಗಳಿಗೂ ಸತ್ಸ್ವಭಾವವು ಎಲ್ಲದಕ್ಕಿಂತಲೂ ಉತ್ತಮವಾದದ್ದು. ಇದರಿಂದ ಐಶ್ವರ್ಯಾದಿಗಳಿಗೆಲ್ಲಾ ಅಲಂಕಾರ ಕಾರಣವೆಂದು ತಾತ್ಪರ್ಯವು

ಇತಿ ಧೈರ್ಯಪದ್ಧತಿ ಸಂಪೂರ್ಣಂ.

—ಅಥ ದೈವಪದ್ಧತಿ ಪ್ರಾರಂಭಃ—

ಶ್ಲೋ॥ ನೇತಾಯಸ್ಯಬೃಹಸ್ಪತಿಃ ಪ್ರಹರಣಂ ವಜ್ರಂಸುರಾ
ಸ್ಸೈನಿಕಾಸ್ಸ್ವರ್ಗೋದುರ್ಗಮನುಗ್ರಹಃ ಖಲುಹರೇ
ರೈರಾವಣೋವಾರಣಃ ॥ ಇತ್ಯಾಶ್ಚರ್ಯಬಲಾನ್ವಿ
ತೋಽಪಿಬಲಭಿದ್ಭಗ್ನಃಪರೈಸ್ಸಂಗರೇ ತದ್ವ್ಯಕ್ತಂ
ನನುದೈವಮೇವಶರಣಂಧಿಗ್ಧಿಗ್ವೃಥಾಪೌರುಷಂ ॥೮೧

ಟೀಕು। ಯಸ್ಯ-ಯಾವ, ಹರೇಃ-ಇಂದ್ರನಿಗೆ, ಬೃಹಸ್ಪತಿಃ-ಬೃಹಸ್ಪತ್ಯಾಚಾರ್ಯರು, ನೇತಾ-ಶಿಕ್ಷಕರಾಗಿದ್ದಾರೋ, ವಜ್ರಂ-ವಜ್ರಾಯುಧವು, ಪ್ರಹರಣಂ-ಆಯುಧವಾಗಿದೆಯೋ, ಸುರಾಃ ದೇವತೆಗಳು, ಸೈನಿಕಾಃ-ಸೇನಾಜನಗಳಾಗಿದ್ದಾರೋ, ಸ್ವರ್ಗಃ-ಸ್ವರ್ಗಲೋಕವು, ದುರ್ಗಮನುಗ್ರಹಃಖಲು-ಅಸಾಧ್ಯಪ್ರದೇಶವುಳ್ಳಂಥ ದ್ದುಷ್ಟೆ, ವಾರಣಃ-ಆನೆಯು, ಐರಾವಣಃ-ಐರಾವತವು, ಇತಿ ಈ ಪ್ರಕಾರವಾದ, ಆಶ್ಚರ್ಯಬಲಾನ್ವಿತಃ-ಆಶ್ಚರ್ಯಬಲದಿಂದ ಕೂಡಿಕೊಂಡಿರುವ, ಬಲಭಿತ್-ಇಂದ್ರನು, ಸಂಗರೇ-ಯುದ್ಧದಲ್ಲಿ, ಪರೈಃ-ಶತ್ರುಗಳಿಂದ, ಭಗ್ನಃ ಜಿತನಾದಂಥಾವನಾದನು, ತತ್-ಅದು ಯುಕ್ತಂನನು-ಯೋವಾದದ್ದಷ್ಟೆ, ದೈವಮೇವ-ದೈವವೆ, ಶರಣಂ ರಕ್ಷಕವಾದದ್ದು, ಪೌರುಷಂ-ಪುರುಷಪ್ರಯತ್ನವು, ವೃಥಾ-ವ್ಯರ್ಥವಾದದ್ದು, ಧಿಕ್ ಧಿಕ್-ನಿಂದಿಸು ನಿಂದಿಸು. ॥ (ಪರಿಕರಾಲಂಕಾರಃ) ॥೮೧॥

ತಾತ್ಪರ್ಯ—ಲೋಕದಲ್ಲಿ ದೈವಬಲವೇ ದೊಡ್ಡದೆಂಬುವದನ್ನು ಹೇಳುತ್ತಾನೆ. ಹೇಗಂದರೆ—ದೇವೇಂದ್ರನಿಗೆ ಬೃಹಸ್ಪತ್ಯಾಚಾರ್ಯರೆ ವಿದ್ಯಾಶಿಕ್ಷಕರು ಮತ್ತು ವಜ್ರಾಯುಧವೆ ಆಯುಧವು ಐರಾವತವೆ ವಾಹನವು ದೇವತೆಗಳೆ ಸೇನಾಜನಗಳು ಇಂಥಾ ಆಶ್ಚರ್ಯವಾದ ಬಲಗಳಿದ್ದಾಗ್ಯೂ ದೇವೇಂದ್ರನು ಯುದ್ಧದಲ್ಲಿ ಸೋತುಹೋದನು. ದೇವಬಲವಿಲ್ಲದ್ದರಿಂದ ಈ ರೀತಿಯಾಯಿತು ದೇವಬಲದೊಡ್ಡದು ಪುರುಷಬಲವು ಪ್ರಯೋಜನವಿಲ್ಲ ನಿಂದಿಸು ಎಂದು ತಾತ್ಪರ್ಯವು ॥೮೧

ಶ್ಲೋ॥ ಭಗ್ನಾಶಸ್ಯಕರಂಡಪಿಂಡಿತತನೋರ್ಮ್ಲಾನೇಂದ್ರಿ
ಯಸ್ಯಕ್ಷುಧಾ ಕೃತ್ವಾಖುರ್ವಿವರಂಸ್ವಯಂನಿಪತಿ
ತೋನಕ್ತಂಮುಖೇಭೋಗಿನಃ ॥ ತೃಪ್ತಸ್ತತ್ಪಿಶಿತೇನ

ಸತ್ವರವಸಿತೇನೈವಯಾತಃಪಥಾ ಸ್ವಸ್ಥಾಸ್ತಿಷ್ಠ
ತದೈವಮೇವಹಿನೃಣಾಂವೃದ್ಧೌಕ್ಷಯೇಕಾರಣಂ ||

ಟೀಕು || ಆಖುಃ- ಇಲಿಯು, ನಕ್ತಂ - ರಾತ್ರಿಯಲ್ಲಿ, ವಿವರಂ- ರಂಧ್ರ ವನ್ನು, ಕೃತ್ವಾ- ಮಾಡಿ, ಕರಂಡಪಿಂಡಿತತನೋಃ- ಕರಂಡ ಪೆಟ್ಟಿಗೆಯಲ್ಲಿ, ಪಿಂಡಿತ- ಗುಂಡಾಗಿ ಮಾಡಲ್ಪಟ್ಟಂಥ, ತನೋಃ- ಶರೀರವುಳ್ಳಂಥ, ಕ್ಷುಧಾ- ಹಸಿವಿನಿಂದ ಮ್ಲಾನೇಂದ್ರಿಯಸ್ಯ- ಮ್ಲಾನ- ಮಗ್ಗಿಹೋದ, ಇಂದ್ರಿಯಸ್ಯ- ಇಂದ್ರಿಯ ಶಕ್ತಿವುಳ್ಳಂಥ, ಭಗ್ನಾಶಸ್ಯ-ಭಗ್ನ- ಹೋದಂಥ, ಆಶಸ್ಯ- ಆಸೆವು ಳ್ಳಂಥ, ಭೋಗಿನಃ-ಸರ್ಪದ, ಮುಖೇ ಬಾಯಲ್ಲಿ, ನಿಪತಿತಃ ಬಿದ್ದಂಥಾದ್ದಾ ಯಿತು. ತತ್ಪಿಶಿತೇನ-ತತ್-ಆಮೂಷಕದ, ಪಿಶಿತೇನ-ಮಾಂಸದಿಂದ, ತೃಪ್ತಃ- ತೃಪ್ತಿಯನ್ನು ಹೊಂದಿದಂಥಾದ್ದಾಗಿ, ತೇನೈವಪಥಾ-ಅದೇಮಾರ್ಗದಿಂದಲೇ. ಅಸೌ ಈಸರ್ಪವು, ಯಾತಃ- ಹೊರಟು ಹೋದಂಥಾದ್ದಾಯಿತು, ನೃಣಾಂ- ಮನುಷ್ಯರ, ವೃದ್ಧೌ- ಅಭಿವೃದ್ಧಿಯಲ್ಲೂ, ಕ್ಷಯೇ- ಕ್ಷೀಣದಲ್ಲೂ, ದೈವ ವೆ ಕಾರಣಂ-ಕಾರಣವಾದಂಥಾದ್ದಷ್ಟೆ, ಸ್ವಸ್ಥಾಃ-ಸ್ವಸ್ಥಚಿತ್ತರಾಗಿ. ತಿಷ್ಠ ತ-ಇರುವಂಥಾವರಾಗಿರಿ || ವಿಷಮಾಲಂಕಾರಃ || ||೮೬||

ತಾತ್ಪರ್ಯ—ಲೋಕದಲ್ಲಿ ಮನುಷ್ಯರಿಗೆ ಆಗುವ ಹಾನಿ ವೃದ್ಧಿಯವು ಗಳಿಗೆ ದೈವವೇ ಕಾರಣವಲ್ಲದೆ ಬೇರೆ ಮನುಷ್ಯನಪ್ರಯತ್ನಗಳು ಯೇನು ಯಿಲ್ಲವೆಂಬುವದನ್ನು ಹೇಳುತ್ತಾನೆ. ಹೇಗಂದರೆ—ಒಬ್ಬ ಹಾವಾಡಿಗನು ಅಟ್ಟಿಕೊಂಡಿದ್ದ ಹಾವಿನಬುಟ್ಟಿಯನ್ನು ಇಲಿಯು ನೋಡಿ ರಾತ್ರಿಕಾಲದ ಲ್ಲಿ ಈ ಪೆಟ್ಟಿಗೆಯಲ್ಲಿ ಯೇನೋ ತಿನ್ನುವ ಪದಾರ್ಥವಿಸೆಯೆಂಬುವ ಆಶೆ ಯಿಂದ ಒಂದು ರಂಧ್ರವನ್ನು ಮಾಡಿ ಒಳಗೆತೂರಿ ಹೋಗಿ ಹಸಿವಿನಿಂದ ತ ನ್ನ ಇಂದ್ರಿಯಶಕ್ತಿ ಮಟ್ಟಾಗಿಯೂ ಶರೀರವನ್ನು ಸಿಂಚಸುತ್ತಿಹಾಕಿ ಇರು ವದರಿಂದ ಸಂಚಾರಕ್ಕೂ ತೊಂದರೆಯಾಗಿಯೂ ನಿರಾಶೆಮಾಡಿಕೊಂಡು ಬಿ ದ್ದಿರುವ ಆಸರ್ಪದ ಬಾಯಿಯಲ್ಲಿ ಬೀಳುವಂಥಾದ್ದಾಯಿತು. ಆಸರ್ಪವು ಇಷ್ಟುಮಟ್ಟಿಗೆ ಆಹಾರ ಸಿಕ್ಕಿತೆಂಬುವ ಸಂತೋಷದಿಂದ ಆ ಇಲಿಯನ್ನು ತಿಂದು ಅದೇರಂಧ್ರದಿಂದಲೆ ಈಚೆಗೆ ಬಂದು ಹೊರಟುಹೋಯಿತು. ಹೀಗೆ ಮನುಷ್ಯರಿಗೆ ಆಗಬೇಕಾದ ಹಾನಿವೃದ್ಧಿಗಳು ಗೊತ್ತಿಲ್ಲವಾದ್ದರಿಂದ ದೈವ ವೆದೊಡ್ಡದೆಂದು ಭಾವಿಸಿ ಸ್ವಸ್ಥಚಿತ್ತರಾಗಿ ಯಿರಬೇಕೆಂದು ಭಾವವು.

ಶ್ಲೋ॥ ಆರ್ಯಃಕಂದುಕಪಾತೇನೋತ್ಪತತ್ಯಾರ್ಯಃಪತನ್ನಪಿ ॥
ತಥಾತ್ವನಾರ್ಯಃಪತತಿಮೃತ್ಪಿಂಡಪತನಂಯಥಾ ॥

ಟೀಕಾ॥ ಆರ್ಯಃ-ಪೂಜ್ಯನು, ಪತನ್ನಪಿ ಪ್ರಮಾದದಿಂದ ಬಿದ್ದಂಥಾವನಾದಾಗ್ಯೂ, ಕಂದುಕಪಾತೇನಯಥಾ - ಚಂಡಿನಂತೆ, ಉತ್ಪತತಿ- ಮೇಲಕ್ಕೆ ಬರುತ್ತಾನೆ, ಅನಾರ್ಯಸ್ತು-ಅಯೋಗ್ಯನಾದರೂ, ಮೃತ್ಪಿಂಡಪತನಂಯಥಾ-ಮಣ್ಣಿನ ಹೆಂಟೆ ಬೀಳುವದು ಹೇಗೋ, ತಥಾ-ಹಾಗೆ, ಪತತಿ- ಬೀಳುತ್ತಾನೆ (ದೃಷ್ಟಾಂತಾಲಂಕಾರಃ—ವೃತ್ತಮಾನುಷ್ಟುಭಂ) ॥೮೩॥

ತಾತ್ಪರ್ಯ—ಯೋಗ್ಯನಾದ ಮನುಷ್ಯನು ಒಂದಾನೊಂದು ಕಾಲದಲ್ಲಿ ಪ್ರಮಾದದಿಂದ ಕೆಳಗೆ ಬಿದ್ದಾಗ್ಯೂ ಚಂಡಿನಹಾಗೆ ಮೇಲಕ್ಕೆ ಬರುತ್ತಾನೆ. ಅಯೋಗ್ಯ ಮನುಷ್ಯನು ಮೇಲಿನಿಂದ ಬಿದ್ದರೆ ಮಣ್ಣಿನಹೆಂಟೆಯಂತೆ ಬೀಳುತ್ತಾನೆ ಮಣ್ಣಿನ ಹೆಂಟೆಯು ಭೂಮಿಯಲ್ಲಿಯೇ ಹೇಗೆ ಕೂತುಕೊಳ್ಳುತ್ತದೆಯೋ ಹಾಗೆ ಅಯೋಗ್ಯನು ಬಿದ್ದಮೇಲೆ ಅಧೋಗತಿಯೇ ಹೊರತು ಬೇರೆಇಲ್ಲ ಎಂದು ತಾತ್ಪರ್ಯವು ॥೮೩॥

ಶ್ಲೋ॥ ಖಲ್ವಾಟೋದಿವಸೇಶ್ವರಸ್ಯಕಿರಣೈಸ್ಸಂತಾಪಿತೋಮ
ಸ್ತಕೇ ಗಚ್ಛನ್ದೇಶಮನಾತಪಂದ್ರುತಗತಿಸ್ತಾಲಸ್ಯ
ಮೂಲಂಗತಃ ॥ ತತ್ರಾಪ್ಯಸ್ಯಮಹಾಫಲೇನಪತತಾ
ಭಗ್ನಂಸಶಬ್ದಂಶಿರಃ ಪ್ರಾಯೋಗಚ್ಛತಿಯತ್ರದೈವ
ಹತಕಸ್ತತ್ರೈವಯಾಂತ್ಯಾಪದಃ ॥ ೮೪ ॥

ಟೀಕಾ॥ ಖಲ್ವಾಟಃ- ಬಟ್ಟತಲೆವುಳ್ಳಮನುಷ್ಯನು, ದಿವಸೇಶ್ವರಸ್ಯ-ಸೂರ್ಯನ, ಕಿರಣೈಃ-ಕಿರಣಗಳಿಂದ, ಮಸ್ತಕೇ, ತಲೆಯೂ, ಸಂತಾಪಿತೇಸತಿ-ತಪಿಸಲ್ಪಟ್ಟಂಥಾದ್ದಾಗುತ್ತಿರಲಾಗಿ, ಅನಾತಪಂ-ಬಿಸಲು ಇಲ್ಲದೆ ಇರುವ, ದೇಶಂ-ಪ್ರದೇಶವನ್ನು, ಗಚ್ಛನ್ಸನ್-ಹೋಗುತ್ತಾ ಇರುವಂಥಾವನಾಗಿ, ದ್ರುತಗತಿಸ್ಸನ್-ಜಾಗ್ರತೆ ಗಮನವುಳ್ಳವನಾಗಿ, ತಾಳಸ್ಯ-ತಾಳೆಮರದ, ಮೂಲಂ-ಬುಡವನ್ನು, ಗತಃ- ಹೊಂದಿದಂಥಾವನಾದನು. ತತ್ರಾಪಿ ಅಲ್ಲಿಯೂಕೂಡ, ಅಸ್ಯ-ಆ ತಾಳೇಮರದ, ಪತತಾ-ಬೀಳುತ್ತಿರುವ, ಮಹಾಫಲೇನ ದೊಡ್ಡದಾದ ಹಣ್ಣಿನಿಂದ, ಅಸ್ಯ-ಆ ಖಲ್ವಾಟನ, ಶಿರಃ- ಶಿರಸ್ಸು, ಸಶಬ್ದಂ- ಶಬ್ದದಿಂದ ಕೂಡೋಣವು ಹೇಗೋ ಹಾಗೆ, ಭಗ್ನಂ - ಒಡೆಯಲ್ಪಟ್ಟಿತು, ಪ್ರಾಯಃ ಬಹು

ಪ್ರಕಾರವಾಗಿ, ಯತ್ರ- ಯಾವಸ್ಥಳದಲ್ಲಿ, ದೈವಹತಕಃ- ದೈವದಿಂದ ಹತನಾ ಗುತ್ತಾನೋ, ತತ್ರೈವ- ಆ ಸ್ಥಳದಲ್ಲಿಯೇ, ಆಪದಃ- ವಿಪತ್ತುಗಳು, ಯಾಂತಿ ಬರುತ್ತವೆ. ||೮೪||

ತಾತ್ಪರ್ಯ—ದೈವವ್ಯಾಪಾರವೆ ದೊಡ್ಡದು ಎಂಬುವದನ್ನು ಹೇಳುತ್ತಾನೆ. ಪಟ್ಟತಲೆ ಮನುಷ್ಯನು ಸೂರ್ಯನ ಕಿರಣದಿಂದ ತಲೆಯು ಕನಿ ಯುಳ್ಳದ್ದು ಬಿಸಿಲನ್ನು ತಡೆಯಲಾಗದೆ ಅತಿಸಾಗ್ರತೆಯಾಗಿ ಒಂದು ತಾಳೆ ಮರದ ಬುಡವನ್ನು ಹೊಂದಿದನು. (ಅಂದರೆ) ಮರದ ಬುಡದಲ್ಲಿ ಕೂತು ಕೊಂಡನು. ಇವನು ಕೂತುಕೊಂಡ ಸಮಯದಲ್ಲಿಯೇ ಆ ತಾಳೆಮರದ ಒಂದು ದೊಡ್ಡದಾದ ಹಣ್ಣು ಇವನ ತಲೆಯಮೇಲೆ ಬಿದ್ದು ಅತಿಶಬ್ದವಾಗಿ ತಲೆಯು ಒಡೆದುಹೋಯಿತು. ದೈವದಿಂದ ಯಾವ ಮನುಷ್ಯನಿಗೆ ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿ ಹಾನಿಯಾಗುವದೋ ಆ ಸ್ಥಳಕ್ಕೆ ಆ ಮನುಷ್ಯನನ್ನು ಬಿಡದೆ ಮೃತ್ಯುವು ಎಳೆದುಕೊಂಡು ಹೋಗುತ್ತದೆ. ಅಂದರೆ ಬಿಸಿಲು ತಾಪವನ್ನು ನಿವಾರಣೆಮಾಡಿಕೊಳ್ಳುವದಕ್ಕೆ ನೆರಳಾದ ತಾಳೆಮರದ ಬುಡಕ್ಕೆ ಹೋದ ಕಾಲದಲ್ಲಿ ದೈವವಶಾತ್ ಆ ಮರದ ಹಣ್ಣು ತಲೆಮೇಲೆ ಬಿದ್ದು ತಲೆಒಡೆದು ಮರಣವನ್ನುಹೊಂದಿದ್ದರಿಂದ ಹಾನಿವೃದ್ಧಿ ಯಶೋಲಾಭಗಳು ಎಲ್ಲೆಲ್ಲಿ ಹೇಗೆ ಆಗುವದೆಂದು ದೈವಕಲ್ಪಿತವಿರುತ್ತದೆಯೋ ಆಸ್ಥಳದಲ್ಲಿಯೋ ಹಾಗೆಯೇ ಆಗುತ್ತದೆ. ದೈವವ್ಯಾಪಾರವನ್ನು ಮೀರಲು ಅಸಾಧ್ಯನೆಂದು ತಾತ್ಪರ್ಯವು. ||೮೪||

ಶ್ಲೋ|| ಗಜಭುಜಂಗವಿಹಂಗಮಬಂಧನಂ ಶಶಿದಿವಾಕರಯೋ
ರ್ಗ್ರಹಪೀಡನಂ || ಮತಿಮತಾಂಚವಿಲೋಕ್ಯದರಿದ್ರ
ತಾಂವಿಧಿರಹೋಬಲವಾನಿತಿಮೇಮತಿಃ ||೮೫||

ಟೀಕು|| ಗಜಭುಜಂಗವಿಹಂಗಮಬಂಧನಂ-ಗಜ- ಆನೆಯು. ಭುಜಂಗ- ಸರ್ಪವು, ವಿಹಂಗಮ- ಪಕ್ಷಿಯು, ಇವುಗಳಿಗೆ ಬಂಧನಂ- ಹಿಡಿದು ಕಟ್ಟೋಣವು, ಶಶಿದಿವಾಕರಯೋಃ- ಚಂದ್ರ ಸೂರ್ಯರಿಗೆ, ಗ್ರಹಪೀಡನಂ- ಗ್ರಹಣವಾಗೋಣವು, ಮತಿಮತಾಂ- ಬುದ್ಧಿವುಳ್ಳಂಥಾವರುಗಳಿಗೆ, ದರಿದ್ರತಾಂ- ದಾರಿದ್ರ್ಯವನ್ನು, ವಿಲೋಕ್ಯ-ನೋಡಿ, ವಿಧಿಃ-ದೈವವು, ಬಲವಾನ್ ಇತಿ- ಬಲವಂತವಾದದ್ದೆಂದ, ಮೇ-ನನ್ನ, ಮತಿಃ- ಬುದ್ಧಿಯು, ಪ್ರವರ್ತತೇ-ಪ್ರವರ್ತಿಸುತ್ತದೆ, ಅಹೋ-ಆಶ್ಚರ್ಯ. ||೮೫||

ತಾತ್ಪರ್ಯ—ದೈವಬಲವೆ ದೊಡ್ಡದೆಂಬುವದನ್ನು ಹೇಳುತ್ತಾನೆ. ಹೇಗೆಂದರೆ—ಆನೆಯು ಸರ್ಪವು ಪಕ್ಷಿಯು ಇವುಗಳಿಗೆ ಉಂಟಾಗುವ ನಿರ್ಬಂಧವನ್ನು ಚಂದ್ರ ಸೂರ್ಯರಿಗೆ ಆಗುವ ಗ್ರಹಣವನ್ನೂ ಪ್ರಜ್ಞಾಶಾಲಿಗಳಿಗೆ ದರಿದ್ರತೆಯುನ್ನೂ ನೋಡಿದರೆ ಲೋಕದಲ್ಲಿ ದೈವನ್ಯಾವಾವು ದೊಡ್ಡದಾದದ್ದು ಎಂದು ಆಶ್ಚರ್ಯವಾಗಿ ನನಗೆ ತೋರುತ್ತಲಿದೆ. ॥೮೫॥

ಶ್ಲೋ॥ ಸೃಜತಿತಾವದಶೇಷಗುಣಾಕರಂಪುರುಷರತ್ನಮಲಂಕರಣಂಭುವಃ ॥ ತದಪಿತತ್‌ಕ್ಷಣಭಂಗಿಕರೋತಿಚೇದಹಹಕಷ್ಟಮಪಂಡಿತತಾವಿಧೇಃ ॥೮೬॥

ಟೀಕು॥ (ವಿಧಿಃ- ಬ್ರಹ್ಮದೇವರು, ) ಭುವಃ- ಭೂಮಿಗೆ, ಅಲಂಕರಣಂ- ಅಲಂಕಾರಸ್ವರೂಪವಾದ, ಅಶೇಷಗುಣಾಕರಂ - ಸಮಸ್ತಗುಣ ನಿಧಿಯಾದ, ಪುರುಷರತ್ನಂ-ರತ್ನಸ್ವರೂಪನಾದ, ಪುರುಷನನ್ನು, ಸೃಜತಿತಾವತ್- ನಿರ್ಮಾಣಮಾಡುತ್ತಾನೆ. ತದಪಿ-ಹಾಗಾದಾಗ್ಯೂ, ತತ್ ಆಪುರುಷರತ್ನವನ್ನು, ಕ್ಷಣಭಂಗಿ ಕ್ಷಣ-ಕ್ಷಣಕಾಲದಲ್ಲಿ, ಭಂಗಿ- ನಾಶವಾದಂಥಾದದ್ದನ್ನಾಗಿ, ಕರೋತಿಚೇತ್- ಮಾಡುವಂಥಾವನಾದರೆ, ವಿಧೇಃ ಬ್ರಹ್ಮದೇವರ, ಅಪಂಡಿತತಾ- ಮೂರ್ಖತ್ವವು ಅಹಹಕಷ್ಟಂ-ಆಶ್ಚರ್ಯಕರವಾದ ಕಷ್ಟವು ॥೮೬॥

ತಾತ್ಪರ್ಯ—ದೈವಗತಿಯು ಅತಿ ರಹಸ್ಯವಾದದ್ದೆಂಬುವದನ್ನು ಹೇಳುತ್ತಾನೆ. ಹೇಗಂದರೆ—ಬ್ರಹ್ಮನು ಭೂಮಿಗೆ ಅಲಂಕಾರ ಸ್ವರೂಪನಾದ ಪುರುಷಶ್ರೇಷ್ಠನನ್ನು ಮೊದಲು ಸೃಷ್ಟಿಮಾಡಿ ಅನಂತರ ಅಂಥಾರತ್ನವನ್ನು ನಾಶವಾಗುವಂತೆ ಮಾಡಿದರೆ ಅಂಥಾ ಬ್ರಹ್ಮದೇವರ ಮೂರ್ಖತ್ವವನ್ನು ನೋಡಿದರೆ ಅತಿವಿಷಾದವುಂಟಾಗುತ್ತದೆ. ಅಂದರೆ ದೇವರಹಸ್ಯವು ಅತಿದುಸ್ತರವಾದದ್ದು. ತಿಳಿಯಲುಸಾಧ್ಯವಾದದ್ದೆಂದು ತಾತ್ಪರ್ಯವು.

ಶ್ಲೋ॥ ಅಯಮಮೃತನಿಧಾನಂನಾಯಕೋಪ್ಯೋಷಧೀನಾಂ ಶತಭಿಷಗನುಯಾತಶ್ಶಂಭುಮೂರ್ಧ್ನೋವತಂಸಃ ॥ ವಿರಹಯತಿನಚೈನಂರಾಜಯಕ್ಷ್ಮಾಶಶಾಂಕಂಹತವಿಧಿಪರಿಪಾಕಃಕೇನವಾಲಂಘನೀಯಃ ॥೮೭॥

ಟೀಕು ॥ ಅಯಂ- ಈ, ಅಮೃತನಿಧಾನಂ, ಅಮೃತ - ಅಮೃತಕ್ಕೆ, ನಿಧಾನಂ- ಗಣಿಯಾದ, ಓಷಧೀನಾಂ - ಓಷಧಿಗಳಿಗೆ, ನಾಯಕೋಪಿ-ದೊರೆ

ಯಾದಂಥ, ಶತಭಿಷಗನುಯಾತಃ ಶತಭಿಷಕ್- ಶತಭಿಷಾನಕ್ಷತ್ರದಿಂದ (ಶತ-ನೂರಾದ, ಭಿಷಕ್ - ವೈದ್ಯರಿಂದ, ಅನುಯಾತಃ- ಅನುಸರಿಸಲ್ಪಡುತಲಿರುವಂಥ) ಶಶಾಂಕಃ - ಚಂದ್ರನು, ಶಂಭುಮೂರ್ಧ್ನಿ - ಶಂಭ - ಈಶ್ವರನ, ಮೂರ್ಧ್ನಿ - ಶಿರಸ್ಸಿಗೆ, ಅವತಂಸಃ- ಆಭರಣವಾಗಿ ಇದ್ದಾನೆ, ಏನಂ - ಈ ಚಂದ್ರನನ್ನು, ರಾಜಯಕ್ಷ್ಮಾ - ಕ್ಷಯರೋಗವು, ನವಿರಹಯತಿ - ಬಿಟ್ಟು ವಿಯೋಗವನ್ನು ಹೊಂದುವದಿಲ್ಲ, ಹತ-ದುಷ್ಟವಾದ, ವಿಧಿವಿಪಾಕಃ - ವಿಧಿ-ದೈವದ ವಿಪಾಕಃ ಪ್ರಾಪ್ತಿಯು, ಕೇನವಾ - ಯಾರಿಂದ, ಲಂಘನೀಯಃ - ದಾಟುವದಕ್ಕೆ ಆಗುವದು, ಪರಿಕರಾಲಂಕಾರಃ. ||೮೭||

ತಾತ್ಪರ್ಯ—ವಿಧಿಯನ್ನು ಮೀರಲಶಕ್ಯವೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ— ಚಂದ್ರನು ಅಮೃತಕಳಾನಿಧಿಯಾದಾಗ್ಯೂ ಔಷಧಿಗಳಿಗೆಲ್ಲಾ ಧೊರೆಯಾದಾಗ್ಯೂ ಈಶ್ವರನ ಶಿರಸ್ಸಿನಲ್ಲಿ ಇದ್ದಾಗ್ಯೂ ರಾಜಯಕ್ಷ್ಮರೋಗವು (ಕ್ಷಯ) ಚಂದ್ರನನ್ನು ಬಿಡದೆ ಬಾಧಿಸುತ್ತಲಿವೆ. ಆದ್ದರಿಂದ ದೈವಗತಿಯನ್ನು ಮೀರುವದಕ್ಕೆ ಆಗುವದಿಲ್ಲ. (ಅಂದರೆ) ಇಷ್ಟು ಸಹಾಯವಿದ್ದಾಗ್ಯೂ ತನ್ನ ರೋಗವನ್ನು ಹೋಗಲಾಡಿಸಿಕೊಳ್ಳದೆ ಹೋದದ್ದರಿಂದ ದೈವಕಲ್ಪಿತ್ತವಾದ್ದನ್ನು ಅನುಭವಿಸಿ ತೀರಬೇಕೆಂಬ ಭಾವವು ||೮೭||

ಶ್ಲೋ|| ಪ್ರಿಯಸಖವಿಪದ್ದಂಡಾಘಾತಪ್ರವಾತಪರಂಪರಾಪರಿ
ಚಯಬಲೇಚಿಂತಾಚಕ್ರೇನಿಧಾಯವಿಧಿಃಖಲಃ || ಮೃ
ದಮಿವಬಲಾತ್ಪಿಂಡೀಕೃತ್ಯಪ್ರಗಲ್ಭಕುಲಾಲವದ್ಭ್ರ
ಮಯತಿಮನೋನೋಜಾನೀಮಃಕಿಮತ್ರವಿಧಾಸ್ಯತಿ ||

ಟೀಕು || ಪ್ರಿಯಸಖ ಪ್ರಿಯ- ಇಷ್ಟನಾದ, ಸಖ- ಸ್ನೇಹಿತನೆ, ಖಲಃ ಶಠನಾದ, ವಿಧಿಃ- ಬ್ರಹ್ಮನು, ಪ್ರಗಲ್ಭಕುಲಾಲವತ್- ಪ್ರಗಲ್ಭ- ಪ್ರೌಢನಾದ ಕುಲಾಲವತ್-ಕುಂಬಾರನೋಪಾದಿಯಲ್ಲಿ, ಮನಃ-ನನ್ನ ಸಂಬಂಧವಾದಮನಸ್ಸನ್ನು, ಮೃದಮಿವ-ಮೃತ್ತಿಕೆಯನ್ನೋಪಾದಿಯಲ್ಲಿ. ಬಲಾತ್- ಬಲಾತ್ಕಾರವಾಗಿ, ಪಿಂಡೀಕೃತ್ಯ- ಉಂಡೆಮಾಡಿ, ವಿಪದ್ದಂಡಾಘಾತಪ್ರವಾತಪರಂಪ ಪರಿಚಯಬಲೇ - ವಿಪದ್ದಂಡೆ - ವಿಪತ್ -ವಿಪತ್ತುಗಳೆಂಬುವಂಥ, ದಂಡ - ಕೋಲಿನಿಂದ, ಆಘಾತ-ಹೊಡಿಯೋಣದರಿಂದ ಹುಟ್ಟಿದ, ಪ್ರವಾತ ಗಾಳಿಯ ಪರಂಪರಾ - ಅತಿಶಯದ, ಪರಿಚಯ - ಸಂಬಂಧದ, ಬಲೇ - ಬಲವುಳ್ಳ ಚಿಂತಾಚಕ್ರೇ- ಚಿಂತಾ- ಯೋಚನೆ ಎಂಬುವಂಥ ಚಕ್ರೇ ಚಕ್ರದಲ್ಲಿ. ನಿಧಾಯ

ಇಟ್ಟು, ಭ್ರಮಯತಿ- ತಿರಿಗಿಸುತ್ತಾನೆ, ಅತ್ರ- ಈ ಭ್ರಮಣದಲ್ಲಿ, ಕಿಂ-ಏನನ್ನು, ವಿಧಾಸ್ಯತಿ- ಮಾಡುತ್ತಾನೊ, ನೋಜಾನೀಮಃ- ತಿಳಿಯಲಾರೆವು (ಅಥವಾ ತಿಳಿಯಲಾರೆವು) ಅಲಂಕಾರ ಉಪಮಾ ‖ ೮೮ ‖

ತಾತ್ಪರ್ಯ—ದೈವಶಕ್ತಿ ದೊಡ್ಡದು. ಅವನ್ನು ತಿಳಿಯಲಸಾಧ್ಯವೆಂಬುದನ್ನು ಈ ಶ್ಲೋಕದಲ್ಲಿ ತನ್ನ ಮಿತ್ರನಿಗೆ ಸಂಬೋಧನೆಮಾಡಿ ಹೇಳುತ್ತಾನೆ. ಹೇಗೆಂದರೆ—ಎಲೈ ಸ್ನೇಹಿತನೆ ಕೇಳು ಈ ದುಷ್ಟನಾದ ಬ್ರಹ್ಮನು ಸಂಸಾರದಲ್ಲಿ ಸಂಭವಿಸುವ ಆಪತ್ಪರಂಪರೆಗಳೆಂಬುವ ದಂಡ ಪ್ರಹರಣದಿಂದ ಹುಟ್ಟಿದ ತಲ್ಬಾದ ಗಾಳಿಯಿಂದ ತಿರಿಗಿಸುತ್ತಲಿರುವ ಯೋಚನೆಗಳೆಂಬುವ ಚಕ್ರದಲ್ಲಿ ಮನೋಮಯವಾದ ಮೃತ್ತಿಕೆಯನ್ನು ಇಟ್ಟು ಕುಶಲಬುದ್ಧಿಯುಳ್ಳ ಕುಂಬಾರನೋಪಾದಿಯಲ್ಲಿ ತಿರುಗಿಸುತ್ತಲಿದ್ದಾನೆ. ಮುಂದೆ ಈ ಬ್ರಹ್ಮನು ಏನು ಮಾಡುವನೊ ತಿಳಿಯಲಾಗದು. ಅಂದರೆ ಗಡಿಗೆಯನ್ನು ಮಾಡುವ ಕುಂಬಾರನು ಮಣ್ಣನ್ನು ಚಕ್ರದಲ್ಲಿ ಇರಿಸಿ ಗಡಿಗೆಮಾಡಿ ತಟ್ಟಿಕೇಗೆ ಕೂಡಿಸುವನೋ ಹಾಗೆ ದೈವವು ಕೂಡ ಮನಸ್ಸನ್ನು ಚಿಂತಾಚಕ್ರದಲ್ಲಿ ತಿರುಗಿಸುತ್ತಾ ಇದ್ದಾನೆ. ಮುಂದೆ ತನಗೆ ಏನುಗತಿಯಾದೀತೆಂದು ಸ್ನೇಹಿತನೊಡನೆ ಹೇಳುತ್ತಾನೆಂದು ಭಾವವು. ‖೮೮‖

ಶ್ಲೋ‖ ವಿರಮವಿರಮಾಯಾಸಾದಸ್ಮಾದ್ದುರಧ್ಯವಸಾಯತೋ
ವಿಪದಿಮಹತಾಂಧೈರ್ಯಧ್ವಂಸಂಯದೀಕ್ಷಿತುಮೀಹ
ಸೇ ‖ ಅಯಿ.ಜಡವಿಧೇಕಲ್ಪಾಪಾಯೇಪ್ಯಪೇತನಿಜಕ್ರ
ಮಾಃಕುಲಶಿಖರಿಣಃಕ್ಷುದ್ರಾನೈತೇನವಾಜಲರಾಶಯಃ‖

ಟೀಕು‖ ಅತಿಜಡವಿಧೇ-ಮೂರ್ಖವಾದ ಮೂಢವಿಧಿಯೇ, ಅಸ್ಮಾತ್-ಈದುರಧ್ಯವಸಾಯತಃ-ದುರ್-ಕಷ್ಟಕರವಾದಂಥಾ, ಅಧ್ಯವಸಾಯತಃ-ವ್ಯವಸಾಯದಿಂದ ಹುಟ್ಟಿದ, ಆಯಾಸಾತ್-ಶ್ರಮದದೆಸೆಯಿಂದ, ವಿರಮವಿರಮ-ಸುಮ್ಮನೆಯಾಗು, ಮಹತಾಂ-ಮಹಾತ್ಮರುಗಳ, ವಿಪದಿ-ಆಪತ್ತಿನಲ್ಲಿ, ಧೈರ್ಯಧ್ವಂಸಂ- ಧೈರ್ಯ- ಧೈರ್ಯದ, ಧ್ವಂಸ- ನಾಶವನ್ನು, ಈಕ್ಷಿತುಂ- ನೋಡುವುದಕ್ಕೋಸ್ಕರ, ಈಹಸೇಯದಿ-ಅಪೇಕ್ಷಿಸುವನಾದರೆ, ವಿರಮ, ವಿರಮ- ಪೂರ್ವೇಣಾನ್ವಯಃ ಕಲ್ಪಾಪಾಯೇಪಿ, ಕಲ್ಪ-ಮನ್ವಾದಿಕಲ್ಪಗಳ, ಅಪಾಯೇಪಿ-ನಾಶದಲ್ಲಿಯೂ ಕೂಡ, ಅಪೇತನಿಜಕ್ರಮಾಃ-ಅಪೇತ-ಹೋದಂಥಾ, ನಿಜ-ಸ್ವಕೀಯ

ವಾದ, ಕ್ರಮಾಃ ಮರ್ಯಾದೆಗಳುಳ್ಳ, ಕುಲಶಿಖರಿಣೋವಾ ವಿಂಧ್ಯಾದಿ ಪರ್ವತ ಗಳೂ, ಜಲರಾಶಯೋವಾ-ಸಮುದ್ರಗಳೂ, ಏತೇ- ಇವುಗಳು, ನಕ್ಷುದ್ರಾಃ ಲಘುಪದಾರ್ಥಗಳಾಗುವುದಿಲ್ಲ, ಅಥವಾ ಕ್ಷುದ್ರಪದಾರ್ಥಗಳಾಗುವುದಿಲ್ಲ.

ತಾತ್ಪರ್ಯ—ಎಲೈ ಮಂದಮತಿಯಾದ ಬ್ರಹ್ಮನೇ ವಿಪತ್ತಿನಲ್ಲಾದರೂ ಮಹಾತ್ಮರ ಧೈರ್ಯವನ್ನು ನಾಶಮಾಡುವೆನೆಂಬ ಭಾವನೆಯನ್ನು ಬಿಡು. ಪ್ರಳಯಕಾಲದಲ್ಲಿ ತಮ್ಮ ಸ್ಥಿರತ್ವವನ್ನು ಬಿಟ್ಟು ಕುಲಪರ್ವತಗಳು ಚಲಿಸಿದುವು. ಸಮುದ್ರಗಳು ಮೇರೆದಪ್ಪಿ ಉಕ್ಕಿದುವು. ಅವುಗಳಂತೆ ಮಹಾತ್ಮರು ಜಡರೆಂದು ತಿಳಿಯಬೇಡ. ನಿನ್ನ ಪ್ರಯತ್ನವು ನಿಷ್ಫಲವಾದುದು. ಅಂದರೆ ನಿಶ್ಚಲವಾದ ಕುಲಪರ್ವತ ಸಮುದ್ರಗಳಿಗಿಂತಲೂ ಮಹಾತ್ಮರ ಧೈರ್ಯವು ಸ್ಥಿರವಾದುದೆಂದು ಭಾವವು. ||೪೯||

ಶ್ಲೋ|| ದೈವೇನಪ್ರಭುಣಾಸ್ವಯಂಜಗತಿಯಸ್ಯಯತ್ಪ್ರಮಾ
ಣೀಕೃತಂ | ತತ್ತಸ್ಯೋಪನಮೇನ್ಮನಾಗಪಿಮಹಾ
ನ್ನೈವಾಶ್ರಯಃಕಾರಣಂ || ಸರ್ವಾಶಾಪರಿಪೂರಕೇ
ಜಲಧರೇವರ್ಷತ್ಯಪಿಪ್ರತ್ಯಹಂಸೂಕ್ಷ್ಮಾ ಏವಪತಂತಿ
ಚಾತಕಮುಖೇದ್ವಿತ್ರಾಃಪಯೋಬಿಂದವಃ ||೫೦||

ಟೀಕು || ಪ್ರಭುಣಾ- ಸಮರ್ಥವಾದ, ದೈವೇನ- ದೈವದಿಂದ ಜಗತಿ- ಲೋಕದಲ್ಲಿ, ಸ್ವಯಂ- ತಾನು, ಯಸ್ಯ- ಯಾವ ಮನುಷ್ಯನಿಗೆ, ಯದ್ವಸ್ತು- ಯಾವಪದಾರ್ಥವು, ಪ್ರಮಾಣೀಕೃತಂ - ನಿಶ್ಚಯಿಸಲ್ಪಡುತ್ತೋ, ತಸ್ಯ- ಆ ಮನುಷ್ಯನಿಗೆ, ತತ್ ಆ ವಸ್ತುವು, ನಮೇತ್- ಪ್ರಾಪ್ತವಾಗುತ್ತದೆ, ಮನಾಗಪಿ-ಕೊಂಚವೂಕೂಡ, ಮಹಾನ್- ಅಧಿಕವಾದಂಥ, ಆಶ್ರಯಃ ಆಶ್ರಯವು, ಕಾರಣಂ-ಕಾರಣಭೂತವಾದಂಥಾದ್ದು, (ಸಾಧನ ಭೂತವಾದಂಥಾದ್ದು) ನ- ಅಲ್ಲ, ತಥಾಹಿ-ಯುಕ್ತವೇನಂ, ಸರ್ವಾಶಾಪರಿಪೂರಕೇ- ಸರ್ವ- ಸಮಸ್ತವಾದ, ಆಶಾ-ಅಪೇಕ್ಷೆಯ, ಪರಿಪೂರಕೇ-ಪೂರ್ತಿಮಾಡುವಂಥ. ಜಲಧರೇ- ಮೇಘವೂ, ಪ್ರತ್ಯಹಂ ದಿನದಿನದಲ್ಲೂ, ವರ್ಷತಿಸತ್ಯಪಿ- ಮಳೆಸುರಿಯುವಂಥಾದ್ದು ಆಗುತ್ತಿರಲಾಗಿ, ಚಾತಕಮುಖೇ-ಚಾತಕಪಕ್ಷಿಯ, ಮುಖದಲ್ಲಿ (ಬಾಯಿಯಲ್ಲಿ ದ್ವಿತ್ರಾಃ- ಎರಡು ಅಥವಾ ಮೂರಾದ, ಪಯೋಬಿಂದವಃ ಉದಕಬಿಂದುಗಳು, ಪತಂತಿ ಬೀಳುತ್ತವೆ, ಅರ್ಥಾಂತರನ್ಯಾಸಾಲಂಕಾರಃ || ಶಾರ್ದೂಲವಿಕ್ರೀಡಿತವೃತ್ತಂ. |೫೦|

ತಾತ್ಪರ್ಯ—ದೈವವೇ ದೊಡ್ಡದು ಎಂಬುವದನ್ನು ಹೇಳುತ್ತಾನೆ. ಸಮರ್ಥನಾದ ದೇವರಿಂದ, ಯಾವ ಮನುಷ್ಯನಿಗೆ ಎಷ್ಟು ಕೊಡುವದಾಗಿ ಕ್ಲುಪ್ತಮಾಡಿದ್ದಾನೆಯೋ ಅಷ್ಟರಮಟ್ಟಿಗೇನೇ ಮಾಡುತ್ತಾನೆ. ಇನ್ನು ಅದಕ್ಕೆ ಹೆಚ್ಚಾಗಿ ಸ್ವಲ್ಪವೂ ಕೊಡುವದಿಲ್ಲ. ಅದು ಯುಕ್ತವೇ ಸರಿ. ಸರ್ವಜನಕ್ಕೂ ಇಷ್ಟಾರ್ಥವನ್ನು ಕೊಡುವಂಥ ಈ ಮಳೆಯು ವರ್ಷಿಸುವ ಕಾಲದಲ್ಲಿ ಚಾತಕಪಕ್ಷಿಯು ಬಾಯಿಯಲ್ಲಿ ಎರಡು ಮೂರು ಬಿಂದುಗಳವು ಟ್ಟಿಗೆ ಬೀಳುತ್ತವೆ. ಅಂದರೆ ಎಷ್ಟು ಮಳೆಹುಯ್ಯುತ್ತಿದ್ದಾಗ್ಯೂ ದೇವರ ಕ್ಲುಪ್ತವೆಷ್ಟಿರುತ್ತದೆಯೋ ಅಷ್ಟೇ ಬೀಳುತ್ತೆಂಬದಾಗಿ ತಾತ್ಪರ್ಯ ||೯೦||

ಶ್ಲೋ|| ಯೇನೈವಾಂಬರಖಂಡೇನಸಂವೀತೋನಿಶಿಚನ್ದ್ರಮಾಃ
ತೇನೈವಚದಿವಾಭಾನುರಹೋದೌರ್ಗತ್ಯಮೇತಯೋಃ

ಟೀಕು|| ನಿಶಿ-ರಾತ್ರಿ ಕಾಲದಲ್ಲಿ, ಚಂದ್ರಮಾಃ- ಚಂದ್ರನು, ಯೇನೈವ- ಎಷ್ಟುಪರಿಮಿತವಾದ, ಅಂಬರಖಂಡೇನ ಅಂಬರ- ವಸ್ತ್ರದ, ಖಂಡೇನ ತುಂಡಿ ನಿಂದ, ಸಂವೀತಃ-ಮುಚ್ಚಲ್ಪಟ್ಟವನು, ಭವತಿ ಆಗುತ್ತಾನೋ, ತೇನೈವಚ- ಅದೇಬಟ್ಟೆಯಿಂದಲೆ, ದಿವಾ-ಹಗಲಿನಲ್ಲಿ, ಭಾನುಃ-ಸೂರ್ಯನು (ಮುಚ್ಚಲ್ಪಡು ತ್ತಾನೆ,) ಏತಯೋಃ- ಈ ಚಂದ್ರಸೂರ್ಯರಿಗೆ, ದೌರ್ಗತ್ಯಂ- ದುರ್ಗತಿಭಾವವು, ಅಹೋ-ಆಶ್ಚರ್ಯವಾದದ್ದು. ||೯೧||

ತಾತ್ಪರ್ಯ—ದೈವಗತಿ ದೊಡ್ಡದೆಂಬುವದನ್ನೇ ಇನ್ನೂ ಹೇಳುತ್ತಾ ನೆ. ರಾತ್ರಿ ಹಗಲುಕಾಲಗಳಲ್ಲಿ ಚಂದ್ರ ಸೂರ್ಯರಿಗೆ ದೃಷ್ಟಾಂತವಾಗಿ ಹೇಳುವುದೇನೆಂದರೆ. ರಾತ್ರಿಕಾಲದಲ್ಲಿ ಹುಟ್ಟುವ ಚಂದ್ರನಿಗೆ ಎಷ್ಟುಪರಿ ಮಿತಿಯುಳ್ಳ ವಸ್ತ್ರದಿಂದ ಮುಚ್ಚುವದಕ್ಕೆ ಆಗುತ್ತದೆಯೋ, ಹಗಲು ಹು ಟ್ಟುವ ಸೂರ್ಯನು ಅಷ್ಟೇ ಅಗಲದ ಆದೇವಸ್ತ್ರದಿಂದ ಮುಚ್ಚಲ್ಪಡುತ್ತಾನೆ. ಆಶ್ಚರ್ಯ- ಅಂಬರ ಖಂಡ ಆಕಾಶದ ಒಂದುಭಾಗ, ವಸ್ತ್ರದ ಒಂದು ಭಾಗವೆಂದು ಅರಿಯಬೇಕು. ಈ ಚಂದ್ರ ಸೂರ್ಯರಿಗೆ ಒಂದು ದುರ್ಗತಿ ಭಾವವು ಆಶ್ಚರ್ಯಕರವಾಗಿದೆ. ಶ್ಲೇಷಾಲಂಕಾರಃ ||

ದೈವಪದ್ಧತಿಃ ಸಂಪೂರ್ಣಾ.



## —ಕರ್ಮಪದ್ಧತಿ ಪ್ರಾರಂಭಃ—

ಶ್ಲೋ|| ನಮಸ್ಯಾಮೋದೇವಾನ್ನನುಹತ ವಿಧೇಸ್ತೇಪಿವಶಗಾವಿ
ಧಿರ್ವಂಧ್ಯಸ್ಸೋಪಿಪ್ರತಿನಿಯತಕರ್ಮೈಕಫಲದಃ ||
ಫಲಂಕರ್ಮಾಯತ್ತಂಯದಿಕಿಮಪರೈಃಕಿಂಚ ವಿಧಿನಾ
ನಮಸ್ತತ್ಕರ್ಮಭ್ಯೋ ವಿಧಿರಪಿನಯೇಭ್ಯಃಪ್ರಭವತಿ ||

ಟೀಕಾ|| ದೇವಾನ್ ಪ್ರತಿ- ಇಂದ್ರಾದಿದೇವತೆಗಳನ್ನೂ ಕೂಡ, ವಿಧೇಃ- ಆಚ ತುರ್ಮುಖಬ್ರಹ್ಮನಿಗೆ, ವಶಗಾಃ ಸ್ವಾಧೀನವಾದವರು, ನನುಹತ- ಕಷ್ಟವು, ಸೋಪಿ-ಆಪ್ರಸಿದ್ಧನಾದ, ವಿಧಿರಪಿ ಚತುರ್ಮುಖಬ್ರಹ್ಮನೂಕೂಡ, ವಂಧ್ಯಃ- ನಿಷ್ಫಲನಾದ, ಪ್ರತಿನಿಯತಕರ್ಮೈಕಫಲದಃ, ಪ್ರತಿನಿಯತ- ಕರ್ಮಶಾಸ್ತ್ರಾನುಸಾರವಾಗಿ ಮಾಡಲ್ಪಟ್ಟ, ಕರ್ಮೈಕಫಲದಃ, ಕರ್ಮ- ವ್ಯಾಪಾರದ, ಏಕಫಲದಃ- ಫಲಪ್ರದಾಯಕನಾಗುತ್ತಾನೆ, ಫಲಂ-ಆಫಲವು, ಕರ್ಮಾಯತ್ತಂ-ಕರ್ಮ-ವ್ಯಾಪಾರಕ್ಕೆ, ಆಯತ್ತಂ-ಅಧೀನವಾದದ್ದು, ಯದಿ-ಆದರೆ, ಅಪರೈಃ-ಅನ್ಯದೇವತೆಗಳಿಂದ ಕಿಂ-ಏನುಪ್ರಯೋಜನವು ! ವಿಧಿನಾ ಬ್ರಹ್ಮದೇವರಿಂದ, ಕಿಂಚ ಸ್ವಲ್ಪವೂಕೂಡ, ನ-ಇಲ್ಲ, ಯೇಭ್ಯಃ- ಯಾವ, ಕರ್ಮಭ್ಯಃ ಕರ್ಮಗಳ ದೆಸೆಯಿಂದ, ಪ್ರಭವತಿ-ಆಗುತ್ತೋ, ತತ್ಕರ್ಮಭ್ಯಃ- ಆಕರ್ಮಗಳಿಗೋಸ್ಕರ, ನಮಃ- ನಮಸ್ಕಾರವು. ಮಾಲಾದೀಪಿಕಾಲಂಕಾರಃ. [೯೩]

ತಾತ್ಪರ್ಯ—ಲೋಕದಲ್ಲಿ ಕರ್ಮಫಲವೇ ದೊಡ್ಡದೆಂಬುವದನ್ನು ಹೇಳುತ್ತಾನೆ. ಹ್ಯಾಗಂದರೆ—ಇಂದ್ರಾದಿ ದೇವತೆಗಳಿಗೆ ನಮಸ್ಕಾರಮಾಡಿದರೆ ಆ ಇಂದ್ರಾದಿ ದೇವತೆಗಳೂ ಕೂಡ ವಿಧಿಗೆ (ಬ್ರಹ್ಮನಿಗೆ) ಸ್ವಾಧೀನವಾದವರು. ಅಂಥ ಚತುರ್ಮುಖ ಬ್ರಹ್ಮನೂ ಕೂಡ ಕರ್ಮಫಲವನ್ನು ಕೊಡತಕ್ಕವನಾಗಿದ್ದಾನೆ. ಅಂಥಾ ಫಲವು ಕರ್ಮಕ್ಕೆ ಸ್ವಾಧೀನವಾದುದು. ಯಾವಫಲವು ಕರ್ಮಾಧೀನವಾಗಿದೆಯೋ ಅಂಥ ಕರ್ಮಕ್ಕೋಸ್ಕರ ನಮಸ್ಕಾರ ಮಾಡುತ್ತೇನೆ. ಬ್ರಹ್ಮನಿಂದ ಮತ್ತು ದೇವತೆಗಳಿಂದ ಏನೂ ಪ್ರಯೋಜನವಿಲ್ಲವೆಂಬದಾಗಿ ತಾತ್ಪರ್ಯವು. ||೯೨||

ಶ್ಲೋ|| ಬ್ರಹ್ಮಾಯೇನಕುಲಾಲವನ್ನಿಯಮಿತೋಬ್ರಹ್ಮಾಂಡ
ಭಾಂಡೋದರೇ ವಿಷ್ಣುರ್ಯೇನದಶಾವತಾರಗಹನೇಕ್ಷಿ

ಕ್ಷಿಪ್ತೋಮಹಾಸಂಕಟೇ || ರುದ್ರೋಯೇನಕಪಾಲಪಾ
ಣಿಪುಟಕೇಭಿಕ್ಷಾಟನಂಸೇವತೇಸೂರ್ಯೋಭ್ರಾಮ್ಯತಿ
ನಿತ್ಯಮೇವಗಗನೇತಸ್ಮೈನಮಃಕರ್ಮಣೇ || ೯೩ ||

ಟೀಕು|| ಯೇನ-ಯಾವಕರ್ಮದಿಂದ, ಬ್ರಹ್ಮಾ-ಚತುರ್ಮುಖಬ್ರಹ್ಮನು, ಬ್ರಹ್ಮಾಂಡಭಾಂಡೋದರೇ-ಬ್ರಹ್ಮಾಂಡ-ಬ್ರಹ್ಮಾಂಡವೆಂಬ ಪಂಥ ಭಾಂಡ-ಪಾತ್ರೆಯು, ಉದರೇ-ಮಧ್ಯದಲ್ಲಿ, ಕುಲಾಲವತ್-ಕುಂಬಾರನೋಪಾದಿಯಲ್ಲಿ, ನಿಯಮಿತಃ-ನಿಯಾಮಕ ಮಾಡಲ್ಪಟ್ಟನು, ವಿಷ್ಣುಃ-ಶ್ರೀ ಮಹಾವಿಷ್ಣುವು, ದಶಾವತಾರಗಹನೇ-ದಶ-ಹತ್ತಾದ ಅವತಾರ-ಅವತಾರಗಳಿಂದ, ಗಹನೇ-ಕಷ್ಟಕರವಾದ, ಮಹಾಸಂಕಟೇ-ಮಹಾ-ಅಧಿಕವಾದ, ಸಂಕಟೇ-ಶ್ರಮದಲ್ಲಿ, ಕ್ಷಿಪ್ತಃ-ಮುಳುಗಲ್ಪಟ್ಟನು, ರುದ್ರಃ-ಈಶ್ವರನು, ಯೇನ-ಯಾವಕರ್ಮದಿಂದ, ಕಪಾಲಪಾಣಿಪುಟಕೇ-ಕಪಾಲ-ಕಪಾಲವುಳ್ಳಂಥಾ, ಪಾಣಿಪುಟಕೇ ಪಾಣಿ-ಹಸ್ತದ, ಪುಟಕೇ-ಪ್ರದೇಶದಲ್ಲಿ, ಭಿಕ್ಷಾಟನಂ-ಭಿಕ್ಷಾಯಾತ್ರೆಯನ್ನು, ಸೇವತೇ-ಮಾಡುತ್ತಾನೋ ಸೂರ್ಯಃ-ಸೂರ್ಯನು, ನಿತ್ಯಮೇವ-ನಿರಂತರದಲ್ಲೂ, ಗಗನೇ-ಆಕಾಶದಲ್ಲಿ, ಯೇನ-ಯಾವಕರ್ಮದಿಂದ, ಭ್ರಾಮ್ಯತಿ-ತಿರುಗುತ್ತಾನೋ ತಸ್ಮೈ-ಅಂಥಾ ಕರ್ಮಕ್ಕೋಸ್ಕರ, ನಮಃ-ನಮಸ್ಕಾರವು. ||೯೩||

ತಾತ್ಪರ್ಯ—ಕರ್ಮವೇ ಹೆಚ್ಚಾದದ್ದೆಂಬುವುದನ್ನು ಹೇಳುತ್ತಾನೆ. ಚತುರ್ಮುಖ ಬ್ರಹ್ಮನು ಈಬ್ರಹ್ಮಾಂಡ ಮಧ್ಯದಲ್ಲಿ, ಕುಲಾಲನೋಪಾದಿಯಲ್ಲಿ ಅಂದರೆ (ಕುಂಬಾರನೋಪಾದಿಯಲ್ಲಿ) ಸಜಾತೀಯ ವಿಜಾತೀಯಗಳನ್ನು ಯಾವ ಕರ್ಮಬಲದಿಂದ ಸೃಷ್ಟಿಮಾಡುವದಕ್ಕೆ ಗೊತ್ತುಮಾಡಲ್ಪಟ್ಟನೋ ವಿಷ್ಣುವೂ ಕೂಡ, ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಂದ, ಉಂಟಾದ ಶ್ರಮದಲ್ಲಿ ನಿಯಮಿಸಲ್ಪಟ್ಟನೋ, ಈಶ್ವರನೂಕೂಡ ಕರ್ಮಬಲದಿಂದ ಭಿಕ್ಷಾಪಾತ್ರೆಯನ್ನು ಕೈಯಲ್ಲಿ ತೆಗೆಸುಕೊಂಡು ಭಿಕ್ಷಾಟನೆ ಮಾಡುತ್ತಾನೋ ಅಂಥಾ ಕರ್ಮಕ್ಕೋಸ್ಕರ ನಮಸ್ಕಾರಮಾಡುತ್ತೇನೆ. ಅಂದರೆ ಕರ್ಮಫಲವು ಬ್ರಹ್ಮ, ವಿಷ್ಣು ಮಹೇಶ್ವರರಿಗೂ ಕೂಡ ಅನುಭವಿಸನೇ ತಪ್ಪಿದ್ದಲ್ಲ. ಎಂದು ತಾತ್ಪರ್ಯ. ||೯೩||

ಶ್ಲೋ|| ಯಾಸಾಧೂಂಶ್ಚಖಲಾನ್ಕರೋತಿವಿದುಷೋಮೂ
ರ್ಖಾನ್ಹಿತಾನ್ದ್ವೇಷಿಣಃಪ್ರತ್ಯಕ್ಷಂಕುರುತೇಪರೋ

ಕ್ಷಮಮೃತಂಹಾಲಾಹಲಂತತ್‌ಕ್ಷಣಾತ್ || ತಾಮಾ
ರಾಧಯಸತ್ಕ್ರಿಯಾಂಭಗವತೀಂಭೋಕ್ತುಂಫಲಂ
ವಾಂಛಿತಂ ಹೇಸಾಧೋವ್ಯಸನೈರ್ಗುಣೇಷು ವಿಪು
ಲೇಷ್ವಾಸ್ಥಾಂವೃಥಾಮಾಕೃಥಾಃ || ೯೪ ||

ಟೀಕು|| ಯಾ-ಯಾವದಾದ, ಸತ್ಕ್ರಿಯಾ ಸತ್-ಸಮೀಚೀನವಾದ, ಕ್ರಿಯಾ-ಕರ್ಮವು, ಖಲಾನ್-ದುರ್ಜನರನ್ನು, ಸಾಧೂನ್-ಸತ್ಪುರುಷರನ್ನಾಗಿ, ಕರೋತಿ-ಮಾಡುತ್ತೋ, ಮೂರ್ಖಾನ್-ಮೂರ್ಖ ಮನುಷ್ಯರನ್ನು, ವಿದುಷಃ-ವಿದ್ವಾಂಸರನ್ನಾಗಿ ಮಾಡುತ್ತೋ, ದ್ವೇಷಿಣಃ-ಶತ್ರುಗಳನ್ನು, ಹಿತಾನ್-ಇಷ್ಟರನ್ನಾಗಿ, ಕುರುತೇ-ಮಾಡುತ್ತೋ, ಪರೋಕ್ಷಂ-ಮರೆಯಾಗಿರುವಂಥ, ಹಾಲಾಹಲಂ-ವಿಷವನ್ನು, ಪ್ರತ್ಯಕ್ಷಂ-ಪ್ರತ್ಯಕ್ಷವಾದಂಥ, ಅಮೃತಂ-ಸುಧಾರಸವನ್ನಾಗಿ, ಕುರುತೇ-ಮಾಡುತ್ತೋ, ವಾಂಛಿತಂ-ಇಷ್ಟಾರ್ಥವನ್ನು, ಭೋಕ್ತುಂ-ಅನುಭವಿಸುವಕ್ಕೋಸ್ಕರ, ಭಗವತೀಂ ಪೂಜ್ಯವಾದಂಥ, ತಾಂ-ಅಂಥಾ ಸತ್ಕರ್ಮವನ್ನು, ಆರಾಧಯ-ಸೇವಿಸು, ಹೇಸಾಧೋ-ಎಲೈ ಸಾಧುವೆ, ವಿಪುಲೇಷು-ವಿಸ್ತಾರಗಳಾದ, ಗುಣೇಷು-ಸತ್ವರಜಸ್ತಮೋಗುಣಗಳಲ್ಲಿ, ವ್ಯಸನೈಃ ವ್ಯಾಪಾರಗಳಿಂದ, ವೃಥಾ-ವ್ಯರ್ಥವಾಗಿ, ಆಸ್ಥಾಂ-ಆಸ್ತಿಕ್ಯಬುದ್ಧಿಯನ್ನು, ಮಾಕೃಥಾಃ-ಮಾಡಬೇಡ || ೯೪ ||

ತಾತ್ಪರ್ಯ—ಸತ್ಕರ್ಮದಿಂದ ಸಕಲ ಇಷ್ಟಪ್ರದಾಯಕವಾದ ಫಲಗಳುಂಟಾಗುತ್ತವೆ. ಎಂಬುವದನ್ನು ಹೇಳುತ್ತಾನೆ. ಅದು ಹ್ಯಾಗೆಂದರೆ; ಯಾವ ಸತ್ಕರ್ಮವನ್ನಾದರೂ, ದುರ್ಜನರು ಆಚರಿಸಿದರೆ ಅಂಥಾ ದುರ್ಜನರನ್ನು ಸತ್ಪುರುಷರನ್ನಾಗಿಯೂ, ಮೂರ್ಖರನ್ನು ಪಂಡಿತರನ್ನಾಗಿಯೂ, ದ್ವೇಷಿಗಳನ್ನು ಹಿತರನ್ನಾಗಿಯೂ, ಪರೋಕ್ಷದಲ್ಲಿ, ಇರತಕ್ಕ ವಿಷವನ್ನಾದರೂ ಪ್ರತ್ಯಕ್ಷದಲ್ಲಿ, ಅಮೃತಧಾರೆಯನ್ನಾಗಿ, ಯಾವದು ಮಾಡುತ್ತದೆಯೋ, ಅಂಥಾ ಸತ್ಕರ್ಮವನ್ನು ಆಚರಿಸಿ ಇಷ್ಟಾರ್ಥವನ್ನು ಹೊಂದುವದಕ್ಕೋಸ್ಕರವಾಗಿ ಸೇವಿಸು, ಎಲೈ ಸತ್ಪುರುಷನೇ ಅನೇಕ ವ್ಯಸನಗಳಿಂದ, ವಿಸ್ತಾರವಾದ, ರಜಸ್ತಮಃ ಪ್ರಭೃತಿಗುಣಗಳಲ್ಲಿ ವ್ಯರ್ಥವಾಗಿ ಪ್ರಯತ್ನ ಮಾಡಬೇಡ ಎಂದು ತಾತ್ಪರ್ಯ ||೯೪||

ಶ್ಲೋ|| ಶುಭ್ರಂಸದ್ಮಸವಿಭ್ರಮಾಯುವತಯಃಶ್ವೇತಾತ
ಪತ್ರೋಜ್ವಲಾಲಕ್ಷ್ಮೀರಿತ್ಯನುಭೂಯತೇಚಿರಮನು

ನ್ವ್ಯಾತೇಶುಭೇಕರ್ಮಣಿ ॥ ವಿಚ್ಛಿನ್ನೇನಿತರಾಮನಂಗ
ಕಲಹಕ್ರೀಡಾತ್ರುಟತ್ತಂತುಕಂಮುಕ್ತಾಜಾಲಮಿವಪ್ರ
ಯಾತಿಝಟಿತಿಭ್ರಶ್ಯದ್ದಿಶೋದೃಶ್ಯತಾಂ ॥ ೯೫ ॥

**ಟೀಕು॥** ಚಿರಂ-ಬಹುಕಾಲದಿಂದ. ಅನವ್ಯಾತೇ ಅನುಸರಿಸಿ ಬಂದಂಥಾ, ಶುಭೇಕರ್ಮಣಿ - ಶುಭೇ - ಶುಭಕರವಾದಂಥ, ಕರ್ಮಣಿ - ಕರ್ಮವು, ಸತ್ಯಪಿ· ಇರುವಂಥಾದ್ದಾಗುತ್ತಿರಲಾಗಿ, ಶುಭ್ರಂ· ಧಾವಳ್ಯವಾದಂಥ, ಸದ್ಮ· ಮನೆಯು, ಸವಿಭ್ರಮಾಃ· ವಿಲಾಸದಿಂದ ಕೂಡಿದಂಥ, ಯುವತಯಃ ಸ್ತ್ರೀಯರು ಗಳು, ಶ್ವೇತಾತಪತ್ರೋಜ್ವಲಾ-ಶ್ವೇತ· ಶುಭ್ರವಾದ, ಆತಪತ್ರ- ಛತ್ರಿಯಿಂದ-ಉಜ್ವಲಾ- ಪ್ರಕಾಶಮಾನವಾದಂಥ, ಲಕ್ಷ್ಮೀಃ ರಾಜ್ಯಲಕ್ಷ್ಮಿಯು, ಇತಿ. ಹೀಗೆಂದು, ಅನುಭೂಯತೇ- ಅನುಭವಿಸಲ್ಪಡುತ್ತದೆ, ವಿಚ್ಛಿನ್ನೇಸತಿ- ಸುಕೃತವು ನಾಶವಾದಂಥಾದ್ದಾಗುತ್ತಿರಲಾಗಿ, ನಿತರಾಂ· ಅತ್ಯಂತವಾಗಿ, ಅನಂಗಕಲಹಕ್ರೀಡಾತ್ರುಟತ್ತಂತುಕಂ-ಅನಂಗ-ಮನ್ಮಥನ, ಕ್ರೀಡಾ-ವ್ಯಾಪಾರನೆಂಬುವಂಥ, ಕಲಹ-ಯುದ್ಧದಲ್ಲಿ, ತ್ರುಟತ್-ಸೀಳಿಹೋದಂಥ, ತಂತುಕಂ-ಧಾರವುಳ್ಳಂಥ, ಮುಕ್ತಾಜಾಲಮಿವ-ಮುಕ್ತಾ-ಮುತ್ತುಗಳ, ಜಾಲಮಿವ-ಸಮೂಹದೋಪಾದಿಯಲ್ಲಿ, ಭ್ರಶ್ಯತ್ಸತ್· ಜಾರಿಹೋಗುತ್ತಿರಲಾಗಿ, ದಿಶಃ· ದಿಕ್ಕುಗಳನ್ನು ಕುರಿತು, ದೃಶ್ಯತಾಂ ನೋಡುತ್ತಿರುವವರ ಮುಂದುಗಡೆಯಲ್ಲಿಯೇ, ಝಟಿತಿ·ಜಾಗ್ರತೆಯಾಗಿ ಪ್ರಯಾತಿ· ಹೋಗುತ್ತದೆ. ಆದ್ದರಿಂದ ಕರ್ಮವೆ ದೊಡ್ಡದೆಂದು ಭಾವವು. ॥೯೫॥

ತಾತ್ಪರ್ಯ — ವೃದ್ಧಿ ಆಗತಕ್ಕದ್ದು ಕರ್ಮಫಲದಿಂದಲೇ ಸಂಭವಿಸುತ್ತದೆ. ಎಂಬುವದನ್ನು ಹೇಳುತಾನೆ. ಪುರಾಕೃತವಾದ ಅನುಸರಿಸಿ ಬಂದ ಶುಭ ಕರ್ಮವು ಬರುತ್ತಿರಲಾಗಿ ಶುಭ್ರವಾಗಿ ಉಪ್ಪರಿಗೆಯಿಂದ ಕೂಡಿದ ಮನೆಯು, ಅತಿವಿಲಾಸವನ್ನುಂಟುಮಾಡುತ್ತಿರುವ (ಕಾಮಿನಿಯರು) ಸ್ತ್ರೀಯರುಗಳು, ಏಕಚಕ್ರಾಧಿಪತ್ಯದಿಂದ, ರಾಜ್ಯಲಕ್ಷ್ಮಿಯು, ಅನುಭವಿಸಲ್ಪಡುತಾಳೆ ಪುಣ್ಯವು ಮುಗಿದು ಹೋದಂಥಾದ್ದಾಗುತ್ತಿರಲಾಗಿ, ಅನಂಗಕೇಳಿಯಲ್ಲಿ ಕಿತ್ತುಹೋದ ದಾರಗಳ ದೆಸೆಯಿಂದ ಮುತ್ತುಗಳು ಚೆಲ್ಲಿಹೋದ ಹಾಗೆ, ನೋಡುತಾ ಇರುವವರ ಮುಂದುಗಡೆಯಲ್ಲಿಯೇ ಆ ಐಶ್ವರ್ಯವವ್ರಾ ದಿಕ್ಕುಗಳನ್ನು ಕುರಿತು ಹೊರಟು ಹೋಗುತ್ತದೆ. ॥೯೫॥

ಶ್ಲೋ॥ ಗುಣವದಗುಣವದ್ವಾಕುರ್ವತಾಕಾರ್ಯಜಾತಂಪರಿಣಾ

ತಿರವಧಾರ್ಯಾ ಯತ್ನತಃ ಪಂಡಿತೇನ ॥ ಅತಿರಭಸಕೃತಾನಾಂ ಕರ್ಮಣಾಮಾವಿಪತ್ತೇರ್ಭವತಿ ಹೃದಯದಾಹೀ ಶಲ್ಯತುಲ್ಯೋ ವಿಪಾಕಃ ॥ ೯೬ ॥

ಟೀಕು॥ ಗುಣವದ್ವಾ- ಗುಣವುಳ್ಳದ್ದಾಗಲಿ, ಅಗುಣವದ್ವಾ- ಗುಣವಿಲ್ಲದ್ದೇ ಆಗಲಿ, ಕಾರ್ಯಜಾತಂ-ಕಾರ್ಯ - ಕರ್ಮದ, ಜಾತಂ - ಸಮೂಹವನ್ನು, ಯತ್ನತಃ - ಪ್ರಯತ್ನದ ದೆಸೆಯಿಂದ. ಕುರ್ವತಾ- ಮಾಡುತ್ತಾ ಇರುವಂಥ, ಪಂಡಿತೇನ ವಿದ್ವಾಂಸನಿಂದ, ಪರಿಣತಿಃ-ಪರಿಪಾಕವು, ಅವಧಾರ್ಯಾ ಯೋಚಿಸಲ್ಪಡತಕ್ಕದ್ದು, ಅತಿರಭಸಕೃತಾನಾಂ-ಅತಿ- ಅತ್ಯಂತವಾಗಿ, ರಭಸ ವೇಗದಿಂದ, ಕೃತಾನಾಂ-ಮಾಡಲ್ಪಟ್ಟಂಥ, ಕರ್ಮಣಾಂ ವ್ಯಾಪಾರಗಳ, ಆವಿಪತ್ತೇಃ-ಫಲಪರಿಯವಸಾನದವರಿಗೂ, ವಿಪಾಕಃ- ಕರ್ಮಸಮಾಪ್ತಿ ಫಲವು, ಹೃದಯ-ಮನಸ್ಸನ್ನು, ದಾಹೀ - ಸುಡುತ್ತಿರುವ, ಶಲ್ಯತುಲ್ಯಃ - ಶಲ್ಯ - ಶಂಕುವಿಗೆ, ತುಲ್ಯಃ ಸಮಾನವಾದದ್ದು, ಭವತಿ-ಆಗುತ್ತೆ. ॥೯೬॥

ತಾತ್ಪರ್ಯ—ಈ ಶ್ಲೋಕದಲ್ಲಿ ಮಂತ್ರಾಲೋಚನೆ ಮಾಡಿ ಕಾರ್ಯವನ್ನು ಮಾಡಬೇಕೆಂಬುವದನ್ನು ಕುರಿತು ಹೇಳುತ್ತಾನೆ. ಪಂಡಿತನಾದವನು ಗುಣವುಳ್ಳ ಕಾರ್ಯವನ್ನೇ ಆಗಲಿ, ಗುಣವಿಲ್ಲದ ಕೆಲಸವನ್ನೇ ಆಗಲಿ ಮಾಡತಕ್ಕ ಕಾರ್ಯದ ಪರಿಣಾಮದವರಿಗೂ ಬರುವ ವಿಘ್ನಗಳನ್ನು ಯೋಚಿಸಿ, ಅದಕ್ಕೆ ಪರಿಹಾರವನ್ನು ಕೂಡ ಯೋಚನೆ ಮಾಡುತ್ತಾನೆ. ಇವನ ಕಾರ್ಯಗಳು ನಿರ್ವಿಘ್ನವಾಗಿ ಆಗುತ್ತವೆ. ಇವುಗಳನ್ನು ಅಂದರೆ ಗುಣದೋಷಗಳನ್ನು ಯೋಚಿಸದೆ ಮಾಡದ ಕರ್ಮಗಳು ಅಂದರೆ ಮಂತ್ರಾಲೋಚನೆ ಇಲ್ಲದ ಕಾರ್ಯಗಳು ಪೂರ್ತಿಯಾಗುವವರೆಗೂ, ಮನಸ್ಸಿನಲ್ಲಿ ಕಳವಳವನ್ನು ಉಂಟುಮಾಡಿಕೊಂಡು ಇರುವಂತೆ ಯೋಚನೆಯಾಗಿರುತ್ತೆ ಅಂದರೆ ಕಾರ್ಯ ನೆರವೇರುತ್ತೊ ಇಲ್ಲವೋ ಎಂಬ ಕೊರತೆಯಲ್ಲಿ ಇರುತ್ತೆಂದು ತಾತ್ಪರ್ಯವು.

ಶ್ಲೋ॥ ಸ್ಥಾಲ್ಯಾಂ ವೈಡೂರ್ಯಮಯ್ಯಾಂ ಪಚತಿ ತಿಲಖಲಂ ಚಾಂದನೈರಿಂಧನಾದ್ಯೈಸ್ಸೌವರ್ಣೈರ್ಲಾಂಗಲಾಗ್ರೈರ್ವಿಲಿಖತಿ ವಸುಧಾಮರ್ಕತೂಲಸ್ಯ ಹೇತೋಃ ॥ ಛಿತ್ವಾ ಕರ್ಪೂರಖಂಡಾನ್ವೃತಿಮಿಹ ಕುರುತೇ ಕೋದ್ರವಾಣಾಂ

ಸ ಮಂತ್ರಾ ಪ್ರಾಪ್ಯೇ ಮಾಂ ಕರ್ಮಭೂಮಿಂ ನ ಭಜತಿ
ಮನುಜೋ ಯಸ್ತಪೋ ಮಂದಭಾಗ್ಯಃ ॥ ೯೭ ॥

ಟೀಕು॥ ವೈಡೂರ್ಯಮಯ್ಯಾಂ-ವೈಡೂರ್ಯ-ಮಣಿವಿಕಾರವಾದ, ಸ್ಥಾಲ್ಯಾಂ- ಪಾತ್ರೆಯಲ್ಲಿ, ಚಾಂದನೈಃ- ಚಂದನವೃಕ್ಷಸಂಬಂಧವಾದ, ಇಂಧನೌಘೈಃ-ಇಂಧನ-ಕಾಷ್ಠಗಳ, ಓಘೈಃ-ಸಮೂಹಗಳಿಂದ, ತಿಲಖಲಂ-ತಿಲಪಿಷ್ಟವನ್ನು, ಲಾಂಗಲಾಗ್ರೈಃ ಲಾಂಗಲ ನೇಗಲಿನ, ಅಗ್ರೈಃ ಕೊನೆಗಳಿಂದ, ಅರ್ಕತೂಲಸ್ಯ-ಅರ್ಕ ಎಕ್ಕದ, ತೂಲಸ್ಯ-ಹತ್ತಿಯ, ಹೇತೋಃ-ಕಾರಣವಾದ ಪಸೆಯಿಂದ, ವಸುಧಾಂ-ಭೂಮಿಯನ್ನು ವಿಲಿಖತಿ- ಉಳುತ್ತಾನೆ. ಕರ್ಪೂರಖಂಡಾನ್-ಕರ್ಪೂರ-ಕರ್ಪೂರಬಾಳೆಗಿಡದ, ಖಂಡಾನ್- ತುಂಡುಗಳ, (ಕಾಂಡಗಳನ್ನು) ಛಿತ್ವಾ-ಛೇದಿಸಿ, ಸಮಂತಾತ್ ಎಲ್ಲಾ ಕಡೆಯಲ್ಲೂ, ಕೋದ್ರವಾಣಾಂ-ಹಾರಕ ಧಾನ್ಯಗಳ, ವೃತಿಂ - ಕ್ಷೇತ್ರದಪಾತ್ರೆಯನ್ನು, (ಪಾದಿ) ಕುರುತೇ- ಮಾಡುತ್ತಾನೆ ಇಹ-ಈಗ, ಇಮಾಂ-ಈ, ಕರ್ಮಭೂಮಿಂ-ಕರ್ಮಹೇತುವಾದಂಥ ಭೂಮಿಯನ್ನು, ಪ್ರಾಪ್ಯ-ಹೊಂದಿ, ಮಂದಭಾಗ್ಯನಾನಂಥ, ಯಃ ಯಾವಮನುಷ್ಯನು, ತಪಃ-ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸನ್ನು, ನಭಜತಿ- ಮಾಡುವುದಿಲ್ಲವೋ, ಸಃ- ಆಮನುಷ್ಯನು. ಮಂದಭಾಗ್ಯಃ ಮೂಢನಾದಂಥವನು. ॥೯೭॥

ತಾತ್ಪರ್ಯ—ಸತ್ಕರ್ಮಾನುಷ್ಠಾನಕ್ಕೆ ಯೋಗ್ಯವಾದ ಮನುಷ್ಯನು ಶರೀರವು ಬಂದಾಗ, ಒಳ್ಳೇ ಕಾರ್ಯಗಳನ್ನು ಮಾಡಿ ಪುಣ್ಯ ಸಂಪಾದಿಸಿಕೊಳ್ಳುತ್ತಾನೆಂಬುವ ವಿಷಯವನ್ನು ಹೇಳುತ್ತಾನೆ.

ಯಾವನು ವೈಡೂರ್ಯ ರತ್ನದ ಪಾತ್ರೆಯಲ್ಲಿ, ಚಂದನದ ಸೌದೆಗಳಿಂದ, ಎಳ್ಳನ್ನು ಕುಟ್ಟಿದ ಪುಡಿಯನ್ನು ಬೇಯಿಸುವಷ್ಟರ ಮಟ್ಟಿಗೆ ಕುದಿಸುವನೋ, ಚಿನ್ನದ ನೇಗಿಲು ಕೊನೆಗಳಿಂದ ಎಕ್ಕದ ಗಿಡವನ್ನು ಹಾಕುವದಕ್ಕೆ ಭೂಮಿಯನ್ನು ಉಳುವನೋ, ಕರ್ಪೂರದ ಬಾಳೆ ಗಿಡಗಳನ್ನು ಕಡಿದು ಹಾರಕದ ಧಾನ್ಯ ಬಿತ್ತುವನೋ ಹಾಗೆ, ಸ್ವರ್ಗಾದಿ ಭೋಗಕ್ಕೂ ಮೋಕ್ಷಕ್ಕೂ ಸಾಧನವಾದ ಈ ಮನುಷ್ಯಶರೀರವನ್ನು ಹೊಂದಿ, ಯೋಗ್ಯವಾದಂಥಾ ಕರ್ಮಾನುಷ್ಠಾನಮಾಡಿ ಸದ್ಗತಿಯನ್ನು ಸಂಪಾದಿಸಿಕೊಳ್ಳುವ ರೀತ್ಯಾ ಮತ್ತು ಹಿಂದೆ ಹೇಳಿದಂತೆ ಮಾಡಬಾರದ ಅಕಾರ್ಯಗಳನ್ನು ಮಾಡಿ ಮೂಢನಾಗಿ ಹೋಗುತ್ತಾನೆ. ಆದ್ದರಿಂದ ಮನುಷ್ಯನು ತನಗೆ ಆಗುವ ಹಿತಾ

ಹಿತಗಳನ್ನು ಯೋಚಿಸಿಕೊಂಡು ಸರ್ವ ಪ್ರಯತ್ನದಿಂದಲೂ, ಒಳ್ಳೇ ಕಾರ್ಯಗಳನ್ನು ಮಾಡಿ ಸುಖಿಯಾಗಬೇಕೆಂಬ ಭಾವವು. ||೯೭||

ಶ್ಲೋ|| ನೈವಾಕೃತಿಃಫಲತಿನೈವಕುಲಂ ನಶೀಲಂವಿದ್ಯಾಪಿನೈವ
ನಚಯತ್ನಕೃತಾಪಿಸೇವಾ || ಭಾಗ್ಯಾನಿಪೂರ್ವತಪ
ಸಾಖಲುಸಂಚಿತಾನಿಕಾಲೇಫಲಂತಿಪುರುಷಸ್ಯಯಥೈವ
ವೃಕ್ಷಾಃ ||೯೮||

ಟೀಕ|| ಆಕೃತಿಃ-ಆಕಾರವು, ಪುರುಷಸ್ಯ-ಮನುಷ್ಯನಿಗೆ, ನೈವಫಲತಿ-ಪ್ರಯೋಜನವಾಗುವುದಿಲ್ಲ. ಕುಲಂ-ವಂಶವು, ನೈವಫಲತಿ ಫಲಿಸುವಂಥಾದ್ದಾಗುವುದಿಲ್ಲ. ಶೀಲಂ- ಒಳ್ಳೆ ಸ್ವಭಾವವು, ನೈವಫಲತಿ- ಫಲಿಸುವಂಥಾದ್ದಾಗುವುದಿಲ್ಲ, ವಿದ್ಯಾಪಿ ವಿದ್ಯೆಯೂಕೂಡ, ನೈವಫಲತಿ- ಫಲವಾಗುವುದಿಲ್ಲ. ಯತ್ನಕೃತಾಪಿ-ಯತ್ನ-ಪ್ರಯತ್ನದಿಂದ, ಕೃತಾಪಿ- ಮಾಡಲ್ಪಟ್ಟ, ಸೇವಾಪಿ- ಪರರಸೇವೆಯೂಕೂಡ, ನೈವಫಲತಿ- ಫಲವಾಗುವುದಿಲ್ಲ, ಕಿಂತು- ಮತ್ತೇನೆಂದರೋ, ಪೂರ್ವತಪಸಾ- ಪೂರ್ವ- ಹಿಂದಿನಜನ್ಮದಲ್ಲಿ, ತಪಸಾ ತಪಸ್ಸಿನಿಂದ, ಸಂಚಿತಾನಿ-ಸಂಪಾದಿಸಲ್ಪಟ್ಟ, ಭಾಗ್ಯಾನಿ ಪುಣ್ಯಭಾಗ್ಯಗಳು, ವೃಕ್ಷಾಃ-ವೃಕ್ಷಗಳು, ಯಥಾ ಹೇಗೆ, ಕಾಲವಸಂತಕಾಲದಲ್ಲಿ, ಫಲಂತಿ-ಫಲಿಸುತ್ತವೆಯೋ, ತಥಾ-ಹಾಗೆ, ಫಲಂತಿಖಲು-ಫಲಿಸುತ್ತವೆಯಷ್ಟೆ. ||೯೮||

ತಾತ್ಪರ್ಯ — ಲೋಕದಲ್ಲಿ, ಕರ್ಮವೇ ದೊಡ್ಡದೆಂಬುವದನ್ನು ಹೇಳುತ್ತಾನೆ. ಹೇಗಂದರೆ — ಮನುಷ್ಯನು ಸುಂದರನಾಗಿ ಇದ್ದ ಮಾತ್ರದಿಂದಲೆ ಐಶ್ವರ್ಯವನ್ನು ಕೊಡುವುದಿಲ್ಲ. ಒಳ್ಳೆ ವಂಶದಲ್ಲಿ ಹುಟ್ಟಿದಮಾತ್ರದಿಂದಲೇ ಐಶ್ವರ್ಯವು ಬರುವದಿಲ್ಲ. ಒಳ್ಳೆ ಸ್ವಭಾವದಲ್ಲಿ ಇದ್ದರೂ, ಕೇವಲ ಪ್ರಯತ್ನದಿಂದ ಪರಸೇವೆಯನ್ನು ಮಾಡಿದರೂ ಐಶ್ವರ್ಯವು ಬರುವುದಿಲ್ಲ. ಮನುಷ್ಯನಿಗೆ ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತ ದುಷ್ಕೃತ ಫಲಗಳು ಈ ಜನ್ಮದಲ್ಲಿ ಉಂಟಾಗುತ್ತವೆ. ಮರ ಹಾಕಿದವನಿಗೆ ಮಾಗಿಕೆ ಫಲಗಳು ಹೇಗೆ ಉಂಟಾಗುತ್ತವೆಯೋ ಹಾಗೆಯೇ ಭಾಗ್ಯವೂ ಸಹ ಬರುತ್ತದೆ. ಅದು ಬರುವಾಗ ಮನುಷ್ಯನ ಆಕಾರ ಮತ್ತು ವಂಶ ಇವನ ಒಳ್ಳೆ ವೃತ್ತಿ ಇವುಗಳನ್ನು ನೋಡಿ ಬರುವದಿಲ್ಲ. ಯೋಗ್ಯಕಾರಿಯಾದ, ದೇವತಾರಾಧನೆ, ಕೃಛ್ರ ಚಾಂದ್ರಾಯಣಾದಿ ತಪಸ್ಸು ಮಾಡಿದರೆ ಅದರ ಫಲವು ಆಚೆ

ಜನ್ಮದಲ್ಲಿ ಫಲವಾಗುತ್ತದೆ. ಆದ್ದರಿಂದ ಮನುಷ್ಯನು, ಯಾವಾಗಲೂ, ಒಳ್ಳೆ ಕೆಲಸಗಳನ್ನೇ ಮಾಡಬೇಕೆಂದು ತಾತ್ಪರ್ಯವು. ||೯೮||

ಶ್ಲೋ|| ಮಜ್ಜತ್ವಂಭಸಿಯಾತುಮೇರುಶಿಖರಂಶತ್ರೂನ್ಜಯ
ತ್ವಾಹವೇವಾಣಿಜ್ಯಂಕೃಷಿಸೇವನಾದಿಸಕಲಾವಿದ್ಯಾಃ
ಕಲಾಃಶಿಕ್ಷತು||ಆಕಾಶಂವಿಪುಲಂಪ್ರಯಾತುಖಗವತ್ಕೃ
ತ್ವಾಪ್ರಯತ್ನಂಪರಂನಾಭಾವ್ಯಂಭವತೀಹಕರ್ಮವ
ಶತೋಭಾವ್ಯಸ್ಯನಾಶಃಕುತಃ ||೯೯||

ಟೀಕು|| ಅಂಭಸಿ-ನೀರಿನಲ್ಲಿ, ಮಜ್ಜತು-ಮುಣುಗಲಿ, ಮೇರುಶಿಖರಂ-ಮೇರು-ಮೇರುಪರ್ವತದ, ಶಿಖರಂ-ಶೃಂಗವನ್ನು, (ಕೊನೆಯನ್ನು) ಯಾತು-ಹೋಗಲಿ, ಆಹವೇ - ಯುದ್ಧದಲ್ಲಿ, ಶತ್ರೂನ್ - ಶತ್ರುಗಳನ್ನು, ಜಯತು-ಜಯಿಸಲಿ, ವಾಣಿಜ್ಯಂ - ವ್ಯಾಪಾರವನ್ನು, ಕರೋತು - ಮಾಡಲಿ, ಕೃಷಿಸೇವನಾದಿಸಕಲಾಃ- ಕೃಷಿ- ಕರ್ಷಕವು, ಸೇವನ - ಸೇವಾಕರ್ಮವೇ, ಆದಿ-ಮೊದಲಾಗಿವುಳ್ಳಂಥಾ, ಸಕಲಾಃ- ಸಮಸ್ತಗಳಾದಂಥ, ವಿದ್ಯಾಃ- ಚತುರ್ದಶವಿದ್ಯೆಗಳನ್ನು, ಕಲಾಃ ಚತುಷ್ಷಷ್ಟಿಕಲೆಗಳನ್ನು, ಶಿಕ್ಷತು-ಹೊಂದಿರಲಿ, ಪರಂ-ಅಧಿಕವಾದ, ಪ್ರಯತ್ನಂ- ವ್ಯವಸಾಯವನ್ನು, ಕೃತ್ವಾ- ಮಾಡಿ, ಖಗವತ್-ಪಕ್ಷಿಯೋಪಾದಿಯಲ್ಲಿ, ವಿಪುಲಂ-ವಿಸ್ತಾರವಾದ, ಆಕಾಶಂ- ಅಂತರಿಕ್ಷವನ್ನು ಕುರಿತು, ಪ್ರಯಾತು-ಸಂಚಾರಮಾಡಲಿ (ಅಥವಾ) ಕರ್ಮವಶತಃ-ಕರ್ಮ-ಸುಕರ್ಮ ದುಷ್ಕರ್ಮಗಳ, ವಶತಃ- ಸ್ವಾಧೀನದ ದೆಸೆಯಿಂದ, ಅಭಾವ್ಯಂ-ಆಗದೆ ಇರತಕ್ಕಂಥಾದ್ದು, ನಭವತಿ- ಆಗುವುದಿಲ್ಲ, ಭಾವ್ಯಸ್ಯ- ಆಗತಕ್ಕದ್ದಕ್ಕೆ, ನಾಶಃ-ನಾಶವು, ಕುತಃ-ಎಲ್ಲಿಯದು. ||೯೯||

ತಾತ್ಪರ್ಯ—ಮನುಷ್ಯನನ್ನು ಕರ್ಮಫಲವು ಬಿಡುವುದಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ—ಮನುಷ್ಯನು ನೀರಿನಲ್ಲಿ ಮುಳುಗಿ ಅನೇಕ ಕಾಲವಿದ್ದಾಗ್ಯೂ, ಮೇರುಪರ್ವತದ ಶಿಖರದ ಮೇಲೆ ಕೂತುಕೊಂಡಿದ್ದಾಗ್ಯೂ, ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದಾಗ್ಯೂ, ಶಿಕ್ಷಾವ್ಯಾಕರಣವೇ ಮೊದಲಾದ ಅನೇಕ ವಿದ್ಯೆಗಳನ್ನು ತಿಳಿದುಕೊಂಡಿದ್ದಾಗ್ಯೂ, ಪಕ್ಷಿಯೋಪಾದಿಯಲ್ಲಿ ಆಕಾಶದಲ್ಲಿ ಹಾರಿ ಸಂಚಾರಮಾಡಿದ್ದಾಗ್ಯೂ ಆ ಮನುಷ್ಯನಿಗೆ ಏನುಫಲವಾಗುವುದೋ ಅದೇ ಫಲವೇ ಆಗುವುದು. ಪೂರ್ವಕ

ರ್ಮದದೆಸೆಯಿಂದ, ಆಗದೆ ಇರತಕ್ಕದ್ದು ಆಗುವುದಿಲ್ಲ. ಆಗತಕ್ಕದ್ದಕ್ಕೆ ನಾಶವು ಬರುವದಿಲ್ಲ. ಪೂರ್ವಕರ್ಮಾನುಸಾರ ಫಲವಾಗುತ್ತದೆ. ಆದ ನ್ನರಿತು ಈಗ ಒಳ್ಳೆ ಕರ್ಮಗಳನ್ನು ಮಾಡಿ, ಮುಂದಕ್ಕೆ ಬೆಳೆಯಾಗಿಟ್ಟು ಕೊಳ್ಳಬೇಕೆಂದು ತಾತ್ಪರ್ಯವು. ||೯೯||

ಶ್ಲೋ|| ವನೇರಣೇಶತ್ರುಜಲಾಗ್ನಿಮಧ್ಯೇ ಮಹಾರ್ಣವೇಪರ್ವತಮಸ್ತಕೇವಾ । ಸುಪ್ತಂಪ್ರಮತ್ತಂವಿಷಮಸ್ಥಿತಂ ವಾರಕ್ಷಂತಿಪುಣ್ಯಾನಿಪುರಾಕೃತಾನಿ ||೧೦೦||

ಟೀಕು|| ವನೇ ಅಡವಿಯಲ್ಲಿ, ರಣೇ-ಯುದ್ಧದಲ್ಲಿ, ಶತ್ರುಜಲಾಗ್ನಿಮಧ್ಯೇ-ಶತ್ರು-ದ್ವೇಷಿಯು, ಜಲ-ನೀರು, ಅಗ್ನಿ-ಬೆಂಕಿಯು, ಇವುಗಳ ಮಧ್ಯದಲ್ಲಿ, ಮಹಾರ್ಣವೇ-ಸಮುದ್ರದಲ್ಲಿ, ಪರ್ವತಮಸ್ತಕೇವಾ-ಪರ್ವತ ಬೆಟ್ಟದ, ಮಸ್ತಕೆ.ವಾ ತಲೆಯುಮೇಲೆವಾಗಲಿ, ಸುಪ್ತಂ-ಮಲಗಿರುವಂಥ, ಪ್ರಮತ್ತಂ-ಹುಚ್ಚನಾದಂಥ, ವಿಷಮಸ್ಥಿತಂವಾ, ವಿಷಮ-ವ್ಯತ್ಯಾಸವಾಗಿ, ಸ್ಥಿತಂವಾ-ಇರುವಂಥಾವನಾದರೂ, ನರಂ-ಮನುಷ್ಯನನ್ನು, ಪುರಾಕೃತಾನಿ-ಪುರಾ-ಪೂರ್ವಜನ್ಮದಲ್ಲಿ, ಕೃತಾನಿ ಮಾಡಲ್ಪಟ್ಟ, ಪುಣ್ಯಾನಿ-ಪುಣ್ಯಗಳು, ರಕ್ಷಂತಿ-ರಕ್ಷಿಸುತ್ತವೆ. ||೧೦೦||

ತಾತ್ಪರ್ಯ— ಪ್ರಾಕ್ತನವಾದ ಕರ್ಮ ಫಲವು ಮನುಷ್ಯನಿಗೆ ಭೋಗಾನುಕೂಲಗಳಾಗುತ್ತವೆ ಎಂಬುವದನ್ನು ಹೇಳುತ್ತಾನೆ ಪೂರ್ವಜನ್ಮಕೃತವಾದ ಪುಣ್ಯವು ಅರಣ್ಯದಲ್ಲಿರುವ ಮನುಷ್ಯನನ್ನಾಗಲಿ, ಪಟ್ಟಣದಲ್ಲಿರುವ ಮನುಷ್ಯನನ್ನಾಗಲಿ, ಶತ್ರುಗಳ ಮಧ್ಯದಲ್ಲಿ ಜಲಮಧ್ಯದಲ್ಲಿ ಕರ್ವತಾಗ್ರದಲ್ಲಿ, ಅಗ್ನಿಮಧ್ಯದಲ್ಲಿ ಸಮುದ್ರದಲ್ಲಿ ಇರಲಿ ಪೂರ್ವಪುಣ್ಯವು ಮನುಷ್ಯನನ್ನು ಬಿಡದೆ ಪೋಷಿಸುತ್ತದೆ. ಹಿಂದೆಮಾಡಿದ್ದ ಶುಭಾಶುಭಕರ್ಮಫಲಗಳು ಹುಚ್ಚನನ್ನಾಗಲಿ ಜಾಣಮನುಷ್ಯನನ್ನಾಗಲಿ ದುರ್ವ್ಯಕ್ತಿಯಲ್ಲಿರುವಂಥಾವನನ್ನಾಗಲಿ ಬಿಡದೆ ಪೋಷಿಸುತ್ತದೆಯೆಂದು ತಾತ್ಪರ್ಯವು ||೧೦೦||

ಶ್ಲೋ|| ಭೀಮಂವನಂಭವತಿತಸ್ಯಪುರಂಪ್ರಧಾನಂಸರ್ವೋಜನಸ್ಸುಜನತಾಮುಪಯಾತಿತಸ್ಯ ॥ ಕೃತ್ಸ್ನಾಚಭೂರ್ಭವತಿಸನ್ನಿಧಿರತ್ನಪೂರ್ಣಾಯಸ್ಯಾಸ್ತಿಪೂರ್ವಸುಕೃತಂವಿಪುಲಂನರಸ್ಯ || ೧೦೧ ||

ಟೀಕು ॥ ಯಸ್ಯ - ಯಾವಪುರುಷನಿಗೆ, ಭೀಮಂ - ಹಿಂಸ್ರಾದಿಗಳಿಂದ ಭಯಂಕರವಾದಂಥ, ವನಂ - ಅರಣ್ಯವು, ಪ್ರಧಾನಂ - ಮುಖ್ಯವಾದಂಥ, ಪುರಂ- ಪಟ್ಟಣವು, ಭವತಿ-ಆಗುತ್ತೊ , ಯಸ್ಯ-ಯಾವಮನುಷ್ಯನಿಗೆ, ಸರ್ವೋ ಜನಃ-ಸಮಸ್ತಜನವೂ, ಸ್ವಜನತಾಂ-ಸ್ವಕೀಯಜನಭಾವವನ್ನು, ಉಪಯಾತಿ-ಹೊಂದುತ್ತಾನೋ, ಯಸ್ಯನರಸ್ಯ-ಯಾವಮನುಷ್ಯನಿಗೆ, ವಿಪುಲಂ-ಹೆಚ್ಚಾದ, ಪೂರ್ವ- ಸುಕೃತಂ- ಪೂರ್ವ- ಜನ್ಮಾಂತರದ, ಸುಕೃತದ- ಪುಣ್ಯವು, ಅಸ್ತಿ-ಇದೆಯೋ, ತಸ್ಯ-ಆ ಮನುಷ್ಯನಿಗೆ, ಕೃತ್ಸ್ನಾ-ಕಸ್ತುತರವಾದ. ಭೂಶ್ಚ-ಭೂಮಿಯೂ ಕೂಡ, ನನಿಧಿರತ್ನಪೂರ್ಣಾ-ಸನ್ನಿಧಿ-ಸಮೀಪಬೀನವಾದ ನಿಕ್ಷೇಪಗಳು ರತ್ನ- ರತ್ನಗಳು ಇವುಗಳಿಂದ, ಪೂರ್ಣಾ- ತುಂಬಿದಂಥಾದ್ದು, ಭವತಿ-ಆಗುತ್ತೆ. ॥೧೦೧॥

ತಾತ್ಪರ್ಯ—ಪೂರ್ವಜನ್ಮ ಸುಕೃತವು ಯಾರಿಗೆ ಹೆಚ್ಚಾಗಿರುತ್ತದೆಯೊ, ಅಂಥಾಮನುಷ್ಯನಿಗೆ, ಅರಣ್ಯವೇ ಪ್ರಧಾನಪಟ್ಟಣವಾದದ್ದಾಗಿಯೂ, ಸರ್ವಜನವೂ ಸ್ವಜನರಾಗಿಯೂ, ಚತುಸ್ಸಮುದ್ರದ ಮಧ್ಯೆ ಇರುವ ಭೂಮಿಯು ನಿಧಿರತ್ನಗಳಿಂದ ಸಂಪೂರ್ಣವಾದದ್ದಾಗಿಯೂ, ಆಗುತ್ತದೆ. ಹೀನಭಾಗ್ಯನಿಗೆ ಎಲ್ಲಿದ್ದಾಗ್ಯೂ ಅವನಿಗೆ ಅನುಕೂಲವಿಲ್ಲ (ಸುಖವಿಲ್ಲ) ವೆಂಬು ತಾತ್ಪರ್ಯವು. ॥೧೦೧॥

ಇತಿ ಶ್ರೀಭರ್ತೃಹರಿ ಸುಭಾಷಿತೇ ಮನೋರಂಜನೀ ಟೀಕಾ ಸಮೇತ

ನೀತಿಶತಕಂ ಸಂಪೂರ್ಣಂ.

---

ಶ್ರೀರಸ್ತು

ಶ್ರೀರಾಮಾಯನಮಃ.

## ಶೃಂಗಾರ ಶತಕ ಪ್ರಾರಂಭಃ.

ಶ್ಲೋ॥ ಶಂಭುಸ್ವಯಂಭುಹರಯೋ ಹರಿಣೇಕ್ಷಣಾನಾಂಯೇ
ನಾಕ್ರಿಯಂತಸತತಂಗೃಹಕುಂಭದಾಸಾಃ॥ ವಾಚಾಮ
ಗೋಚರಚರಿತ್ರವಿಚಿತ್ರಿತಾಯತಸ್ಮೈ ನಮೋಭಗವ
ತೇಮಕರಧ್ವಜಾಯ ॥೧॥

ಟೀಕು॥ ಶಂಭುಸ್ಸ್ವಯಂಭುಹರಯಃ-ಶಂಭು-ಈಶ್ವರನು, ಸ್ವಯಂಭು-ಬ್ರಹ್ಮನು, ಹರಯಃ-ವಿಷ್ಣುವು, ಯೇನ-ಯಾವ, ಮಕರಧ್ವಜೇನ-ಮನ್ಮಥನಿಂದ, ಹರಿಣೇಕ್ಷಣಾನಾಂ-ಹರಿಣ-ಜಿಂಕೆಯ, ಈಕ್ಷಣಾನಾಂ-ಕಣ್ಣುಗಳೋಪಾದಿಯಲ್ಲಿ ಕಣ್ಣುಗಳುಳ್ಳಂಥಾ ಸ್ತ್ರೀಯರುಗಳ ಅಂದರೆ— ಉಮಾ ವಾಣೀ ರಮಾ ಇವರುಗಳ, ಗೃಹಕುಂಭದಾಸಾಃ-ಗೃಹ ಮನೆಯಲ್ಲಿ, ಕುಂಭ ನೀರನ್ನು ಹೊರುವಂಥಾ, ದಾಸಾಃ-ಪರಿಚಾರಕರಾಗಿ, ಸತತಂ-ಯಾವಾಗಲು, ಆಕ್ರಿಯನ್ತ-ಮಾಡಲ್ಪಟ್ಟರೆ, ವಾಚಾಂ ವಾಕ್ಕುಗಳಿಗೆ, ಅಗೋಚರಚರಿತ್ರವಿಚಿತ್ರಿತಾಯ-ಅಗೋಚರ-ಅನಿರ್ವಾಚ್ಯವಾದಂಥ, ಚರಿತ್ರ-ಚರಿತ್ರೆಯಿಂದ, ವಿಚಿತ್ರಿತಾಯ-ವಿಚಿತ್ರನಾಗಿ ಮಾಡಲ್ಪಟ್ಟಂಥ, ಭಗವತೇ-ಪೂಜ್ಯನಾದ, ತಸ್ಮೈ-ಆ ಪೂರ್ವೋಕ್ತನಾದ, ಮಕರಧ್ವಜಾಯ ಮನ್ಮಥನಿಗೋಸ್ಕರ, ನಮಃ-ನಮಸ್ಕಾರವು ವಸಂತತಿಲಕಾವೃತ್ತ. ॥೧॥

ತಾತ್ಪರ್ಯ—ಇದು ಶೃಂಗಾರಶತಕವಾದದ್ದರಿಂದ ಶೃಂಗಾರಕ್ಕೆ ಅವಲಂಬನವಾದ ಸ್ತ್ರೀಪ್ರಶಂಸೆಯನ್ನು ಹೇಳುತ್ತಾನೆ. ಬ್ರಹ್ಮ, ವಿಷ್ಣು ಮಹೇಶ್ವರ ಈ ಮೂರುಜನಗಳೂ ಕಾಮಮೋಹಿತರಾಗಿ ಲಕ್ಷ್ಮೀ, ಸರಸ್ವತಿ, ಪಾರ್ವತಿ ಈ ಮೂರು ಜನಗಳಿಗೆ ದಾಸರಾಗಿ ಆಜ್ಞಾಧಾರಕರಾಗಿ ಯಾವ ಮನ್ಮಥನಿಂದ ಮಾಡಲ್ಪಟ್ಟರೋ ಅಂಥಾ ಮನ್ಮಥನಿಗೋಸ್ಕರ ನಮಸ್ಕಾರ ಮಾಡುತ್ತೇನೆ. ಅಂದರೆ ಯಾವ ಮನ್ಮಥನ ಕಾರ್ಯಗಳಾದರೋ ಬಾಯಿಂದ ಹೇಳುವದಕ್ಕೆ ಆಗದಂಥಾವುಗಳೋ ಅಂಥಾ ಚರಿತ್ರೆಯುಳ್ಳವನಾಗಿದಾನೊ ಅಂಥಾವನಿಗೆ ವಶರಾಗಿ ಬ್ರಹ್ಮಾದಿಗಳೂ ಕೂಡ ಸ್ತ್ರೀಯರುಗಳ ಮನೆಗಳಲ್ಲಿ ಪರಿಚಾರಕರಾಗಿ ಇದ್ದಾರೊ (ಅಂದರೆ ಸ್ತ್ರೀಯರು ಹೇಳಿದಹಾಗೆ ಕೇಳಿಕೊಂಡಿದ್ದಾರೆ. ಆದ್ದರಿಂದ ಸ್ತ್ರೀಯರುಗಳ ಸಾಮರ್ಥ್ಯವು ಬಹು ದೊಡ್ಡದೆಂದು ತಾತ್ಪರ್ಯವು) ॥೧॥

ಶ್ಲೋ॥ ಸ್ಮಿತೇನಭಾವೇನಚಲಜ್ಜಯಾಭಿಯಾ ಪರಾಙ್ಮುಖೈ
ರರ್ಧಕಟಾಕ್ಷವೀಕ್ಷಣೈಃ ॥ ವಚೋಭಿರೀರ್ಷ್ಯಾಕಲಹೇ
ನಲೀಲಯಾಸಮಸ್ತಭಾವೈಃಖಲುಬಂಧನಂಸ್ತ್ರಿಯಃ॥

ಟೀಕು॥ ಸ್ಮಿತೇನ-ಮಂದಹಾಸದಿಂದಲೂ, ಭಾವೇನ ಅಭಿಪ್ರಾಯದಿಂದಲೂ, ಲಜ್ಜಯಾ-ನಾಚಿಕೆಯಿಂದಲೂ, ಭಿಯಾ-ಭಯದಿಂದಲೂ, ಪರಾಙ್ಮುಖೈಃ-ಹಿಂದಿರುಗಿದಂಥಾ, ಅರ್ಧಕಟಾಕ್ಷವೀಕ್ಷಣೈಃ-ಅರ್ಧಕಟಾಕ್ಷ-ಕಡೆಗಣ್ಣುಗಳ,

ವೀಕ್ಷಿತೈಃ-ನೋಡೋಣದರಿಂದಲೂ, ವಚೋಭಿಃ- ವಾಕ್ಯಗಳಿಂದಲೂ, ಈರ್ಷ್ಯಾಕಲಹೇನ- ಈರ್ಷ್ಯಾ- ಕೋಪದಿಂದುಂಟಾದ, ಕಲಹೇನ- ವ್ಯಾಜ್ಯದಿಂದಲೂ, ಲೀಲಯಾ-ವಿಲಾಸದಿಂದಲೂ. ಸ್ತ್ರಿಯಃ- ಸ್ತ್ರೀಯರುಗಳು, ಸಮಸ್ತಭಾವೈಃ-ಎಲ್ಲಾಭಾವಗಳಿಂದಲೂ, ಬಂಧನಂಖಲು-ಬಂಧನವಾದಂಥಾವರಷ್ಟೆ ||೨||

ತಾತ್ಪರ್ಯ—ಶೃಂಗಾರಕ್ಕೆ ಪ್ರಥಮತಃ ಆಲಂಬನವಾದ್ದರಿಂದ ಸ್ತ್ರೀಪ್ರಶಂಸೆಯನ್ನೇ ಮೊದಲು ಹೇಳುತ್ತಾನೆ. ಅದು ಹೇಗೆಂದರೆ—ಶೃಂಗಾರ ರಸೋತ್ಪತ್ತಿಗೆ ಆಲಂಬನ ವಿಭಾವವೆಂತಲೂ, ಉದ್ದೀಪನ ವಿಭಾವವೆಂತಲೂ, ಎರಡುವಿಧವುಂಟು. ಅದರಲ್ಲಿ ಆಲಂಬನವು ಸ್ತ್ರೀಯಾದ್ದರಿಂದ ಸ್ತ್ರೀಪ್ರಶಂಸೆಯನ್ನೇ ಹೇಳುತ್ತಾರೆ. ಸ್ತ್ರೀಯರುಗಳು ಮುಗುಳು ನಗೆಯನ್ನು ಮಾಡೋಣದರಿಂದಲೂ, ಭಾವ ಗರ್ಭವಾಗಿ ಮಾತಾಡುವದರಿಂದಲೂ ನಾಚಿಕೆ ಪಡೋಣದರಿಂದಲೂ, ಭಯವನ್ನು ತೋರಿಸೋಣದರಿಂದಲೂ ಕಡೆಗಣ್ಣ ನೋಟದಿಂದಲೂ ವಿಲಾಸಾರ್ಥವಾಗಿ ತಮ್ಮ ಅಸೂಯೆಯನ್ನು ತೋರಿಸೋಣದರಿಂದ ವಿನೋದಾರ್ಥವಾದ ಕಲಹಗಳಿಂದಲೂ ಅಂದರೆ ಈ ರೀತಿಯಾಗಿ ಮೇಲೆ ಹೇಳಲ್ಪಟ್ಟ ಎಲ್ಲಾ ಭಾವಗಳಿಂದಲೂ ಸ್ತ್ರೀಯರುಗಳು ಪುರುಷರನ್ನು ಬಂಧನೆ ಮಾಡತಕ್ಕವರಾಗಿದ್ದಾರೆ. ಈ ವಿಲಾಸಗಳೆಲ್ಲಾ ಪುರುಷನ ಮನಸ್ಸನ್ನು ಆಕರ್ಷಣೆ ಮಾಡುತ್ತದೆಂದು ಭಾವವು. ಈ ಶೃಂಗಾರಾದಿ ಚೇಷ್ಟೆಗಳನ್ನು ಹೇಳುವದರಿಂದ ಮಧ್ಯನಾಯಿಕೆಯೆಂತಲೂ, ಕಲಹಾಂತರಿತಾ, ಮುಗ್ಧಾ, ಮಧ್ಯಾ, ಪ್ರಗಲ್ಭಾ, ಪ್ರೌಢಾ, ಖಂಡಿತಾ, ಕುಪಿತಾ, ಕಲಹಾಂತರಿತಾ, ಪ್ರವಾಸಪತಿಕಾ, ವಿರಹೋತ್ಕಂಠಿತಾ, ವಾಸವಸಜ್ಜಿಕಾ, ಈ ರೀತಿಯಾಗಿ ದಶವಿಧ ನಾಯಿಕಿಯರುಂಟು. ಇವರ ಲಕ್ಷಣಗಳು ಪ್ರತಾಪ ರುದ್ರೀಯದಲ್ಲಿ ಹೇಳಲ್ಪಟ್ಟಿದೆ. ||೨||

ಶ್ಲೋ|| ಭ್ರೂಚಾತುರ್ಯಾತ್ಕುಂಚಿತಾಕ್ಷಾಃಕಟಾಕ್ಷಾಃಸ್ನಿಗ್ಧಾ
ವಾಚೋಲಜ್ಜಿತಾಂತಾಶ್ಚ ಹಾಸಾಃ || ಲೀಲಾಮಂದಂ
ಪ್ರಸ್ಥಿತಂಚಸ್ಥಿತಂಚಸ್ತ್ರೀಣಾಮೇತದ್ಭೂಷಣಂ
ಚಾಯುಧಂಚ || ೩ ||

ಟೀಕು | ಭ್ರೂಚಾತುರ್ಯಾತ್- ಭ್ರೂ- ಹುಬ್ಬಿನ, ಚಾತುರ್ಯಾತ್- ಚಮತ್ಕಾರದ ದಸೆಯಿಂದ, ಕುಂಚಿತಾಕ್ಷಾಃ- ಕುಂಚಿತ ಬಗ್ಗಿಸಲ್ಪಟ್ಟ, ಅಕ್ಷಾ-

ಕಣ್ಣುಗಳುಳ್ಳಂಥಾ, ಕಟಾಕ್ಷಾಃ - ಕಡೆಗಣ್ಣು ನೋಟಗಳುಳ್ಳಂಥಾ, ಸ್ನಿಗ್ಧಾಃ ಸ್ನೇಹಯುಕ್ತಗಳಾದ, ವಾಚಃ - ವಾಕ್ಕುಗಳು, ಲಜ್ಜಿತಾಂತಾಃ - ಲಜ್ಜಿತ ನಾಚಿಕೆಯೇ, ಅಂತಾಃ- ಕೊನೆಯಾಗಿವುಳ್ಳಂಥಾ, ಹಾಸಾಃ - ಶೃಂಗಾರವಿಲಾಸ ಗಳು, ಲೀಲಾಮಂದಂ-ಲೀಲಾ- ವಿಲಾಸದಿಂದ, ಮಂದಂ ಮೆಲ್ಲಗೆ, ಪ್ರಸ್ಥಿತಂ ಹೋಗೋಣವು, ಸ್ಥಿತಂಚ- ನಿಲ್ಲೋಣವು, ಏತತ್- ಈ ಪೂರ್ವೋಕ್ತಗಳಾ ದವುಗಳು, ಸ್ತ್ರೀಣಾಂ- ಸ್ತ್ರೀಯರುಗಳಿಗೆ, ಭೂಷಣಂ- ಅಲಂಕಾರವು, ಆಯು ಧಂಚ- ಆಯುಧಗಳೂ, ಭವಂತಿ- ಆಗುತ್ತವೆ. ॥ ೩ ॥

ತಾತ್ಪರ್ಯ—ಈ ಶ್ಲೋಕದಲ್ಲಿಯೂ, ಸ್ತ್ರೀಪ್ರಶಂಸೆಯನ್ನೇ ಹೇಳು ತ್ತಾನೆ. ವಿಭಾವ, ಅನುಭಾವ, ಸಾತ್ವಿಕಭಾವ, ವ್ಯಭಿಚಾರಿಭಾವಗಳಿಂದ ದಸ್ಥಿತವಾದ ಶೃಂಗಾರ ರಸಕ್ಕೆ ಮೂಲಭೂತವಾದ ಆಲಂಬನವಿಭಾವ ಸ್ತ್ರೀಯಾಗಿಯೂ, ಉದ್ದೀಪಕ ವಿಭಾವ. ಅಲಂಕಾರಾದಿಗಳೂ ಮತ್ತು ಶೃಂಗಾರಚೇಷ್ಟಾದಿಗಳು ಸ್ವಾಶ್ರಯೋದ್ದೀಪನ ಕ್ರಮಗಳೆಂತಲೂ ಮಲ, ಯಾನಿಲ ಚಂದ್ರಾದಿಗಳು ತಟಸ್ಥೋದ್ದೀಪನಗಳೆಂತಲೂ ರತಿರಹಸ್ಯ ಮುಂ ತಾದವುಗಳಲ್ಲಿ ಹೇಳಿ ಇರುವದರಿಂದ ಪ್ರಸಂಗಸಂಗತಿಯಾಗಿ ಶೃಂಗಾರರಸ ಕ್ಕೆ ಆಲಂಬನ ಸ್ತ್ರೀಸಂಬಂಧವಾದ ಉದ್ದೀಪನ ಸೂಚಕವಾದ ಶೃಂಗಾರ ಚೇಷ್ಟೆಗಳನ್ನೇ ಹೇಳುತಾನೆ. ಅದು ಹೇಗೆಂದರೆ—ಸ್ತ್ರೀಯರುಗಳು ಹುಬ್ಬುಗಳನ್ನು ಗಂಟು ಹಾಕಿಕೊಂಡು ಕಡೆಗಣ್ಣು ನೋಟಗಳಿಂದ ಕಾಮು ಕರನ್ನು ನೋಡೋಣವು, ಪ್ರೇಮಾದರದಿಂದ ಸ್ನೇಹಯುಕ್ತವಾದ ಮಾತು ಗಳನ್ನು ಆಡೋಣವು, ಲಜ್ಜಾಭಾವವನ್ನು ಸೂಚನೆ ಮಾಡೋಣವು, ವಿಶ್ವಾ ಸವನ್ನು ತೋರಿಸುತ್ತಲೆ ಮೆಲ್ಲಮೆಲ್ಲಗೆ ಮುಂದಕ್ಕೆ ಹೋಗೋಣವು, ಹಾಗೆ ಯೇ ಕೊಂಚಮಟ್ಟಿಗೆ ಪುನಃನಿಂತುಕೊಳ್ಳೋಣವು, ಈ ಮುಂತಾದ ಶೃಂ ಗಾರವಿಲಾಸಗಳು ಈ ಸ್ತ್ರೀಯರುಗಳಿಗೆ ಅಲಂಕಾರಪ್ರಾಯಗಳಾಗಿ ಇರು ವದು. ಮತ್ತು ಆಯುಧಪ್ರಾಯವಾ ಆಗಿ ಇರುವದು. ಅದು ಹೇಗೆಂದ ರೆ—ಕಾಮುಕರ ಮನಸ್ಸನ್ನು ಖಂಡನಮಾಡೋಣದರಿಂದ ಆಯುಧದಂತೆ ಆಚರಿಸುತ್ತದು. ॥೩॥

ಶ್ಲೋ॥ ಕ್ವಚಿತ್ಸಭ್ರೂಭಂಗೈಃಕ್ವಚಿದಪಿಚ ಲಜ್ಜಾಪರಿಗತೈಃ
ಕ್ವಚಿದ್ಭೂರಿತ್ರಸ್ತೈಃಕ್ವಚಿದಪಿಚಲೀಲಾವಿಲಸಿತೈಃ ॥

ಕುಮಾರೀಣಾಮೇತೈರ್ಮದನಸುಭಗೈರ್ನೇತ್ರವಳಿತೈಃ
ಸ್ಫುರನ್ನೀಲಾಬ್ಜಾನಾಂಪ್ರಕರಪರಿಕೀರ್ಣಾಇವದಿಶಃ ॥

ಟೀಕು ॥ ಕ್ವಚಿತ್ - ಕೆಲವು ವೇಳೆಯಲ್ಲಿ, ಸಭ್ರೂಭಂಗೈಃ - ಭ್ರುಕುಟೀ ಭಂಗವ್ಯಾಪಾರದಿಂದ ಕೂಡಿದ ಕಟಾಕ್ಷಗಳಿಂದಲೂ, ಕ್ವಚಿದಪಿಚ- ಕೆಲವುಕಾಲ ದಲ್ಲಿ, ಲಜ್ಜಾಪರಿಗತೈಃ ನಾಚಿಕೆಯಿಂದ ಕೂಡಿದಸ್ವಾನುಕೂಲ್ಯವ್ಯಾಪಾರಗಳಿಂ ದಲೂ, ಕ್ವಚಿತ್ - ಕೆಲವುಕಾಲದಲ್ಲಿ, ಭೂರಿತ್ರಸ್ತೈಃ ಭೂರಿ- ಅಧಿಕವಾಗಿ,ತ್ರ ಸ್ತ್ರ್ಯಭಯಸೂಚಕವಾದ ವ್ಯಾಪಾರದಿಂದಲೂ, ಕ್ವಚಿದಪಿಚ ಕೆಲವುಕಾಲದಲ್ಲಿ ಯೂಕೂಡ, ಲೀಲಾವಿಲಸಿತೈಃ - ಮನೋಹರಗಳಾದ ವ್ಯಾಪಾರಗಳಿಂದಲೂ, ಕುಮಾರೀಣಾಂ-ಯೌವನಸ್ತ್ರೀಯರುಗಳ, ಏತೈಃ-ಈ ಪೂರ್ವೋಕ್ತಗಳಾದ, ಮದನಸುಭಗೈಃ - ಮನ್ಮಥವಿಕಾರಗಳಾದ, ನೇತ್ರವಳಿತೈಃ- ನೇತ್ರ- ಕಣ್ಣು ಗಳ, ವಳಿತೈಃ- ವಿಲಾಸಗಳಿಂದ, ದಿಶಃ- ದಿಕ್ಕುಗಳು, ಸ್ಫುರನ್ನೀಲಾಬ್ಜಾನಾಂ- ಸ್ಫುರತ್- ಪ್ರಕಾಶಮಾನವಾದ, ನೀಲಾಬ್ಜಾನಾಂ-ನೀಲಕಮಲಗಳ, ಪ್ರಕರಪ ರಿಕೀರ್ಣಾಇವ- ಪ್ರಕರ- ಸಮೂಹಗಳಿಂದ, ಪರಿಕೀರ್ಣಾಇವ- ಕೂಡಿದಂಥಾ ವುಗಳೋಯೆಂಬುವಹಾಗೆ, ಸಂಲಕ್ಷ್ಯಂತೇ- ಕಾಣಲ್ಪಡುತ್ತ ಕ್ರಿಯಾಸ್ವ ರೂಪೋತ್ಪ್ರೇಕ್ಷಾಲಂಕಾರಃ. ನಾಯಿಕಾಪ್ರಥಾ. ॥ ೪ ॥

ತಾತ್ಪರ್ಯ—ಸ್ತ್ರೀ ಪ್ರಶಂಸೆಯನ್ನೇ ಈ ಶ್ಲೋಕದಲ್ಲೂ ಹೇಳು ತ್ತಾನೆ. ಸ್ತ್ರೀಯರುಗಳು ಕೆಲವು ಕಾಲದಲ್ಲಿ ಹುಬ್ಬುಗಳನ್ನು ಗಂಟು ಹಾಕಿಕೊಂಡು ಪ್ರಿಯಾನು ರಾಗಸೂಚಕವಾದ ಅಪಾಂಗವೀಕ್ಷಣಾ ವ್ಯಾ ಪಾರದಿಂದಲೂ, ಕೆಲವು ಕಾಲದಲ್ಲಿ ಲಜ್ಜಾಭಾವಸೂಚಕ ವ್ಯಾಪಾರದಿಂದ ಲೂ, ಕೆಲವುಕಾಲದಲ್ಲಿ ಅತಿಭಯವನ್ನು ತೋರಿಸುವದರಿಂದಲೂ ಕೆಲವು ಕಾ ಲದಲ್ಲಿ ಶೃಂಗಾರ ಭಾವಸೂಚಕವಾದ ನೇತ್ರಭಾವಗಳಿಂದಲೂ ಕನ್ನೈದಿಲೆ ಹೂವಿನ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ ಸ್ತ್ರೀಯರ ಕಟಾಕ್ಷ ಪ್ರ ಸರಣೆಯಿಂದ ದಿಕ್ಕುಗಳೆಲ್ಲಾ ಕರನೈದಿಲೆ ಹೂವುಗಳಿಂದ ತುಂಬಿದ ಹಾಗೆ ಕಾಣುತ್ತಲಿದ್ದವೆಂದು ಭಾವವು. ॥೪॥

ಶ್ಲೋ॥ ವಕ್ತ್ರಂಚಂದ್ರವಿಕಾಸಿಪಂಕಜಪರೀಹಾಸಕ್ಷಮೇಲೋ
ಚನೇವರ್ಣಸ್ಸ್ವರ್ಣಮಪಾಕರಿಷ್ಣುರಳಿನೀಜಿಷ್ಣುಃ
ಕಚಾನಾಂಚಯಃ ॥ ವಕ್ಷೋಜಾವಿಭಕುಂಭವಿಭ್ರಮ

ಹರ್ಗುರ್ವಿನೀನಿತಂಬಸ್ಥಲೀವಾಚಾಂಹಾರಿಚಮಾರ್ದ್ದ
ವಂಯುವತಿಷುಸ್ವಾಭಾವಿಕಂಮಂಡನಂ ॥ ೫ ॥

ಟೀಕಾ ॥ ಚಂದ್ರವಿಕಾಸಿ- ಚಂದ್ರ - ಚಂದ್ರನೋಪಾದಿಯಲ್ಲಿ, ವಿಕಾಸಿ- ಪ್ರಕಾಶವಾನವಾದಂಥ, ವಕ್ತ್ರಂ - ಮುಖವು, ಪಂಕಜಪರೀಹಾಸಕ್ಷಮೇ - ಪಂಕಜ- ಕಮಲಗಳನ್ನು, ಪರೀಹಾಸ- ತಿರಸ್ಕಾರವಾಡೋಣದರಲ್ಲಿ, ಕ್ಷಮೇ ಸಮರ್ಥಗಳಾದಂಥ, ಲೋಚನೇ- ನೇತ್ರಗಳು, ಸ್ವರ್ಣಂ- ಸುವರ್ಣವನ್ನು ಅಪಾಕರಿಷ್ಣುಃ - ತಿರಸ್ಕಾರವಾಡುತ್ತಿಲಿರುವ, ವರ್ಣಃ - ದೇಹಕಾಂತಿಯು ಅಳಿನೀಜಿಷ್ಣುಃ - ಅಳಿನೀ - ಭ್ರಮರ ಸ್ತ್ರೀಯನ್ನು, ಜಿಷ್ಣುಃ - ಜಯಿಸಿದ, ಕಚಾನಾಂ- ಕೇಶಗಳ, ಚಯಃ- ಸಮುದಾಯವು, ಇಭಕುಂಭವಿಭ್ರಮಹರಾ ಇಭ ಆನೆಯ, ಕುಂಭ - ಕುಂಭಸ್ಥಳಗಳ, ವಿಭ್ರಮ - ವಿಲಾಸವನ್ನು, ಹರಾ ಅಪಹರಿಸುತ್ತಲಿರುವಂಥಾ ಅಥವಾ ವಿಸ್ತಾರವಾದಂಥ, ನಿತಂಬಸ್ಥಲೀ ನಿತಂಬ ಕಟಿಪಶ್ಚಾದ್ಭಾಗದ, ಸ್ಥಲೀ- ಪ್ರದೇಶವು, ಹಾರಿಚ ಮನೋಹರ ವಾದ, ವಾಚಾಂ- ವಾಕ್ಯಗಳ, ಮಾರ್ದವಂ - ಮೃದುತ್ವವು, ಯುವತಿಷು- ಸ್ತ್ರೀಯರುಗಳಲ್ಲಿ, ಸ್ವಾಭಾವಿಕಂ- ಸ್ವಭಾವಸಿದ್ಧವಾದ, ಮಂಡನಂ - ಅಲಂ ಕಾರವು, ಭವತಿ - ಆಗುತ್ತದೆ. ಉಪಮಾಲಂಕಾರಃ, ನಾಯಕಾ ಉತ್ತಮಾ ಶಾರ್ದೂಲವಿಕ್ರೀಡಿತವೃತ್ತಂ ॥ ೫ ॥

ತಾತ್ಪರ್ಯ—ಆಲಂಬನಾದಿ ವಿಭಾವಾನುಭಾವಗಳಲ್ಲಿ ಆಲಂಬನ ವಿಭಾವವೆಂತಲೂ ಉದ್ದೀಪನ ವಿಭಾವವೆಂತಲೂ ಉಭಯ ವಿಧಗಳಲ್ಲಿ ಪ್ರಥಮೋದ್ದಿಷ್ಟವಾದ ಶೃಂಗಾರರಸಹೇತು ಭೂತವಾದ ಸ್ತ್ರೀಪ್ರಶಂಸೆಯನ್ನು ಹೇಳುವದರ ಮೂಲಕ ಸಾಮಿಾಪ್ಯೋದ್ದೀಪನ ಭೂತವಾದ ಸ್ತ್ರೀಯರುಗಳ ನೈಸರ್ಗಿಕಮಂಡನವನ್ನು ಹೇಳುತ್ತಾನೆ ಅದುಹೇಗೆಂದರೆ— ಚಂದ್ರನಂತೆ ಮುಖವಿಕಾಸವು ಮತ್ತು ಕಮಲಗಳನ್ನು ತಿರಸ್ಕಾರವಾಡುವ ನೇತ್ರಗಳು ಸುವರ್ಣಭಾಸ್ಯಯನ್ನು ಆಕರ್ಷಣ ಮಾಡುತ್ತಿರುವ ದೇಹಕಾಂತಿಯು ಭ್ರಮರಗಳ ವೈಬಣ್ಣವನ್ನು ಸೋಲಿಸುವ ಕೇಶಪಾಶವು ಆನೆಯ ಕುಂಭಸ್ಥಳದ ರಾಮಣೀಯಕವನ್ನು ಅಪಹರಿಸುತ್ತಲಿರುವ ಉರೋಜಗಳು, ವಿಸ್ತಾರವಾದ ಕಟಿಪಶ್ಚಾದ್ಭಾಗವು ಮನೋಹರವಾದ ವಾಚಾಮಾಧುರ್ಯವು ಇವೆಲ್ಲವೂ ಸ್ತ್ರೀಯರುಗಳಿಗೆ ಸ್ವಭಾವವಾದ ಅಲಂಕಾರವು ಎಂದು ತಾತ್ಪರ್ಯವು ಇದೆಲ್ಲವೂ ಉತ್ತಮನಾಯಕೀ ಲಕ್ಷಣವು. ॥೫॥

ಶ್ಲೋ|| ಸ್ಮಿತಂಕಿಂಚಿನ್ಮುಗ್ಧಂಸರಳತರಳೋದೃಷ್ಟಿವಿಭವಃಪರಿ
ಸ್ಪಂದೋವಾಚಾಮಭಿನವವಿಲಾಸೋಕ್ತಿಸರಸಃ || ಗ
ತಾನಾಮಾರಂಭಃಕಿಸಲಯಿತಲೀಲಾಪರಿಕರಸ್ಸ್ಪೃಶಂ
ತ್ಯಾಸ್ತಾರುಣ್ಯಂಕಿಮಿವನಹಿರಮ್ಯಂಮೃಗದೃಶಃ ||೬||

ಟೀಕು || ಸ್ಮಿತಂ ಮಂದಹಾಸವು, ಕಿಂಚಿತ್ - ಸ್ವಲ್ಪವಾಗಿ, ಮುಗ್ಧಂ- ಸುಂದರವಾದಂಥಾದ್ದು, ಭವತಿ ಆಗುತ್ತೆ, ದೃಷ್ಟಿವಿಭವಃ- ದೃಷ್ಟಿ ನೋಡೋಣದರ, ವಿಭವಃ-ವೈಭವವು, ಸರಳತರಳಃ-ಸರಳ-ಋಜುವಾಗಿ ತರಳಃ-ಚಂಚಲವಾದಂಥಾದ್ದು, ಭವತಿ-ಆಗುತ್ತದೆ, ವಾಚಾಂ- ವಾಕ್ಕುಗಳ, ಪರಿಸ್ಪಂದೋಪಿ-ಸಮ್ಬಂಧವೂಕೂಡ, ಅಭಿನವವಿಲಾಸೋಕ್ತಿ - ಅಭಿನವ- ನೂತನವಾದಂಥ, ವಿಲಾಸ- ಶೃಂಗಾರವಿಲಾಸದ, ಉಕ್ತಿ - ಹೇಳೋಣದರಿಂದ, ಸರಸಃ- ರಸಯುಕ್ತವಾದಂಥಾದ್ದು, ಗತಾನಾಂ- ಗತಿವಿಶೇಷಗಳ, ಆರಂಭಃ - ಪ್ರಾರಂಭವು, ಕಿಸಲಯಿತಲೀಲಾಪರಿಕರಃ- ಕಿಸಲಯಿತ-ಪಲ್ಲವಿತವಾಗಿ ಮಾಡಲ್ಪಟ್ಟಂಥ, ಲೀಲಾ-ವಿಲಾಸಗಳ ಪರಿಕರಃ-ಸಮುದಾಯವುಳ್ಳಂಥದು, ತಾರುಣ್ಯಂ- ಯೌವನವನ್ನು, ಸ್ಪೃಶಂತ್ಯಾಃ-ಹೊಂದುತ್ತಲಿರುವ, ಮೃಗದೃಶಃ ಸ್ತ್ರೀಯರಿಗೆ ರಮ್ಯಂ- ಮನೋಹರವಾದಂಥಾದ್ದು, ನಕಿಮಿವ- ಯೇನಲ್ಲ ? (ಶಿಖರಿಣೀವೃತ್ತಂ, ಸ್ವಭಾವೋಕ್ತ್ಯಲಂಕಾರಃ. ನಾಯಿಕಾಮುಗ್ಧಾ) ||೬||

ತಾತ್ಪರ್ಯ— ಈ ಶ್ಲೋಕದಲ್ಲೂ ಮುಗ್ಧಾನಾಯಿಕೆಯ ಲಕ್ಷಣವನ್ನು ಹೇಳುತ್ತಾನೆ. ನೂತನ ಯೌವನ ಪ್ರಾದುರ್ಭಾವವಾದ ಸ್ತ್ರೀಯ ಸುಂದರವಾದ ಮಂದಹಾಸವು ಚಂಚಲವಾದ ದೃಷ್ಟಿಪ್ರಸರಣೆಯು ಸರಸೋಕ್ತಿಗಳಾದ ವಾಗ್ವೈಖರಿಯು ಗಮನವೈಚಿತ್ರ್ಯವು ಈ ಮೊದಲಾದ ಶೃಂಗಾರ ರಸೋದ್ಬೋಧಕವಾದ ವಿಲಾಸಗಳು ಉದಯುದ್ಯೌವನಂಗಳಿರಸ ಕಾಂತಮಣಿಗೆ ಅಲಂಕಾರವಾದಂಥಾದ್ದಲ್ಲವೆ ಅಂದರೆ ಶೃಂಗಾರ ಪ್ರದರ್ಶಕ ಮಂದಸ್ಮಿತ ಪೂರ್ವಾಭಿಭಾಷಣಗಮನ ವೈಚಿತ್ರ್ಯಾದಿಗಳು ಸರಸೋಕ್ತಿ ಈ ಮೊದಲಾದದ್ದು ಯೌವನಸ್ತ್ರೀಯರುಗಳಿಗೆ ಅಲಂಕಾರ ಪ್ರಾಯವಾದದ್ದೆಂದು ಕವಿತಾತ್ಪರ್ಯವು. ಮುಗ್ಧಾನಾಯಿಕೆ ಮೊದಲಾದ ದಶವಿಧ ನಾಯಿಕೆಯರ ಪ್ರಭೇದ ಲಕ್ಷಣಗಳು ರತಿರಹಸ್ಯದಲ್ಲಿರುತ್ತೆ ||೬||

ಶ್ಲೋ|| ದ್ರಷ್ಟವ್ಯೇಷುಕಿಮುತ್ತಮಂಮೃಗದೃಶಃಪ್ರೇಮ
ಪ್ರಸನ್ನಂಮುಖಂಘ್ರಾತವ್ಯೇಷ್ವಪಿಕಿಂತದಾಸ್ಯಪವನಃ

ಶ್ರಾವ್ಯೇಷು ಕಿಂತದ್ವಚಃ ॥ ಕಿಂಸ್ವಾದ್ಯೇಷು ತದೋ
ಷ್ಠಪಲ್ಲವರಸಃಸ್ಪೃಶ್ಯೇಷುಕಿಂತದ್ವಪುರ್ಧ್ಯೇಯಂಕಿಂ
ನವಯೌವನಂಸಹೃದಯೈಸ್ಸರ್ವತ್ರತದ್ವಿಭ್ರಮಾಃ ॥

ಟೀಕು॥ ದೃಷ್ಟವ್ಯೇಷು ನೋಡುವುದಕ್ಕೆ ಯೋಗ್ಯವಾದ ವಸ್ತುಗಳಲ್ಲಿ, ಉತ್ತಮಂ-ಉತ್ತಮವಾದಂಥಾದ್ದು. ಕಿಂ ಯಾವದು ? ಮೃಗದೃಶಃ ಸ್ತ್ರೀಯು, ಪ್ರೇಮಪ್ರಸನ್ನಂ-ಪ್ರೇಮ ವಿಶ್ವಾಸದಿಂದ, ಪ್ರಸನ್ನಂ-ಮನೋಹರವಾದ, ಮುಖಂ-ಮುಖವು. ಘ್ರಾತವ್ಯೇಷ್ವಪಿ ಮೂಸಿನೋಡುವುದಕ್ಕೆ ಯೋಗ್ಯವಾದ ವಸ್ತುಗಳಲ್ಲಿಯೂ ಕೂಡ, ಉತ್ತಮಂ-ಉತ್ತಮವಾದಂಥಾದ್ದು, ಕಿಂ-ಯಾವುದು ? ತವಾದಸ್ಯ ಪವನಃ-ತತ್ ಆ ಸ್ತ್ರೀಯು, ಅಸ್ಯ ಮುಖದ, ಪವನಃ-ವಾಯುವು, ಶ್ರಾವ್ಯೇಷು-ಕೇಳತಕ್ಕವುಗಳಲ್ಲಿ, ಉತ್ತಮಂ ಉತ್ತಮವಾದಂಥಾದ್ದು ಕಿಂ-ಯಾವುದು ತದ್ವಚಃ - ತತ್ - ಆಸ್ತ್ರೀಯು ವಚಃ - ವಾಕ್ಯ (ಮಾತು), ಸ್ವಾದ್ಯೇಷು- ಆಸ್ವಾದನೆ ಮಾಡತಕ್ಕ ಪದಾರ್ಥಗಳಲ್ಲಿ, ಉತ್ತಮಂ - ಉತ್ತಮವಾದಂಥಾದ್ದು. ಕಿಂ - ಯಾವದು. ತದೋಷ್ಠಪಲ್ಲವರಸಃ-ತತ್-ಆಸ್ತ್ರೀಯು, ಓಷ್ಠಪಲ್ಲವ ಪಲ್ಲವಸದೃಶವಾದ ಓಷ್ಠಗಳ, ರಸಃ- ರಸವು, ಸ್ಪೃಶ್ಯೇಷು- ಸ್ಪರ್ಶಮಾಡುವದಕ್ಕೆ ಯೋಗ್ಯವಾದ ಪದಾರ್ಥಗಳಲ್ಲಿ, ಉತ್ತಮಂ ಉತ್ತಮವಾದಂಥಾದ್ದು, ಕಿಂ-ಯಾವದು, ತದ್ವಪುಃ-ತತ್- ಆಸ್ತ್ರೀಯು, ವಪುಃ-ಶರೀರವು, ಧ್ಯೇಯಂ- ಧ್ಯಾನಮಾಡುವದಕ್ಕೆ ಯೋಗ್ಯವಾದಂಥಾದ್ದು, ಕಿಂ ಯಾವುದು, ನವಯೌವನಂ-ನವ-ನೂತನವಾದ, ಯೌವನಂ-ತಾರುಣ್ಯವು ಸಹೃದಯೈಃ-ಸ್ನೇಹಿತರುಗಳಿಂದ. ಸರ್ವತ್ರ-ಎಲ್ಲಾಕಾಲಗಳಲ್ಲೂ, ತದ್ವಿಭ್ರಮಾಃ-ತತ್ ಆ ಸ್ತ್ರೀಯು, ವಿಭ್ರಮಾಃ-ವಿಲಾಸಗಳು, ಧ್ಯೇಯಾಃ-ಧ್ಯಾನಯೋಗ್ಯಗಳಾದಂಥಾವುಗಳು, ಭವಂತಿ- ಆಗುತ್ತವೆ, ಪ್ರಶ್ನೋತ್ತರಮಾಲಿಕ ಅಲಂಕಾರ. ಪದ್ಮಿನೀನಾಯಿಕಾ ॥೭॥

ತಾತ್ಪರ್ಯ—ಈಶ್ಲೋಕದಲ್ಲಿ ಶಬ್ದಸ್ಪರ್ಶ ರೂಪರಸಗಂಧ ಎಂಬ ಈ ಪಂಚೇಂದ್ರಿಯಗಳ ಸುಖವು ಶೃಂಗಾರರಸಕ್ಕೆ ಆಲಂಬನವಾದ ಸ್ತ್ರೀಯಿಂ ಒಳೇ ಉಂಟಾಗುತ್ತದೆ ಎಂಬುವದನ್ನು ಹೇಳುತಾನೆ. ಅದುಹೇಗೆಂದರೆ-ಲೋಕದಲ್ಲಿ ನೋಡತಕ್ಕ ಪದಾರ್ಥಗಳಲ್ಲಿ ಉತ್ತಮವಾದದ್ದಾವುದೆಂದರೆ ಕೇವಲ ಪ್ರೇಮಪ್ರಸನ್ನವಾದ ಸ್ತ್ರೀಮುಖವೆ ಉತ್ತಮವಾದ್ದು. ಸುಗಂಧವಸ್ತುಗಳಲ್ಲಿ ಮೂಸಿನೋಡುವದಕ್ಕೆ ಯೋಗ್ಯವಾದದ್ದಾವುದೆಂದರೆ ಸ್ತ್ರೀಸಂಬಂಧವಾದ ಮುಖವು ಉತ್ತಮವಾದದ್ದು ಕಿವಿಗಳಿಂದ ಕೇಳುವುದರಲ್ಲಿ ಉ

ತ್ತಮವಸ್ತುವು ಯಾವುದೆಂದರೆ ಸ್ತ್ರೀಯ ಮೃದುವಾಕ್ಯಗಳು ರುಚಿಕರವಾ
ದ ಪದಾರ್ಥಗಳಲ್ಲಿ ಉತ್ತಮವಾದ ಪದಾರ್ಥವಾವುದೆಂದರೆ ಸ್ತ್ರೀಯ ಅಧರಾ
ಮೃತವು ಉತ್ತಮವಾದದ್ದು ಸ್ಪರ್ಶಮಾಡುವದರಲ್ಲಿ ಉತ್ತಮವಾದದ್ದಾವು
ದೆಂದರೆ ಸ್ತ್ರೀಯರುಗಳ ಶರೀರವು ಉತ್ತಮವಾದದ್ದು ಸ್ಮರಣೀಯವಾದ
ಪದಾರ್ಥದಲ್ಲಿ ಉತ್ತಮವಾದದ್ದಾವುದೆಂದರೆ ಸ್ತ್ರೀಸಂಬಂಧವಾದ ತಾರು
ಣ್ಯವು ಸ್ಮರಣೀಯವಾದದ್ದು ಸ್ನೇಹಿತರುಗಳಿಂದ ಎಲ್ಲಾಕಾಲದಲ್ಲಿಯೂ
ಸ್ತ್ರೀಯರುಗಳ ವಿಲಾಸವು ಧ್ಯಾನಾರ್ಹವಾಗಿರುವಂಥಾದ್ದಾಗುತ್ತೆ ||೭||

ಶ್ಲೋ|| ಚಲತ್ಕಲವಲಯಸಂಹತಿಮೇಖಲೋತ್ಥಝುಂಕಾರ
ನೂಪುರಪರಾಜಿತರಾಜಹಂಸ್ಯಃ || ಕುರ್ವಂತಿ ಕಸ್ಯ ನ ಮ
ನೋ ವಿವಶಂ ತರುಣ್ಯೋ ವಿತ್ರಸ್ತಮುಗ್ಧಹರಿಣೀಸದೃ
ಶೈಃ ಕಟಾಕ್ಷೈಃ ||೮||

ಟೀಕು|| ಚಲದ್ವಲಯಸಂಹತಿಮೇಖಲೋತ್ಥಝುಂಕಾರನೂಪುರಪರಾಜಿ
ತರಾಜಹಂಸ್ಯಃ- ಚಲತ್ - ಚಲಿಸುತ್ತಲಿರುವ, ವಲಯ- ಕಟಕಗಳ, ಸಂಹತಿ
ಸಮುದಾಯವುಳ್ಳ, ಮೇಖಲ ವಡ್ಯಾಣದ ಪಂಕ್ತಿಯಿಂದ, ಉತ್ಥ ಹುಟ್ಟಿದಂಥ,
ಝುಂಕಾರ- ಝುಣತ್ಕಾರವುಳ್ಳ, ನೂಪುರ- ಮಂಜೀರಧ್ವನಿಯಿಂದ ಅಥವಾ
ಕಾಲುಕಡಗದ ಶಬ್ದದಿಂದ, ಪರಾಜಿತ ಸೋಲಿಸಲ್ಪಟ್ಟಂಥ, ರಾಜಹಂಸ್ಯಃ ಕಲ
ಹಂಸೆಗಳುಳ್ಳಂಥ, ಏತಾಃ- ಈ ಪೂರ್ವೋಕ್ತರಾದ, ತರುಣ್ಯಃ-ತರುಣಸ್ತ್ರೀಯ
ರುಗಳು, ವಿತ್ರಸ್ತಮುಗ್ಧಹರಿಣೀಸದೃಶೈಃ ವಿತ್ರಸ್ತ- ಭಾಗುಪಟ್ಟಂಥ, ಮು
ಗ್ಧ- ಸುಂದರಗಳಾದ, ಹರಿಣೀ-ಜಿಂಕೆಗೆ, ಸದೃಶೈಃ- ಸಮಾನಳಾದ, ಕಟಾ
ಕ್ಷೈಃ ಕಡೆಗಣ್ಣೋಟಗಳಿಂದ, ಕಸ್ಯ-ಯಾವಪುರುಷನ, ಮನಃ-ಮನಸ್ಸನ್ನು,
ವಿವಶಂ-ಸ್ವಾಧೀನವನ್ನಾಗಿ, ನಕುರ್ವಂತಿ- ಮಾಡಿಕೊಳ್ಳುವದಿಲ್ಲವು, ಉಪ
ಮಾಲಂಕೃತಿಃ, ವಸಂತತಿಲಕಾವೃತ್ತಂ. ಮುಗ್ಧಾನಾಯಿಕಾ ||೮||

ತಾತ್ಪರ್ಯ—ಈ ಶ್ಲೋಕದಲ್ಲಿ ನಾಯಿಕಾಪ್ರಶಂಸೆ ಹಸ್ತಕಟಕಗಳ
ಚಲನಧ್ವನಿಗಳ ಸಮುದಾಯವುಳ್ಳ ವಡ್ಯಾಣ ಕಿಂಕಿಣಿಗಳ ಮನೋಹರ
ಧ್ವನಿಯಿಂದ ಅಂದರೆ ಪಾದಾಭರಣದ ಧ್ವನಿಯಿಂದಕೂಡಿದ ವಡ್ಯಾಣಕಿಂ
ಕಿಣಿಗಳ ಮನೋಹರ ಧ್ವನಿಗಳಿಂದ ರಾಜಹಂಸೆಗಮನಗಳನ್ನು ತಿರಸ್ಕರಿ
ಸುತ್ತಲಿರುವ ಸ್ತ್ರೀಯರುಗಳ ಕುರಂಗನೇತ್ರಗಳೋಪಾದಿಯಲ್ಲಿ ಚಾಂಚ

ಲ್ಯವಾದ ಅಪಾಂಗವೀಕ್ಷಣೆಗಳಿಂದ ಅಂದರೆ ಕಡೆಗಣ್ಣೋಟಗಳಿಂದ ಯಾವ ಪುರುಷರ ಮನಸ್ಸನ್ನು ತಾನೆ ಆಕರ್ಷಣೆಮಾಡುವದಿಲ್ಲ ಆಕರ್ಷಣೆಮಾಡಿಯೇ ಮಾಡುತ್ತಾರೆಂದು ತಾತ್ಪರ್ಯವು. ||೮||

ಶ್ಲೋ|| ಕುಂಕುಮಪಂಕಕಳಂಕಿತ ದೇಹಾಗೌರಪಯೋಧರಕಂಪಿತಹಾರಾ || ನೂಪುರಹಂಸರಣತ್ಪದಪದ್ಮಾ ಕಂನವಶೀಕುರುತೇಭುವಿರಾಮಾ ||೯||

ಟೀಕು|| ಕುಂಕುಮಪಂಕಕಳಂಕಿತದೇಹಾ--ಕುಂಕುಮ- ಕುಂಕುಮದ, ಪಂಕ- ಬುರುವೆಯಿಂದ, ಕಳಂಕಿತ- ಗುರುತಾಗಿಮಾಡಲ್ಪಟ್ಟ, ದೇಹಾ ಶರೀರವುಳ್ಳಂಥ, ಗೌರಪಯೋಧರಕಂಪಿತಹಾರಾ ಗೌರ- ಗೌರ- (ಹೊಂಬಣ್ಣ) ವರ್ಣವಾದ, ಪಯೋಧರ- ಸ್ತನಗಳಿಂದ, ಕಂಪಿತ- ಅಲ್ಲಾಡಿಸಲ್ಪಟ್ಟ, ಹಾರಾ- ಮುಕ್ತಾಹಾರಗಳುಳ್ಳ, ನೂಪುರಹಂಸರಣತ್ಪದಪದ್ಮಾ - ನೂಪುರ- ನೂಪುರಗಳೆಂಬುವಂಥ, ಹಂಸ ಹಂಸಗಳಿಂದ, ರಣತ್ ಧ್ವನಿಮಾಡುತ್ತಲಿರುವ, ಪದಪದ್ಮಾ- ಪದ್ಮಸದೃಶವಾದ ಪಾದಗಳುಳ್ಳಂಥ. ರಾಮಾ- ಸ್ತ್ರೀಯು ಭುವಿ- ಭೂಮಿಯಲ್ಲಿ. ಕಂ- ಯಾವ ಪುರುಷನನ್ನು ತಾನೆ, ನವಶೀಕುರುತೇ- ಸ್ವಾಧೀನವನ್ನಾಗಿ ಮಾಡಿಕೊಳ್ಳುವದಿಲ್ಲ. ಪರಸ್ಪರ ನೈರಪೇಕ್ಷ್ಯಗಳಾದ, ಉಪಮಾಲಂಕಾರಗಳಿಗೆ ಸಂಸೃಷ್ಟಿ. ರಥೋದ್ಧತಾವೃತ್ತಂ. ||೯||

ತಾತ್ಪರ್ಯ—ಆಲಂಬನಕ್ಕೆ ಸವಿಾಪೋದ್ದೀಪನ ಕ್ರಮವನ್ನು ಹೇಳುತ್ತಾನೆ ಅದು ಹೇಗೆಂದರೆ—ಕುಂಕುಮ ಪಂಕದಿಂದ ಲೇಪವನ್ನು ಮಾಡಿಕೊಂಡು ಇರುವ ಶರೀರವುಳ್ಳ ಸುವರ್ಣಛಾಯೆಯುಳ್ಳವಾಗಿಯೂ ಪೀವರವಾಗಿಯೂ ಇರುವ ಸ್ತನಗಳಮೇಲೆ ಅಲ್ಲಾಡುತ್ತಿರುವ ಮುಕ್ತಾಹಾರವುಳ್ಳ ಝಣತ್ಕಾರವನ್ನು ಮಾಡುತ್ತಲಿರುವ ಪಾದಕಟಗಳುಳ್ಳ ಸುಂದರವಾದ ಸ್ತ್ರೀಯು ಯಾವ ಪುರುಷನನ್ನು ತಾನೆ ವಶಮಾಡಿಕೊಳ್ಳುವದಿಲ್ಲ ಅಂದರೆ ಎಲ್ಲರನ್ನೂ ಸ್ವಾಧೀನ ಮಾಡಿಕೊಳ್ಳುತ್ತಾಳೆಂದು ಭಾವವು. ಮೊದಲು ಶೃಂಗಾರರಸಕ್ಕೆ ಆಲಂಬನವಾದ ಸ್ತ್ರೀಯನ್ನು ಹೇಳಿ ಈ ಶ್ಲೋಕದಲ್ಲಿ ಉದ್ದೀಪನ ವಿಭಾವವೆಂದರೆ ಆ ಸ್ತ್ರೀಸಮ್ಬಂಧವಾದ ಅಲಂಕಾರಾದಿಗಳನ್ನು ವರ್ಣನೆ ಮಾಡಿ ಇದ್ದಾನೆ. ||೯||

ಶ್ಲೋ|| ನೂನಂಹಿತೇ ಕವಿವರಾವಿಪರೀತವಾಚೋಯೇನಿತ್ಯಮಾಹುರಬಲಾ ಇತಿಕಾಮಿನೀಸ್ತಾಃ || ಯಾಭಿರ್ವಿ

ಲೋಲತರತಾರಕದೃಷ್ಟಿಪಾತೈಃ ಶಕ್ರಾದಯೋಽಪಿ ವಿಜಿತಾಸ್ತ್ವಬಲಾಃ ಕಥಂ ತಾಃ ॥ ೧೧ ॥

ಟೀಕು॥ ಯೇ ಕವಿವರಾಃ-ಯೇ-ಯಾವ, ಕವಿವರಾಃ- ಶ್ರೇಷ್ಠರಾದ ಕವಿಗಳು, ಯಾಃ ಕಾಮಿನೀಃ- ಯಾಃ- ಯಾವ, ಕಾಮಿನೀಃ- ಸ್ತ್ರೀಯರುಗಳನ್ನು, ಅಬಲಾಃ- ಬಲವಿಲ್ಲದೆ ಇಲತಕ್ಕಂಥಾವರುಗಳು, ಇತಿ ಹೀಗೆಂತೆಂದು ಆಹುಃ- ಹೇಳುತ್ತಾರೋ, ಯಾಭಿಃ- ಯಾವಸ್ತ್ರೀಯರುಗಳಿಂದ, ವಿಲೋಲತರತಾರಕ ದೃಷ್ಟಿಪಾತೈಃ ವಿಲೋಲತರ-ಅತ್ಯಂತ ಚಂಚಲವಾದ, ತಾರಕ-ಕರಿಗುಡ್ಡುಗಳ್ಳ, ದೃಷ್ಟಿ-ನೇತ್ರಗಳ, ಪಾತೈಃ-ನೋಡೋಣದರಿಂದ. ಶಕ್ರಾದಯೋಽಪಿ ದೇವೇಂದ್ರಾದಿಗಳೂ ಕೂಡ, ವಿಜಿತಾಃ-ಜಯಿಸಲ್ಪಟ್ಟರೋ, ತಾಃ-ಆ ಸ್ತ್ರೀಯರುಗಳು, ಅಬಲಾಃ-ಬಲರಹಿತರಾದಂಥಾವರು, ಕಥಂ-ಹೇಗೆ, ಭವನ್ತಿ- ಆಗುತ್ತಾರೋ, ತೇಕವಿವರಾಃ-ಆ ಕವಿಶ್ರೇಷ್ಠರು, ವಿಪರೀತವಾಚಃ-ವಿಪರೀತ-ವ್ಯತ್ಯಸ್ತವಾದ, ವಾಚಃ- ವಾಕ್ಯಗಳುಳ್ಳಂಥಾವರುಗಳು, ನೂನಂಹಿ- ನಿಶ್ಚಯವಷ್ಟೆ. ವಾಕ್ಯಾರ್ಥಹೇತುಕ ಕಾವ್ಯಲಿಂಗಾಲಂಕಾರಃ, ನಾಯಕಾಪ್ರಗಲ್ಭಾ ವಸಂತತಿಲಕಾವೃತ್ತಂ.

ತಾತ್ಪರ್ಯ—ಈ ಶ್ಲೋಕದಲ್ಲಿಯೂ ಸ್ತ್ರೀಪ್ರಶಂಸೆಯನ್ನು ಪರ್ಯಾಯವಾಗಿ ಹೇಳುತ್ತಾನೆ. ಅದು ಹೇಗಂದರೆ—ಕವೀಶ್ವರರು ಯಾವಸ್ತ್ರೀಯರುಗಳನ್ನು ಅಬಲರು ಅಂದರೆ ಬಲಹೀನರೆಂದು ಹೇಳುತ್ತಾರೆಯೋ. ಸ್ತ್ರೀಯರುಗಳು ಚಾಂಚಲ್ಯ ದೃಷ್ಟಿಪಾತದಿಂದ ಇಂದ್ರಾದಿಗಳು ವಶೀಕರಣರಾಗಿದ್ದಾರೆಯೋ ಅಂಥಾ ಸ್ತ್ರೀಯರುಗಳನ್ನು ಅಂದರೆ ಇಂದ್ರಾದಿಗಳನ್ನು ಜೈಸಿ ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವ ಬಲಶಾಲಿಗಳಾದ ಸ್ತ್ರೀಯರುಗಳನ್ನು ಕವೀಶ್ವರರು ಬಲಹೀನರೆಂದು ವ್ಯತ್ಯಾಸದ ಮಾತುಗಳನ್ನು ಹೇಳುತ್ತಾರೆ. ಇದುನಿಶ್ಚಯ ಅಂದರೆ ಯದ್ಯಪಿ ಸ್ತ್ರೀಯರುಗಳಿಗೆ ಅಬಲರೆಂಬುವಂಥ ಹೆಸರು ಸ್ವಾಭಾವಿಕವಾಗಿ ಬಂದದ್ದು ಇವರು ತಮ್ಮ ಚಾಂಚಲ್ಯ ಕಟಾಕ್ಷವೀಕ್ಷಣೆಯಿಂದ ಇಂದ್ರಾದಿಗಳನ್ನೂ ವಶೀಕರಣ ಮಾಡಿಕೊಳ್ಳುತ್ತಾರೆ. ಎಂದು ತಾತ್ಪರ್ಯವು. ॥೧೧॥

ಶ್ಲೋ॥ ನೂನಮಾಜ್ಞಾಕರಸ್ತಸ್ಯಾಸ್ಸುಭ್ರುವೋ ಮಕರಧ್ವಜಃ ॥ ಯತಸ್ತನ್ನೇತ್ರಸಂಚಾರಸೂಚಿತೇಷು ಪ್ರವರ್ತತೇ ॥ ೧೨ ॥

ಟೀಕ॥ ಸುಭ್ರುವಃ-ಸ್ತ್ರೀಗೆ, ಮಕರಧ್ವಜಃ- ಮನ್ಮಥನು, ಆಜ್ಞಾಕರಃ- ದೂತನಾಗಿದ್ದಾನೆ, ನೂನಂ ನಿಶ್ಚಯವು, ಯತಃ-ಯಾವ ಕಾರಣದ ಪೆಸೆಯಿಂದ, ತನ್ನೇತ್ರಸಂಚಾರಸೂಚಿತೇಷು ತತ್-ಆ ಸ್ತ್ರೀಯು, ನೇತ್ರ- ಕಣ್ಣುಗಳ ಸಂಚಾರ-ಚಲನೆಯಿಂದ, ಸೂಚಿತೇಷು-ಸೂಚನೆ ಮಾಡಿದ ಕಾರ್ಯಗಳಲ್ಲಿ, ಪ್ರವರ್ತತೇ- ಪ್ರವರ್ತಿಸುತ್ತಾನೋ, ವೃತ್ತಮಾನುಷ್ಟುಭಂ- ನಾಯಿಕಾದರ್ಶನ ಮಾತ್ರಕಾಮೋದ್ದೀಪನವರ್ಣನಾತ್. ಉದ್ದೀಪನಾಖ್ಯವಿಭಾವಃ. ಕಾವ್ಯಲಿಂಗಾಲಂಕಾರಃ ॥೧೧॥

ತಾತ್ಪರ್ಯ—ಉತ್ತಮವಾದ ನಾಯಿಕಾದರ್ಶನದಿಂದ ಮನ್ಮಥೋದ್ರೇಕವುಂಟಾಗುತ್ತದೆ. ಅದು ಹೇಗಂದರೆ—ಸ್ತ್ರೀಯರುಗಳಿಗೆ ಮನ್ಮಥನು ಆಳಾಗಿದ್ದಾನೆ ಅವರು ದೃಷ್ಟಿಯಿಂದ ನೋಡಿದ ಮಾತ್ರದಿಂದಲೆ ಆ ಕೆಲಸವನ್ನು ಮಾಡುತ್ತಾನೆ ಅದು ಹೇಗಂದರೆ—ಯಾವ ಯೋಗಿ ಜನಗಳನ್ನಾದರೂ ಸ್ತ್ರೀಯರುಗಳು ತಮ್ಮ ಕಡೆಗಣ್ಣಿನಿಂದ ನೋಡುತ್ತಾರೋ ಆ ಯೋಗಿಜನಗಳಿಗೆ ಕಾಮವುಂಟಾಗುತ್ತದೆ. ಈ ಕಾರಣದ ಪೆಸೆಯಿಂದ ಮನ್ಮಥನು ಸ್ತ್ರೀಯರುಗಳ ವಶವರ್ತಿಯಾಗಿದ್ದಾನೆಂದು ಭಾವವು. ॥೧೧

ಶ್ಲೋ॥ ಕೇಶಾಸ್ಸಂಯಮಿನಶ್ಶ್ರುತೇರಪಿಪರಂ ಪಾರಂಗತೇಲೋಚನೇಅಂತರ್ವಕ್ತ್ರಮಪಿಸ್ವಭಾವಶುಚಿಭಿಃ ಕೀರ್ಣಂ ದ್ವಿಜಾನಾಂಗಣೈಃ ॥ ಮುಕ್ತಾನಾಂಸತತಾಧಿವಾಸರುಚಿರೌ ವಕ್ಷೋಜಕುಂಭಾವಿಮಾವಿತ್ಥಂತನ್ವಿವಪುಃಪ್ರಶಾಂತಮಪಿತೇರಾಗಂಕರೋತ್ಯೇವನಃ ॥ ೧೨ ॥

ಟೀಕ॥ ಕೇಶಾಃ-ಶಿರೋರುಹಗಳು ಅಂದರೆ ತಲೆಕೂದಲುಗಳು, ಸಂಯಮಿನಃ- ಸಂಯಮನಗಳುಂಟಾದವುಗಳು. ಲೋಚನೇ- ನೇತ್ರಗಳಾಕೂಡ, ಶ್ರುತೇಃ-ವೇದದ, ಪರಂಪಾರಂ-ಅಂತ್ಯವನ್ನು, ಗತೇ-ಹೊಂದಿರತಕ್ಕವುಗಳು, ಅಂತರ್ವಕ್ತ್ರಮಪಿ-ಮುಖಮಧ್ಯವೂಕೂಡ, ಸ್ವಭಾವಶುಚಿಭಿಃ ಸ್ವಭಾವ-ನಿಸರ್ಗದಿಂದ, ಶುಚಿಭಿಃ- ಪರಿಶುದ್ಧಗಳಾದ ದ್ವಿಜಾನಾಂ- ಬ್ರಾಹ್ಮಣರ, ಗಣೈಃ- ಸಮೂಹಗಳಿಂದ, ಕೀರ್ಣಂ-ವ್ಯಾಪ್ತವಾದಂಥಾದ್ದು, ಇಮೌ- ಈ, ವಕ್ಷೋಜಕುಂಭೌ- ಕುಂಭಸದೃಶಗಳಾದವುರೋಜಗಳು ಮುಕ್ತಾನಾಂ- ಜೀವನ್ಮುಕ್ತರಾದಂಥಾವರುಗಳ, ಸತತಾಧಿವಾಸರುಚಿರೌ ಸತತ-ನಿರಂತರದಲ್ಲೂ, ಅಧಿವಾಸ ಸಹವಾಸಗಳಿಂದ, ರುಚಿರೌ - ಮನೋಹರಗಳಾದಂಥಾವುಗಳು, ಹೇತ

ಸ್ವೀ- ಎಲೈ ಸ್ತ್ರೀಯೆ, ತೇ-ನಿನ್ನ, ವಪುಃ ಶರೀರವು, ಪ್ರಶಾಂತಮಪಿ- ಶಾಂತಿಯನ್ನು ಹೊಂದಿ ಇದ್ದಾಗ್ಯೂ, ನಃ- ನಮ್ಮಗಳಿಗೆ, ರಾಗಂ- ಅನುರಾಗವನ್ನು, ಕರೋತ್ಯೇವ-ಉಂಟುಮಾಡುತ್ತಲೇ ಇದೆ. ಕೇಶಾಃ- ಕೂದಲುಗಳು, ಸಂಯಮಿನಃ-ಪರಸ್ಪರಸಂಶ್ಲಿಷ್ಟಗಳಾದಂಥಾವುಗಳು, ಲೋಚನೇ ನೇತ್ರಗಳು, ಶ್ರುತೇಃ-ಕರ್ಣದ, ಪರಂಪಾರಂ- ಕೊನೆಯನ್ನು. ಗತೇ- ಹೊಂದಿರತಕ್ಕಂಥಾವುಗಳು, ಅಂತರ್ವಕ್ತ್ರಮಪಿ- ಮುಖಮಧ್ಯವೂಕೂಡ, ಸ್ವಭಾವಶುಚಿಭಿಃ- ಸ್ವಭಾವ-ನೈಜವಾಗಿ, ಶುಚಿಭಿಃ-ಶುಭ್ರಗಳಾದಂಥ, ದ್ವಿಜಾನಾಂಗಣೈಃ ದ್ವಿಜಾನಾಂ-ಹಲ್ಲುಗಳ, ಗಣೈಃ-ಗುಂಪುಗಳಿಂದ, ಕೀರ್ಣಂ-ವ್ಯಾಪ್ತವಾದಂಥಾದ್ದು, ಇಮೌ-ಈ ಪರಿದೃಶ್ಯಮಾನವಾದಂಥಾ, ವಕ್ಷೋಜಕುಂಭೌ-ಕುಂಭದದೃಶವಾದ ಕುಚಗಳು, ಮುಕ್ತಾನಾಂ-ಮುತ್ತುಗಳ, ಸತತಾಧಿವಾಸರುಚಿರೌ ಸತತ ನಿರಂತರದಲ್ಲೂ, ಅಧಿವಾಸ-ಇರೋಣದರಿಂದ, ರುಚಿರೌ-ಮನೋಹರಗಳಾದಂಥಾವುಗಳು, ಹೇತನ್ವಿ ಎಲೈ ಸ್ತ್ರೀಯೆ, ತೇ-ನಿನ್ನ, ವಪುಃ-ಶರೀರವು, ನಃ-ನಮ್ಮಗಳಿಗೆ, ರಾಗಂ-ಅನುರಾಗವನ್ನು, ಕರೋತ್ಯೇವ - ಉಂಟುಮಾಡುತಲೆ ಇದೆ. ಶ್ಲೇಷಭಿತ್ತಿಕಾಧ್ಯವಸಿತವಿರೋಧಾಭಾಸಾಲಂಕಾರಃ. ವೃತ್ತಮುಪಜಾತಿಃ ಉಕ್ತಮಾನಾಯಕಃ ಲಕ್ಷಣಮುಕ್ತಂ ಶೃಂಗಾರತಿಲಕೇವುಕ್ತಂ ||೧೬||

ತಾತ್ಪರ್ಯ—ಈ ಶ್ಲೋಕದಲ್ಲಿ ಸ್ತ್ರೀ ಅವಯುವಗಳನ್ನು ನೋಡಿ ಶ್ಲೇಷಾಲಂಕಾರದಿಂದ ವರ್ಣಿಸುತ್ತಾನೆ. ಕೇಶಗಳು ಸಂಯಮವಾಗಿವೆ. ಅಂದರೆ ಒಂದಕ್ಕೊಂದು ಒತ್ತಾಗಿದೆ ಕಣ್ಣುಗಳು ಶ್ರುತಿಗಳ ಕೊನೆಯನ್ನು ಹೊಂದಿವೆ (ಅಂದರೆ) ವೇದಾಂತವನ್ನು ನೋಡಿದೆ ಆಕರ್ಣಾಂತವಾಗಿವೆ. ಮುಖದಲ್ಲಿ ದ್ವಿಜಗಣದಿಂದಕೂಡಿದೆ ಹಲ್ಲುಗಳಿಂದ ತುಂಬಿದೆ ಸ್ತನಗಳು ಮುಕ್ತಾಹಾರದಿಂದ ಕೂಡಿಕೊಂಡಿವೆ. ಮುತ್ತುಗಳ ಹಾರದಿಂದ ಕೂಡಿಕೊಂಡಿವೆ. ಶರೀರವು ಅತಿಶಾಂತಿಯನ್ನು ಹೊಂದಿದೆ. ಈರೀತಿಯಾಗಿ ಉಭಯಾರ್ಥಬೋಧಕಗಳಾದ ವಾಕ್ಯಗಳಿಂದ ವರ್ಣನೆ ಮಾಡಿದ್ದಾನೆ. ಆದ್ದರಿಂದ ವಿರೋಧಾಭಾಸವಾಗಿದೆ. ಪರಂತು ವಿರೋಧವಲ್ಲ ವಿರೋಧತೋರುವಂತೆ ವರ್ಣನೆಮಾಡಿದ್ದಾನೆಂದು ತಾತ್ಪರ್ಯವು. ||೧೬||

ಶ್ಲೋ|| ಮುಗ್ಧೇ ಧಾನುಷ್ಕತಾಕೇಯಮಪೂರ್ವಾತ್ವಯಿದೃಶ್ಯತೇ । ಯಯಾವಿಧ್ಯಸಿಚೇತಾಂಸಿಗುಣೈರೇವನಸಾಯಕೈಃ || ೧೭ ||

ಟೀಕು ॥ ಹೇಮುಗ್ಧೇ - ಎಲೈ ಸುಂದರಳಾದ ಸ್ತ್ರೀಯೇ, ತ್ವಯಿ - ನಿನ್ನಲ್ಲಿ, ಅಪೂರ್ವಾ - ಪೂರ್ವದಲ್ಲಿ ಇಲ್ಲದೆ ಇರುವಂಥ, ಇಯಂ - ಈ, ಧಾನುಷ್ಕತಾ- ಧನುರ್ಧಾರಿತ್ವವು, ದೃಶ್ಯತೇ- ಕಾಣಲ್ಪಡುತ್ತದೆ, ಸಾ- ಆ ಧನುರ್ಧಾರಿತ್ವವು, ಕಾ - ಯಾವದು, ಯಯಾ - ಯಾವ ಧನುರ್ಧರಣತಾ ಹೇತುವಿನಿಂದ, ಚೇತಾಂಸಿ ಜನಗಳ ಮನಸ್ಸುಗಳನ್ನು. ಗುಣೈರೇವ-ಗುಣಗಳಿಂದಲೇ, ವಿಧ್ಯಸಿ- ಹೊಡೆಯುತ್ತಲಿದ್ದಿ, ಸಾಯಕೈಃ ಬಾಣಗಳಿಂದ, ನವಿಧ್ಯಸಿ- ಹೊಡಿಯುವನಿಲ್ಲಾ, ಚತುರ್ಥವಿಭಾವನಾಲಂಕಾರಃ. ವೃತ್ತಮನುಷ್ಟುಭ. ವಾಕ್ಯಾರ್ಥಹೇತುಕ ಕಾವ್ಯಲಿಂಗಾಲಂಕಾರಃ. ಅತ್ರ ಗುಣಯೋಃ ಶ್ಲೇಷಭಿತ್ತಿಕಾಭೇದಾಧ್ಯವಸಾಯ ಮೂಲಾತಿಶಯೋಕ್ತಿ ನಿರ್ವ್ಯೂಢನಿಯತ್ಯ ನಯೋರಂಗಾಂಗೀ ಭಾವೇನ ಸಂಕರಃ ಉಪಮಾನಾದುಪಮೇಯಸ್ಯ ಅಧಿಕ್ಯ ವರ್ಣನಾದ್ವ್ಯತಿರೇಕಾಲಂಕಾರಶ್ಚ ನಿರ್ವ್ಯಜ್ಯತೇ ನಾಯಿಕಾ ಸೌಂದರ್ಯ ಶಾಲಿನೀ ॥ ೧೩ ॥

ತಾತ್ಪರ್ಯ.— ಈ ಶ್ಲೋಕದಲ್ಲಿ ಸ್ತ್ರೀಸೌಂದರ್ಯಾದಿಗಳಿಂದ ಜನಗಳೆಲ್ಲರೂ ಮೋಹಿತರಾಗುತ್ತಾರೆಂಬುವದನ್ನು ಹೇಳುತ್ತಾನೆ. ಹೇಗೆಂದರೆ- ಎಲೈ ಸ್ತ್ರೀಯೆ ಈ ಅಪೂರ್ವವಾದ ಧನುರ್ವಿದ್ಯವನ್ನು ಹೇಗೆ ಕಲಿತುಕೊಂಡಿದ್ದಿ? ಲೋಕದಲ್ಲಿ ಎಲ್ಲಾ ಧನುರ್ಧಾರಿಗಳು ಧನುಸ್ಸಿಗೆ ಗುಣವನ್ನು ಏರಿಸಿ ಅಂಪರೆಹೆಕಟ್ಟಿ ಅದರಲ್ಲಿ ಬಾಣಗಳನ್ನು ಇಟ್ಟು ಜನಗಳನ್ನು ಹೊಡೆಯುತ್ತಾರೆ. ನೀನಾದರೋ ನಿನ್ನ ವಿದ್ಯಾಬಲದಿಂದ ಬಾಣವಿಲ್ಲದೇನೆ ಬರಿಗುಣದಿಂದಲೆ ಹೊಡಿಯುತ್ತೀಯಪ್ಪ ಆದ್ದರಿಂದ ಹನನಸಾಧಕವಾದ ಬಾಣವಿಲ್ಲದೇ ಹೊಡೆಯುವದರಿಂದ ಅಪೂರ್ವವಿದ್ಯಾಬಾತುರ್ಯವೆಂದು ಹೇಳಬೇಕು. ಅಂದರೆ ಸೌಂದರ್ಯದಿಂದಲೆ ಜನಗಳು ಮೋಹಿಸುತ್ತಾರೆಂದು ತಾತ್ಪರ್ಯವು. ॥ ೧೩ ॥

ಶ್ಲೋ॥ ಸತಿಪ್ರದೀಪೇಸತ್ಯಗ್ನೌಸತ್ಸುತಾರಾಮಣೀಂದುಷು ॥
ವಿನಾಮೇಮೃಗಶಾಬಾಕ್ಷ್ಯಾತಮೋಭೂತಮಿದಂಜಗತ್

ಟೀಕು ॥ ಪ್ರದೀಪೇ - ಪ್ರಕಾಶವಾದದೀಪವು, ಸತಿ - ಇರುತ್ತಿರಲಾಗಿ, ಅಗ್ನೌ- ಪ್ರಜ್ವಾಲಾಗ್ನಿಯು, ಸತಿ- ಇರುತ್ತಿರಲಾಗಿ, ತಾರಾಮಣೀಂದುಷು- ತಾರಾ - ನಕ್ಷತ್ರಗಳು, ಮಣಿ - ರತ್ನ, ಇಂದುಷು - ಚಂದ್ರ ಇವರುಗಳು, ಸತ್ಸು- ಇರುತ್ತಿರಲಾಗಿ, ಮೇ- ನನಗೆ, ಮೃಗಶಾಬಾಕ್ಷ್ಯಾ- ಮೃಗ ಜಿಂಕೆಯು ಶಾಬ – ಮರಿಯು, ಅಕ್ಷ್ಯಾ - ನೇತ್ರಗಳೋಪಾದಿಯಲ್ಲಿ ನೇತ್ರಗಳುಳ್ಳ ಸ್ತ್ರೀ

ಯಿಂದ, ವಿನಾ- ವಿನಾಯಿಸಿ, ಇದಂಜಗತ್- ಈ ಲೋಕವು, ತಮೋಭೂತಂ-
ಕತ್ತಲೆಯಿಂದ ಮುಚ್ಚಿಕೊಂಡಿರುವದಾಗಿ, ದೃಶ್ಯತೇ- ಕಾಣುತ್ತದೆ. ಸಂಬಂ
ಧೇಪ್ಯಸಂಬಂಧೋಕ್ತ್ಯತಿಶಯೋಕ್ತಿಃ ॥ ೧೪ ॥

ತಾತ್ಪರ್ಯ—ಕಾಮಿಯಾದ ಮನುಷ್ಯನು ಸುಂದರಳಾದ ಸ್ತ್ರೀಯು ಇಲ್ಲದೆಯಿದ್ದರೆ ಸಂತೋಷವಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ—ಮನೆಯಲ್ಲಿ ಪ್ರಕಾಶವಾಗಿ ದೀಪಗಳಿದ್ದರೂ ಸೂರ್ಯನ ತೇಜಸ್ಸಿನ ಸಮೀಪದಿಯಲ್ಲಿ ಅಗ್ನಿ ಪ್ರಜ್ವಲಿಸುತ್ತಲಿದ್ದರೂ ನಕ್ಷತ್ರಗಳ ಸಮೀಪದಿಯಲ್ಲಿ ಹೊಳೆಯುವ ಚಂದ್ರನಕಾಂತಿಗೆ ಸಮಾನವಾದ ಕಾಂತಿಗಳುಳ್ಳ ಜಾತಿ ರತ್ನಗಳು ವಜ್ರಗಳು ಮುಂತಾದ ಮಾಣಿಕ್ಯಗಳಿದ್ದಾಗ್ಯೂ ಕುರಂಗನೇತ್ರದ ಸಮೀಪದಿಯಲ್ಲಿ ಚಾಂಚಲ್ಯದೃಷ್ಟಿವುಳ್ಳ ಸ್ತ್ರೀಯು ಇಲ್ಲದೆಯಿದ್ದರೆ ಇಷ್ಟು ಪ್ರಕಾಶವಿದ್ದಾಗ್ಯೂ ಜಗತ್ತೆಲ್ಲಾ ಕತ್ತಲೆ ಮುಚ್ಚಿಕೊಂಡಂತೆ ಕಾಣುತ್ತಲಿದೆ ಎಂದು ಹೇಳುತ್ತಾನೆ. ಅಂದರೆ ಎಷ್ಟು ಐಶ್ವರ್ಯವಿದ್ದಾಗ್ಯೂ ಮನುಷ್ಯನಿಗೆ ಸ್ತ್ರೀಯು ಇಲ್ಲದೆ ಹೋದರೆ ಕತ್ತಲೆ ಮುಚ್ಚಿಕೊಂಡ ಮನೆಯಂತೆ ಇರುತ್ತದೆ ಎಂದು ತಾತ್ಪರ್ಯವು. ॥ ೧೪ ॥

ಶ್ಲೋ॥ ಉದ್ವೃತ್ತಸ್ತನಭಾರಏಷತರಳೇನೇತ್ರೇಚಲೇಭ್ರೂ
ಲತೇರಾಗಾಧಿಷ್ಠಿತಮೋಷ್ಠಪಲ್ಲವಮಿದಂಕುರ್ವಂ
ತುನಾಮವ್ಯಥಾ ॥ ಸೌಭಾಗ್ಯಾಕ್ಷರಮಾಲಿಕೇವಲಿಖಿ
ತಾಪುಷ್ಪಾಯುಧೇನಸ್ವಯಂಮಧ್ಯಸ್ಥಾಪಿಕರೋತಿ
ತಾಪಮಧಿಕಂರೋಮಾವಳೀಕೇನಸಾ ॥ ೧೫ ॥

ಟೀಕು॥ ಹೇತರಳೇ- ಎಲೈ ಚಂಚಲವಾದ ಸ್ತ್ರೀಯೆ. ಉದ್ವೃತ್ತಸ್ತನ ಭಾರಏಷಃ - ಸ್ತನ- ಕುಚಗಳ, ಭಾರಏಷಃ- ಭಾರವೂ, ಚಲೇ- ಚಂಚಲವಾದ, ನೇತ್ರೇ ನೇತ್ರಗಳೂ, ಭ್ರೂಲತೇ-ಲತಾಸದೃಶಗಳಾದ ಹುಬ್ಬುಗಳೂ, ಇದಂ- ಈ ಪುರೋವೃತ್ತಿಯಾದಂಥ ರಾಗಾಧಿಷ್ಠಿತಂ- ರಾಗ-ಅರುಣ್ಯದಿಂದ, ಅಧಿಷ್ಠಿತಂ- ವ್ಯಾಪ್ತವಾದಂಥ, ರಾಗಾಧಿಷ್ಠಿತಂ ರಾಗ-ದ್ವೇಷದಿಂದ. ಅಧಿಷ್ಟಿತಂ-ಕೂಡಿಕೊಂಡಿರುವಂಥ, ಓಷ್ಠಪಲ್ಲವಂ- ಪಲ್ಲವಸದೃಶವಾದ ತುಟಿಯೂ ವ್ಯಥಾಂ- ಮನೋವ್ಯಥೆಯನ್ನು, ಕುರ್ವಂತುನಾಮ- ಉಂಟುಮಾಡಲಿ, ಪುಷ್ಪಾಯುಧೇನ- ಮನ್ಮಥದಿಂದ, ಸೌಭಾಗ್ಯಾಕ್ಷರಮಾಲಿಕೇವ- ಸೌಭಾಗ್ಯ-ಐಶ್ವರ್ಯಚಿಹ್ನೆಗ

ಳಾದ, ಅಕ್ಷರಮಾಲಿಕೇವ-ಅಕ್ಷರಪುಂಜಗಳೋ ಎಂಬುವಹಾಗೆ, ಲಿಖಿತಾ-ಬರೆಯಲ್ಪಟ್ಟಂಥ, ರೋಮಾವಳಿಃ-ರೋಮ-ರೋಮಗಳ, ಆವಳಿಃ-ಪಙ್ಕ್ತಿಯು, ಸ್ವಯಂ-ತಾನು, ಕೇನವಾ-ಯಾವಕಾರಣದ್ವೆಸೆಯಿಂದ, ಮಧ್ಯಸ್ಥಾಪಿ ಮಧ್ಯಪ್ರದೇಶದಲ್ಲಿರುವಂಥಾದ್ದಾದಾಗ್ಯದರೂ, ಅಧಿಕಂ-ಹೆಚ್ಚಾಗಿ, ತಾಪಂ-ಸಂತಾಪವನ್ನು, ಕರೋತಿ-ಮಾಡುತ್ತದೆ, ಶ್ಲೇಷಾಧ್ಯವಸಿತಪದಾರ್ಥಹೇತುಕ ಕಾವ್ಯಲಿಂಗಾಕಾರಃ-ಉತ್ಪ್ರೇಕ್ಷಾಲಂಕಾರಶ್ಚ ಅನಯೋಃ ಪರಸ್ಪರನೈರಪೇಕ್ಷ್ಯಾತ್ಸಂಸೃಷ್ಟಿಃ. ನಾಯಿಕಾಸೌಂದರ್ಯವರ್ಣನಂನಾಮ ಸೌಶೀಲ್ಯಾಖ್ಯಗುಣಃ, ಶಾರ್ದೂಲವಿಕ್ರೀಡಿತಂವೃತ್ತಂ. ॥೧೫॥

ತಾತ್ಪರ್ಯ-ಈ ಶ್ಲೋಕದಲ್ಲಿ ಭಂಗ್ಯಂತರವಾಗಿ ನಾಯಿಕಾ ಸೌಂದರ್ಯವನ್ನು ಹೇಳುತ್ತಾನೆ. ಅದು ಹೇಗಂದರೆ—ಒಬ್ಬನಾಯಿಕೆಯನ್ನು ನಿರ್ದೇಶಮಾಡಿ ಕಾಮುಕ ಪುರುಷನು ಹೇಳುವದೇನಂದರೆ. ಶೃಂಗಾರವಿಲಾಸದಿಂದ ಎಲೈ ಚಂಚಲಳಾದ ಸ್ತ್ರೀಯೆ, ನಿನ್ನ ಉನ್ನತವಾದ ಕುಚಭಾರವು, ತರಳವಾದ ಕಟಾಕ್ಷಗಳು, ಲತಾಸದೃಶವಾದ ಹುಬ್ಬುಗಳು, ಪಲ್ಲವಸದೃಶವಾದ ಕೆಂಪಾದತುಟಿಯು ಮನೋವ್ಯಥೆಯನ್ನುಂಟು ಮಾಡುವದು ನ್ಯಾಯವೇ ಸರಿ ಮಧ್ಯಸ್ಥಿತವಾಗಿರುವ ಸೌಭಾಗ್ಯಾಕ್ಷರ ಪಙ್ಕ್ತಿಯೋ ಎಂಬುವಹಾಗಿರುವ ನಿನ್ನ ರೋಮರಾಜಿಯು ಯಾವ ಹೇತುವಿನದೆಸೆಯಿಂದ (ಯಾವಕಾರಣದ ದೆಸೆಯಿಂದ) ಮನಸ್ಸಿಗೆ ವ್ಯಥೆಯನ್ನುಂಟುಮಾಡುತ್ತೆ ಅಂದರೆ ಸೌಂದರ್ಯ ಶಾಲಿನಿಯಾದ ಸ್ತ್ರೀದರ್ಶನದಿಂದ ಕಾಮುಕಪುರುಷನಿಗೆ ಕಾಮಸಂತಾಪವುಂಟಾಗುತ್ತದೆ ಎಂದು ತಾತ್ಪರ್ಯವು. ॥೧೫॥

ಶ್ಲೋ॥ ಮುಖೇನಚಂದ್ರಕಾಂತೇನಮಹಾನೀಲೈಶ್ಶಿರೋರು
ಹೈಃ ॥ ಕರಾಭ್ಯಾಂಪದ್ಮರಾಗಾಭ್ಯಾಂರೇಜೇಮಣಿಮ
ಯೀವಸಾ ॥೧೬॥

ಟೀಕು। ಚಂದ್ರಕಾಂತೇನ-ಚಂದ್ರನೋಪಾದಿಯಲ್ಲಿ ಕಾಂತಿವುಳ್ಳಂಥ, ಚಂದ್ರಕಾಂತೇನ-ಚಂದ್ರಕಾಂತಿ ಮಣಿಸ್ವರೂಪವಾದಂಥ, ಮುಖೇನ ಮುಖದಿಂದಲೂ, ಮಹಾನೀಲೈಃ-ಮಹಾ-ಅಧಿಕವಾಗಿ, ನೀಲೈಃ ಕಪ್ಪಾದಂಥ, ಮಹಾನೀಲೈಃ-ಇಂದ್ರನೀಲಮಣಿಗಳ ಸ್ವರೂಪವಾದಂಥ, ಶಿರೋರುಹೈಃ- ಕೇಶಗಳಿಂದ, ಪದ್ಮರಾಗಾಭ್ಯಾಂ ಪದ್ಮ-ಕಮಲದ, ರಾಗಾಭ್ಯಾಂ-ಅರುಣ್ಯದೋಪಾದಿಯಲ್ಲಿ ಅರುಣ್ಯವುಳ್ಳಂಥ, ಪದ್ಮರಾಗಾಭ್ಯಾಂ-ಪದ್ಮರಾಗಮಣಿಸ್ವರೂಪಗ

ಳಾದಂಥ, ಕರಾಭ್ಯಾಂ- ಹಸ್ತಗಳಿಂದ, ಸಾ- ಆ ಸ್ತ್ರೀಯು, ಮಣಿಮಯಾ- ರತ್ನಸ್ವರೂಪವಾಗಿ (ಏಕಾರವಾ), ರೇಜೇ- ಪ್ರಕಾಶಿಸುತ್ತಾಳೆ. ಶ್ಲೋಕಾಲಂಕಾರಃ ಅನುಷ್ಟುಭ್ವೃತ್ತ. ಪರಿಣಾಮಾಲಂಕಾರಧ್ವನಿರ್ವ್ಯಜ್ಯತೇ, ॥೧೬॥

ತಾತ್ಪರ್ಯ—ಸ್ತ್ರೀಯು ರತ್ನಸ್ವರೂಪವಾಗಿ ಪ್ರಕಾಶಿಸುತ್ತಾಳೆಂಬುವವನ್ನು ಹೇಳುತ್ತಾರೆ ಅದು ಹೇಗೆಂದರೆ—ಚಂದ್ರಕಾಂತಿಮಣಿಸ್ವರೂಪವಾದಂಥಾ ಮುಖದಿಂದಲೂ ಇಂದ್ರನೀಲಮಣಿಗಳ ಸದೃಶಗಳಾದ ಕೇಶಗಳಿಂದಲೂ, ಪದ್ಮರಾಗ ಮಣಿಯುಳ್ಳ ಹಸ್ತಗಳಿಂದಲೂ, ಸ್ತ್ರೀಯು ಮಣಿವಿಗ್ರಹವಾಗಿ ಪ್ರಕಾಶಿಸುತ್ತಾಳೆಂದು ತಾತ್ಪರ್ಯವು. ॥ ೧೬ ॥

ಶ್ಲೋ॥ ಗುರುಣಾಸ್ತನಭಾರೇಣಮುಖಚಂದ್ರೇಣಭಾಸ್ವತಾ ॥
ಶನೈಶ್ಚರಾಭ್ಯಾಂಪಾದಾಭ್ಯಾಂರೇಜೇಗ್ರಹಮಯೀವಸಾ

ಟೀಕು॥ ಗುರುಣಾ-ಗುರುವಾದಂಥ, ಗುರುಣಾ ಸ್ಥೂಲವಾದಂಥ, ಸ್ತನಭಾರೇಣ- ಸ್ತನ-ಉರೋಜಗಳ, ಭಾರೇಣ ಭಾರದಿಂದ, ಭಾಸ್ವತಾ-ಪ್ರಕಾಶಿಸುತ್ತಲಿರುವ ಮುಖಚಂದ್ರೇಣ - ಚಂದ್ರನೋಪಾದಿಯಲ್ಲಿರುವ ಮುಖದಿಂದ, ಮುಖಚಂದ್ರೇಣ- ಮುಖ- ಮುಖಸಂಬುಮಂಥ, ಚಂದ್ರೇಣ- ಚಂದ್ರನಿಂದಲೂ, ಶನೈಶ್ಚರಾಭ್ಯಾಂ- ಶನೈಶ್ಚರವಾದ ಶನೈಶ್ಚರಾಭ್ಯಾಂ-ಶನೈಃ ಮೆಲ್ಲಗೆ, ಚರಾಭ್ಯಾಂ-ಸಂಚರಿಸುತ್ತಲಿರುವ, ಪಾದಾಭ್ಯಾಂ ಪಾದಗಳಿಂದ ಸಾ-ಆ ಸ್ತ್ರೀಯು, ಗ್ರಹಮಯೀ - ಚಂದ್ರಾದಿಗ್ರಹಗಳ ರೂಪವಾಗಿ, ರೇಜೇ - ಪ್ರಕಾಶಿಸುತ್ತಲಿದ್ದಾಳೆ ॥೧೭॥

ತಾತ್ಪರ್ಯ—ಸ್ತ್ರೀಯು ತನ್ನ ಅವಯವಾಶ್ರಯವುಳ್ಳ ಗ್ರಹಗಳೋಪಾದಿಯಲ್ಲಿ ಪ್ರಕಾಶಿಸುತ್ತಾಳೆ. ಅದು ಹೇಗೆಂದರೆ—ಮುಖಚಂದ್ರನಿಂದಲೂ, ಗುರುಕುಚಗಳಿಂದಲೂ, ಶನೈಶ್ಚರವಾದ ಪಾದಗತಿಯಿಂದಲೂ, ಗ್ರಹಗಳಂತೆ ಪ್ರಕಾಶಿಸುತ್ತಾಳೆ. ಅಂದರೆ ಮುಖ ಚಂದ್ರೇಣ ಅನ್ನುವ ಪದದಿಂದಲೂ, ಗುರುಣಾಸ್ತನಭಾರೇಣ ಎಂಬುವಪದದಿಂದಲೂ ಪ್ರಥಮೋದ್ದಿಷ್ಟಪದಗತವಾದ ಗುರುವಿನಿಂದಲೂ, ಶನೈಶ್ಚರಾಭ್ಯಾಂಪಾದಾಭ್ಯಾಂ ಎನ್ನುವದರಲ್ಲಿ ಮೊದಲು ಹೇಳಿದ ಶನೈಶ್ಚರ ಎಂಬುವ ಪದದಿಂದ ಶನೈಶ್ಚರ ಗ್ರಹದಿಂದಲೂ, ಪ್ರಕಾಶಿಸುತ್ತಾಳೆಂದು ಶಬ್ದಶ್ಲೇಷದಿಂದ ಅರ್ಥಾಂತರ ಪರಿಕಲ್ಪನಾಬಲದಿಂದ ಗ್ರಹಗಳಂತೆ ಪ್ರಕಾಶಿಸುತ್ತಾಳೆಂದು ತಾತ್ಪರ್ಯವು.

ಶ್ಲೋ॥ ತಸ್ಯಾಃ ಸ್ತನೌಯದಿಘನೌಜಘನಂಚಹಾರಿವಕ್ತ್ರಂಚ ಚಾರುತವಚೇತ ಕಿಮಾಕುಲತ್ವಂ ॥ ಪುಣ್ಯಂಕುರುಷ್ವ ಯದಿತೇಷುತವಾಸಿ ವಾಂಛಾಪುಣ್ಯೈರ್ವಿನಾನಹಿಭವಂತಿ ಸಮೀಹಿತಾರ್ಥಾಃ ॥ ೧೮ ॥

ಟೀಕಾ॥ ತಸ್ಯಾಃ-ಆ ಸ್ತ್ರೀಯ, ಘನೌಯದಿ- ನಿಬಿಡವಾದಂಥ, ಸ್ತನೌ ಸ್ತನಗಳು, ಜಘನಂಚ-ಮುಖವೂಕೂಡ, ಹಾರಿ-ಮನೋಲ್ಲಾಸವನ್ನು, ಅಪಹಾರ ಮಾಡತಕ್ಕಂಥಾದ್ದು, ಹೇಚಿತ್ತ - ಎಲೈಮನಸ್ಸೆ, ತವ- ನಿನಗೆ, ಆಕುಲತ್ವಂ-ವ್ಯಾಕುಲತ್ವವು, ಕಿಂ-ಯೇನುಪ್ರಯೋಜನವು. ತವ-ನಿನಗೆ, ತೇಷು-ಕುಚಜಘನಾದಿಗಳಲ್ಲಿ, ವಾಂಛಾ- ಅಪೇಕ್ಷೆಯು, ಅಸ್ತಿಚೇತ್- ಇರುವಂಥಾದ್ದಾದರೆ, ಪುಣ್ಯಂ-ಧರ್ಮವನ್ನು, ಕುರುಷ್ವ-ಮಾಡು, ತಥಾಹಿ-ಅದುಯುಕ್ತವೇ ಸರಿ, ಪುಣ್ಯೈರ್ವಿನಾ-ಪುಣ್ಯಕರ್ಮಗಳಿಂದ, ವಿನಾ-ಇಲ್ಲಿ, ಸಮೀಹಿತಾಃ ಅರ್ಥಾಃ-ಸಮೀಹಿತ-ಇಷ್ಟವಾದಂಥ, ಅರ್ಥಾಃ-ಪ್ರಯೋಜನಗಳು, ನಭವಂತಿ-ಆಗುವದಿಲ್ಲ ಸ್ವಭಾವೋಕ್ತ್ಯಲಂಕಾರಧ್ವನಿಃ. ಅರ್ಥಾಂತರನ್ಯಾಸಾಲಂಕಾರಃ. ನಾಯಕಾ ಸೌಂದರ್ಯಶಾಲಿನೀ ವಸಂತತಿಲಕಾವೃತ್ತಂ. ॥೧೮॥

ತಾತ್ಪರ್ಯ—ಸ್ತ್ರೀಯ ಸ್ವಾಭಾವಿಕವಾದ ಸೌಂದರ್ಯವನ್ನು ವರ್ಣನೆ ಮಾಡುತಾನೆ. ಹೇಗಂದರೆ=ಸ್ತ್ರೀ ಸಂಬಂಧವಾದ ಪರಸ್ಪರ ಒತ್ತಾಗಿ ಕೂಡಿಕೊಂಡಿರುವ ಸ್ತನಗಳು ಮತ್ತು ಜಘನ ಪ್ರದೇಶವೂ ಸುಂದರವಾದ ಮುಖವೂ ಪುರುಷರ ಮನಸ್ಸನ್ನು ಅಪಹಾರಮಾಡುತ್ತದೆ. ಆದರೆ ಎಲೈ ಮನಸ್ಸೆ ಇವುಗಳನ್ನು ನೋಡಿ ಯಾತಕ್ಕೆ ಚಪಲಪಡುತ್ತಿ. ಚಪಲದಿಂದ ಏನು ಪ್ರಯೋಜನವು ನಿನಗೆ ಸ್ತ್ರೀಯ ಸ್ತನ ಜಘನಾದಿಗಳಲ್ಲಿ ಅಪೇಕ್ಷೆ ಇರುವದಾದರೆ ಪುಣ್ಯ ಕರ್ಮಗಳನ್ನು ಮಾಡಿದರೆ ಸರಿ. ಪುಣ್ಯ ಕರ್ಮಗಳಲ್ಲಿನೆ ಇಷ್ಟಾರ್ಥಗಳು ಲಭಿಸುವದಿಲ್ಲ ಎಂದು ತಾತ್ಪರ್ಯವು. ॥ ೧೮ ॥

ಶ್ಲೋ॥ ಇಮೇತಾರುಣ್ಯಶ್ರೀನವಪರಿಮಳಾಃ ಪ್ರೌಢಸುರತಪ್ರತಾಪಪ್ರಾರಂಭಾಃ ಸ್ಮರವಿಜಯದಾನಪ್ರತಿಭುವಃ ॥ ಚಿರಂಚೇತಶ್ಚೋರಾಅಭಿನವವಿಕಾರೈಕ ಗುರವೋವಿಲಾಸವ್ಯಾಪಾರಾಃ ಕಿಮಪಿವಿಜಯಂತೇಮೃಗದೃಶಾಂ ॥

ಟೀಕು॥ ತಾರುಣ್ಯಶ್ರೀನವಪರಿಮಳಃ-ತಾರುಣ್ಯಶ್ರೀ-ಯೌವನಸಂಪತ್ತಿನಿಂದ, ನವಪರಿಮಳಃ ನವ-ನೂತನವಾದ, ಪರಿಮಳಃ-ಸೌಭಾಗ್ಯವಿಶೇಷವುಳ್ಳಂಥ, ಪ್ರೌಢಸುರತಪ್ರತಾಪಪ್ರಾರಂಭಾಃ-ಪ್ರೌಢಸುರತ ಪ್ರಚಂಡಸುರತದ, ಪ್ರತಾಪ-ಸಾಮರ್ಥ್ಯದ, ಪ್ರಾರಂಭಾಃ-ಉಪಕ್ರಮಗಳುಳ್ಳಂಥ, ಸ್ಮರವಿಜಯದಾನಪ್ರತಿಭುವಃ-ಸ್ಮರ-ಮನ್ಮಥನಿಗೋಸ್ಕರ, ವಿಜಯದಾನ-ಜಗಜ್ಜಯದಾನಕ್ಕೆ, ಪ್ರತಿಭುವಃ-ಹೊಣೆಗಾರರಾದ, ಚಿರಂ-ಬಹುಕಾಲ, ಚೇತಃ-ಮನಸ್ಸನ್ನು, ಚೋರಾಃ ಅಪಹಾರಮಾಡುವಂಥ ಅಭಿನವವಿಕಾರೈಕಗುರವಃ-ಅಭಿನವ-ನೂತನಗಳಾದ, ವಿಕಾರ-ಭಯಕಂಪಾದಿಕರಣಾದಿಗಳಿಗೆ, ಏಕ-ಮುಖ್ಯಳಾದ, ಗುರವಃ-ಉಪದೇಷ್ಟೃಗಳಾದ, ಮೃಗದೃಶಾಂ-ಜಿಂಕೆಯ-ಕಣ್ಣಿನೋಪಾದಿಯಲ್ಲಿ ಕಣ್ಣುಗಳುಳ್ಳ ಸ್ತ್ರೀಯರುಗಳ, ಇಮೇ-ಈ ಪೂರ್ವೋಕ್ತಗಳಾದ, ವಿಲಾಸವ್ಯಾಪಾರಾಃ-ವಿಲಾಸ-ಶೃಂಗಾರಚೇಷ್ಟೆಗಳ, ವ್ಯಾಪಾರಾಃ ಕಾರ್ಯಗಳು, ಕಿಮಪಿ-ಅನಿರ್ವಾಚ್ಯವಾಗಿ, ವಿಜಯಂತೇ-ಪ್ರಕಾಶಿಸುತ್ತವೆ. ಶಿಖರಿಣೀವೃತ್ತ.

ತಾತ್ಪರ್ಯ—ಈ ಶ್ಲೋಕದಲ್ಲಿ ಸ್ತ್ರೀಯರುಗಳ ಯೌವನ ಪ್ರಾದುರ್ಭಾವಾನಂತರವುಂಟಾಗುವ ಶೃಂಗಾರ ಚೇಷ್ಟೆಗಳನ್ನು ವರ್ಣಿಸುತ್ತಾನೆ. ಅದು ಹೇಗಂದರೆ= ಸ್ತ್ರೀಯರುಗಳಿಗೆ ಯೌವನ ಸಂಪತ್ತಿನಿಂದ ನೂತನವಾದ ಕಾಂತಿಯುಂಟಾಗುತ್ತದೆ. ಮತ್ತು ಸುರತಕಾರ್ಯದಲ್ಲಿ ಪ್ರೌಢವಾದ ಆರಂಭವುಳ್ಳವಳಾಗುತ್ತಾಳೆ. ಬಹುಕಾಲ ಯೌವನಪುರುಷರ ಮನಸ್ಸನ್ನು ಅಪಹರಿಸುವದಕ್ಕೆ ಇವರುಗಳ ವಿಲಾಸ ವ್ಯಾಪಾರಗಳು ಗುರುಗಳು ಆಗಿವೆ ಮನ್ಮಥನಿಗೆ ಜಗಜ್ಜಯರಾಜ್ಯಪ್ರದಾನಕ್ಕೆ ಪ್ರತಿಭೂಗಳು ಆಗಿವೆ. ಅಂದರೆ ಹೊಣೆಗಾರರುಗಳು ಆಗಿವೆ. ಈ ರೀತಿಗಳಾಗಿರುವ ಯೌವನ ಚೇಷ್ಟೆಗಳು ಬಾಯಲ್ಲಿ ಆಡುವದಕ್ಕೆ ಆಗದಂಥ ಕಾರ್ಯಗಳನ್ನೇ ಮಾಡಿಸುತ್ತವೆ. ಕಾಮಿನೀ ಕಾಮುಕರು ಸೇರಿ ರತಿಯನ್ನು ಮಾಡುವ ಕಾಲದಲ್ಲಿ ಬಾಯಿಂದ ಹೇಳಬಾರದ ಕಾರ್ಯಗಳು ನಡೆದು ಹೋಗುತ್ತವೆ. ಕಾಮಾಂಧರಾದವರು ಹೇಯಾ ಹೇಯಗಳನ್ನು ನೋಡದೆ ಮನಸ್ಸಿಗೆ ತೋರಿದ ಹಾಗೆಲ್ಲಾ ಮಾಡುತ್ತಾರೆಂದು ತಾತ್ಪರ್ಯವು. ॥೧೯॥

ಶ್ಲೋ॥ ಪ್ರಣಯಮಧುರಾಃ ಪ್ರೇಮೋದ್ಗಾರಾ ರಸಾಶ್ರಯತಾಂ
ಗತಾಃ ಫಣಿತಿಮಧುರಾ ಮುಗ್ಧಪ್ರಾಯಾಃ ಪ್ರಕಾಶಿತ

ಸಮ್ಮದಾಃ ॥ ಪ್ರಕೃತಿಸುಭಗಾವಿಸ್ರಂಭಾದಾರ್ದ್ರಾಸ್ಸ್ಮ
ರೋದಯದಾಯಿನೋರಹಸಿಕಿಮಪಿಸ್ವೈರಾಲಾಪಾಹ
ರಂತಿಮೃಗೀದೃಶಾಂ ॥ ೨೦ ॥

ಟೀಕು॥ ಪ್ರಣಯಮಧುರಾಃ-ಪ್ರಣಯ-ವಿಶ್ವಾಸದಿಂದ, ಮಧುರಾಃ-ಮ
ನೋಹರಗಳಾದಂಥ, ಪ್ರೇಮೋದಾರಾಃ-ಪ್ರೇಮ-ಸ್ನೇಹದಿಂದ, ಉದಾರಾಃ-
ಅಧಿಕವಾದ, ರಸಾಶ್ರಯತಾಂ-ರಸ-ಶೃಂಗಾರರಸದ, ಆಶ್ರಯತಾಂ- ಆಶ್ರಯ
ಭಾವವನ್ನು, ಗತಾಃ-ಹೊಂದಿರುವಂಥ, ಫಣಿತಿಮಧುರಾಃ-ಫಣಿತಿ-ಸಂದರ್ಭ
ವಿಶೇಷಗಳಿಂಗ, ಮಧುರಾಃ - ಅಮೃತಪ್ರಾಯಗಳಾದ, ಮುಗ್ಧಪ್ರಾಯಾಃ-
ಸುಂದರಪ್ರಾಯಗಳಾದ ಅಥವಾ ಮೌಢ್ಯಪ್ರಾಯಗಳಾದ, ಪ್ರಕಾಶಿತಸಮ್ಮ
ದಾಃ-ಪ್ರಕಾಶಿತ- ಪ್ರಕಾಶವಾಗಿ ಮಾಡಲ್ಪಟ್ಟ, ಸಮ್ಮದಾಃ- ಶೃಂಗಾರಮದವು
ಳ್ಳಂಥ, ಪ್ರಕೃತಿಸುಭಗಾಃ- ಪ್ರಕೃತಿ- ಸ್ವಭಾವದಿಂದ, ಸುಭಗಾಃ- ಸುಂದರಗ
ಳಾದ, ವಿಸ್ರಂಭಾದಾರ್ದ್ರಾಃ ವಿಸ್ರಂಭ-ಶೃಂಗಾರರಸದಿಂದ, ಆರ್ದ್ರಾಃ-ನೆನೆಯಿಸ
ಲ್ಪಟ್ಟ, ಸ್ಮರೋದಯದಾಯಿನಃ-ಸ್ಮರ- ಮನ್ಮಥನ, ಉದಯ - ಆವಿರ್ಭಾವ
ವನ್ನು, ದಾಯಿನಃ-ಉಂಟುಮಾಡುತ್ತಲಿರುವ, ಮೃಗೀದೃಶಾಂ- ಸ್ತ್ರೀಯರು
ಗಳ, ರಹಸಿ - ಏಕಾಂತದಲ್ಲಿ, ಕಿಮಪಿ - ಅನಿರ್ವಾಚ್ಯವಾದ, ಸ್ವೈರಾಲಾಪಾಃ-
ಸ್ವೈರ-ಸ್ವೇಚ್ಛೆಯಾದ, ಆಲಾಪಾಃ-ಮಾತುಗಳು, (ಕಾಮುಕಪುರುಷರಮನ
ಸ್ಸನ್ನು) ಹರನ್ತಿ-ಅಪಹರಿಸುತ್ತವೆ, ನಾಯಿಕಾ ಅನುಕೂಲಾದಕ್ಷಿಣಾಚ. ।೨೦

ತಾತ್ಪರ್ಯ— ಸ್ತ್ರೀಯರುಗಳ ಶೃಂಗಾರವಿಲಾಸಗಳು ಪುರುಷರ
ಮನಸ್ಸನ್ನು ಅಪಹರಿಸುತ್ತವೆ ಎಂಬುವದನ್ನು ಈ ಶ್ಲೋಕದಲ್ಲಿ ರೀತ್ಯಾಂ
ತರದಿಂದ ವರ್ಣಿಸುತ್ತಾನೆ. ಅದು ಹೇಗಂದರೆ- ವಿಶ್ವಾಸದಿಂದ ಆಡುವ
ಮಾತುಗಳು ಮನೋಹರವಾಗಿಯೂ, ಉದಾರವಾದ ಪ್ರೇಮವುಳ್ಳದ್ದಾ
ಗಿಯೂ, ಶೃಂಗಾರರಸಕ್ಕೆ ಮನೆಯಾಗಿಯೂ, ಕಾಲಾನುಗುಣಗಳಾದ ಆ
ಸಂಭರ್ಭಗಳಲ್ಲಿ ಮನಸ್ಸಿಗೆ ಹಿತವಾಗಿಯೂ, ಅದು ಕೇವಲ ಮನೋಹರವ್ಯಾ
ವಾಗಿಯೂ, ವಿಶದಮಾಡುವದರಿಂದ ಸುಂದರಗಳಾಗಿಯೂ, ಕೆಲವು ಕಾಲ
ದಲ್ಲಿ ಮದವನ್ನು ತೋರಿಸುವದಾಗಿಯೂ ವಿಶ್ವಾಸಗಳಿಂದ ನೆನಸಲ್ಪಟ್ಟವು
ಗಳಾಗಿಯೂ ಏಕಾಂತದಲ್ಲಿ ಸ್ವೇಚ್ಛೆಯಿಂದ ಪ್ರವೃತ್ತಿವುಳ್ಳದ್ದಾಗಿಯೂ ಇರುವ
ಹೆಣ್ಣು ಜಿಂಕೆಗಳೋಪಾದಿಯಲ್ಲಿ ಕಣ್ಣುಗಳುಳ್ಳ ಸ್ತ್ರೀಯರುಗಳ ಶೃಂಗಾರ

ಚೇಷ್ಟೆಗಳು ಕಾಮುಕಪುರುಷರ ಮನಸ್ಸನ್ನು ಅಪಹರಿಸುವದಿಲ್ಲವೆ ಏನು (ಅಂದರೆ) ಅಪಹಾರವಮಾಡೇಮಾಡುತ್ತವೆ ಎಂದು ತಾತ್ಪರ್ಯವು. ॥ ೨೦ ॥

ಶ್ಲೋ॥ ವಿಶ್ರಮ್ಯವಿಶ್ರಮ್ಯ ವನದ್ರುಮಾಣಾಂಛಾಯಾಸುತ
ನ್ವೀವಿಚಚಾರಕಾಚಿತ್ ॥ ಸ್ತನೋತ್ತರೀಯೇಣಕ
ರೋದ್ಧೃತೇನನಿವಾರಯಂತೀಶಶಿನೋಮಯೂಖಾನ್

ಟೀಕಾ॥ ಕಾಚಿತ -ಒಬ್ಬಳೊಬ್ಬಳಾದಂಥ, ತನ್ವೀ-ಸ್ತ್ರೀಯು. ವನದ್ರುಮಾಣಾಂ-ವನ-ಉದ್ಯಾನವನದಲ್ಲಿರುವ, ದ್ರುಮಾಣಾಂ-ವೃಕ್ಷಗಳ, ಛಾಯಾಸು-ನೆರಳುಗಳಲ್ಲಿ, ವಿಶ್ರಮ್ಯವಿಶ್ರಮ್ಯ-ವಿಶ್ರಾಂತಿಯನ್ನುಹೊಂದಿ ವಿಶ್ರಾಂತಿಯನ್ನುಹೊಂದಿ, ಕರೋದ್ಧೃತೇನ-ಕರ-ಕೈಗಳಿಂದ, ಉದ್ಧೃತೇನ-ಆಚೆಗೆ ಹೊಂದಿಸಲ್ಪಟ್ಟಂಥ, ಸ್ತನೋತ್ತರೀಯೇಣ-ಸ್ತನ-ಕುಚಗಳ, ಉತ್ತರೀಯೇಣ ಬಹಿರ್ವಸ್ತ್ರದಿಂದ, ಶಶಿನಃ-ಚಂದ್ರನ, ಮಯೂಖಾನ್-ಕಿರಣಗಳನ್ನು, ನಿವಾರಯನ್ತೀ-ಹೋಗಲಾಡಿಸುವಂಥಾವಳಾಗಿ, ವಿಚಚಾರ-ಸಂಚಾರಮಾಡುವಂಥಾವಳಾದಳು. ಏತೇನದಶಾವಸ್ಥಾಪಕ್ಷೇ-ಷಷ್ಠೀಮನ್ಮಥಾವಸ್ಥಾ. ತಯಾಚತುರ್ಥೀಜಾಗರಾವಸ್ಥಾ ತಥಾ ಉತ್ತರೀಯೇಣಶಶಿಮಯೂಖಾನಾಮನಿವಾರಣೇ ಚಿತ್ತವಿವೇಕಾಭಾವಾಚ್ಚಿತ್ತವಿಭ್ರಮಪ್ರತೀತೇಃ ಕಾಮಶಾಸ್ತ್ರೋಕ್ತದ್ವಾದಶಾವಸ್ಥಾಪಕ್ಷೇ ಉನ್ಮಾದಾವಸ್ಥಾಸೂಚ್ಯತೇ. ತನ್ವೀತ್ಯನೇನಕಾರ್ಶ್ಯಾವಸ್ಥಾಕಥಿತಾ. ಉಪಜಾತಿವೃತ್ತಂ. ॥ ೨೧ ॥

ತಾತ್ಪರ್ಯ—ವಿಪ್ರಲಂಭವರ್ಣನೆಗೆ ಪೂರ್ವಭಾವಿಯಾಗಿ ಮನ್ಮಥಾವಸ್ಥೆಯನ್ನು ಹೊಂದಿರುವ ಸ್ತ್ರೀಯು ಚಿತ್ತವಿಭ್ರಮ ವಿಲಾಸವನ್ನು ಹೇಳುತ್ತಾನೆ. ಅದು ಹೇಗಂದರೆ—ಒಬ್ಬಾಬ್ಬಳೊಬ್ಬಳಾದ ಸ್ತ್ರೀಯು ವಿರಹೋತ್ಕಂಠಿತಳಾಗಿ ಕಾಮಸಂತಾಪವನ್ನು ಸಹಿಸಲಾರದೆ ನಾಯಕಾನ್ವೇಷಣವನ್ನು ಮಾಡುತ್ತಾ ವನದಲ್ಲಿ ಸಂಚಾರಮಾಡುವಳಾಗಿ ಉದ್ಯಾನವನದಲ್ಲಿರುವ ಛಾಯಾಪ್ರಧಾನಗಳಾದ ವೃಕ್ಷಗಳ ಕೆಳಗೆ ಅಲ್ಲಲ್ಲಿಯೇ ಕೂತುಕೊಂಡು ಶ್ರಮನಿವಾರಣೆಯನ್ನು ಮಾಡಿಕೊಳ್ಳುತ್ತಾ ತಾನು ಸಂಚರಿಸುವ ಕಾಲದಲ್ಲಿ ತನ್ನ ವಕ್ಷೋಜಗಳಲ್ಲಿ ಸಕ್ತವಾದ ಚಂದ್ರಕಿರಣಗಳನ್ನು ಕೈಗಳಿಂದ ಆಚ್ಛಾದನೆ ಮಾಡುತ್ತಾ ಉರೋಜಗಳ ಉತ್ತರೀಯದಿಂದ ಹೋಗಲಾಡಿಸುತ್ತಲಿದ್ದಾಳೆ (ಅಂದರೆ) ಅನಿವಾರ್ಯವಾದ ಚಂದ್ರಕಿರಣ

ನಿವಾರಣೆಯನ್ನು ತಿಳಿಯದೆ ಭ್ರಮೆಯಿಂದ ಕಾಮುಕನು ತಾಪ ತಪ್ತಳಾಗಿ ಸ್ನಾನಾಂಗಣದಲ್ಲಿ ಸಮಗ್ರಜ್ಯೋತಿಷ್ಯ ನಿವಾರಣೆಯನ್ನು ಮಾಡುತ್ತಾಳೆ. ಇದರಿಂದ ಮನ್ಮಥಾವಸ್ಥೆಯನ್ನು ವರ್ಣನೆ ಮಾಡಿದಂತಾಯಿತು. ಆ ಮನ್ಮಥಾವಸ್ಥೆಯು ಹತ್ತು ಅಥವಾ ಹನ್ನೆರಡು ಪ್ರಕಾರವುಳ್ಳದ್ದಾಗಿ ಇದೆ. ಅವು ಯಾವುವೆಂದರೆ ಚಕ್ಷುಃ ಪ್ರೀತಿ ೧ ಮನಸ್ಸಂಗ ೨ ಸಂಕಲ್ಪ ೩ ಪ್ರಲಾಪ ೪ ಜಾಗರ ೫ ಕಾರ್ಶ್ಯ ೬ ಅರತಿ ೭ ಲಜ್ಜಾತ್ಯಾಗ ೮ ಸಂಜ್ವರ ೯ ಉನ್ಮಾದ ೧೦ ಮೂರ್ಛನ ೧೧ ಚರಮ ೧೨ ಈ ಪ್ರಕಾರವಾದ ದ್ವಾದಶಾವಸ್ಥೆಗಳಲ್ಲಿ ಹತ್ತನೆಯದಾದ ಉನ್ಮಾದಾವಸ್ಥೆಯನ್ನು ವರ್ಣನೆ ಮಾಡಿದ್ದಾನೆಂದು ತಾತ್ಪರ್ಯ. || ೨೧ ||

ಶ್ಲೋ|| ಅದರ್ಶನೇದರ್ಶನಮಾತ್ರಕಾಮಾದೃಷ್ಟ್ವಾಪರಿಷ್ವಂ
ಸುಖೈಕಲೋಲಾ || ಆಲಿಂಗಿತಾಯಾಂಪುನರಾಯತಾ
ಕ್ಷ್ಯಾಮಾಶಾಸ್ಮಹೇವಿಗ್ರಹಯೋರಭೇದಂ || ೨೨ ||

ಟೀಕು|| ಅದರ್ಶನೇ-ನೋಡದೆ ಇರುವ ಕಾಲದಲ್ಲಿ, ದರ್ಶನಮಾತ್ರಕಾಮಾ, ದರ್ಶಮಾತ್ರ-ನೋಡುವ ಮಾತ್ರದಲ್ಲಿ, ಕಾಮಾ-ಅಪೇಕ್ಷೆಯುಳ್ಳಂಥ, ದೃಷ್ಟ್ವಾ-ನೋಡಿ, ಪರಿಷ್ವಂಗಸುಖೈಕಲೋಲಾ- ಪರಿಷ್ವಂಗ ಆಲಿಂಗನದ, ಸುಖ-ಆನಂದದಲ್ಲಿ, ಏಕ-ಮುಖ್ಯವಾಗಿ, ಲೋಲಾ-ಆಸಕ್ತೆವುಳ್ಳಂಥಾ, ಯಾ-ಯಾವ ಸ್ತ್ರೀಯೋ, ಪುನಃ- ತಿರುಗಾ, ತಸ್ಯಾಂ- ಅಂಥಾ, ಆಯತಾಕ್ಷ್ಯಾಂ-ಆಯತ-ವಿಸ್ತಾರವಾದ, ಅಕ್ಷ್ಯಾಂ ನೇತ್ರಗಳುಳ್ಳಂಥಾಸ್ತ್ರೀಯು, ಆಲಿಂಗಿತಾಯಾಂಸತ್ಯಾಂ ಆಲಿಂಗನೆಯನ್ನು ಮಾಡಿಕೊಂಡವಳಾಗುತ್ತಿರಲಾಗಿ, ವಿಗ್ರಹಯೋಃ-ಶರೀರಗಳ, ಅಭೇದಂ ಐಕ್ಯವನ್ನು ಅಂದರೆ-ಕೂಡಿರುವಿಕೆಯನ್ನು, ಆಶಾಸ್ಮಹೇ-ಅಪೇಕ್ಷಿಸುತ್ತೇವೆ. ವೃತ್ತಮುಪಜಾತಿಃ ಚಿರಕಾಲವಿಚ್ಛಿನ್ನ ನಾಯಕಾದರ್ಶನ ಔತ್ಸುಕ್ಯಪೂರ್ವಕ ದರ್ಶನಾಲಿಂಗನಾದಿ ಬಾಹ್ಯರತಮು ಕ್ತ್ವಾದೃಢಾಲಿಂಗನ ಜನಿತ ಶರೀರಾಭೇದತ್ವೋಕ್ತೇಃ ಅಭ್ಯಂತರಸುರತವರ್ಣನಾತ್ ಪ್ರವಾಸಶೃಂಗಾರಃ ತದುಕ್ತಂ ರತಿರಹಸ್ಯೇ. |೨೨|

ತಾತ್ಪರ್ಯ—ಬಹುಕಾಲದಿಂದ ಪ್ರಿಯಳಿಂದ ವಿರಹಿತನಾದ ಕಾಮುಕ ಪುರುಷನು ಹೇಳುತ್ತಾನೆ. ಯಾವ ಸ್ತ್ರೀಯಾದರೂ ಪ್ರಥಮದಲ್ಲಿ ಪ್ರಿಯನನ್ನು ನೋಡೋಣ ಮಾತ್ರದಲ್ಲಿ ಇಷ್ಟವೂ, ನೋಡಿದ ಮೇಲೆ ಆಲಿಂಗನ

ಮಾಡಿಕೊಳ್ಳಬೇಕೆಂತಲೂ ಇರುತ್ತಾಳೋ, ಅಥವಾ ಸ್ತ್ರೀಯು ಆಲಿಂಗನ ಮಾಡಿಕೊಂಡ ಅನಂತರ ಉಭಯ ಶರೀರದ ಅಭೇದವನ್ನು ಅಂದರೆ ಕೂಡು ವಿಕೆಯನ್ನು ಅಪೇಕ್ಷಿಸುತ್ತೇನೆ. ಹೀಗೆ ಹೇಳೋಣದರಿಂದ ನಾಯಕಾ ವಿರಹ ಸಂತಪ್ತನಾದ ಕಾಮಿಯು ಮೊದಲು ದರ್ಶನಾಲಿಂಗನಾದಿಗಳನ್ನು ಹೇಳಿ ಅನಂತರ ಸುರತ ಸಂರಂಭವನ್ನು ಹೇಳಿದ್ದಾನಾದ್ದರಿಂದ ಪ್ರವಾಸ ಶೃಂಗಾರವನ್ನು ಹೇಳಿದಂತಾಯಿತು ಎಂದು ತಾತ್ಪರ್ಯವು. ॥ ೨೦ ॥

ಶ್ಲೋ ॥ ಮಾಲತೀಶಿರಸಿಜೃಂಭಣಂಮುಖೇ ಚಂದನಂವಪುಷಿ
ಕುಂಕುಮಾವಿಲಂ ॥ ವಕ್ಷಸಿಪ್ರಿಯತಮಾಮದಾಲ ಸಾ
ಸ್ವರ್ಗಏಷಪರಿಶಿಷ್ಟ ಆಗಮಃ ॥ ೨೧ ॥

ಟೀಕು॥ ಶಿರಸಿ- ತಲೆಯಲ್ಲಿ, ಮಾಲತೀ- ಮಾಲತೀಪುಷ್ಪವು, ಮುಖೇ- ಮುಖವಲ್ಲಿ, ಜೃಂಭಣಂ ಮದನಮದಜನಿತವೇಗವಿಲಾಸವು, ವಪುಷಿ- ಶರೀರ ದಲ್ಲಿ, ಕುಂಕುಮಾವಿಲಂ- ಕುಂಕುಮ- ಕುಂಕುಮಕೇಸರಿಯಿಂದ, ಆವಿಲಂ- ವ್ಯಾಪ್ತವಾದಂಥ, ಚಂದನಂ-ಚಂದನ ಸುಗಂಧವು, ವಕ್ಷಸಿ ವಕ್ಷಸ್ಥಳದಲ್ಲಿ, ಮದಾಲಸಾ- ಮದ- ಕಾಮಮದದಿಂದ, ಆಲಸಾ- ಮತ್ತಳಾದ, ಪ್ರಿಯತಮಾ- ಗಾಢಾಲಿಂಗನ ಮತ್ತಕಾಶಿನಿಯು, ಏಷಃ- ಈ ಸಮುದಾಯವು, ಸ್ವರ್ಗಃ- ಸ್ವ ರ್ಗವು, ಸ್ವರ್ಗಸ್ತು-ಸ್ವರ್ಗವಾದರೋ, ಪರಿಶಿಷ್ಟಆಗಮಃ ಪರಿಶಿಷ್ಟ - ಶೃಂಗಾ ರರಸಾನಭಿಜ್ಞತೆಯುದೆಸೆಯಿಂದ, ಆಗಮಃ- ಆಗಮತಂತ್ರವುಳ್ಳಂಥಾದ್ದು ॥ ೨೧

ತಾತ್ಪರ್ಯ — ಕಾಂತಾಲಿಂಗನದಿಂದ ಸ್ವರ್ಗಸುಖವೆಂಬುವದನ್ನು ಹೇಳುತ್ತಾನೆ. ಹ್ಯಾಗಂದರೆ— ಯಾವ ಉತ್ತಮ ನಾಯಕಿಯಾದರೋ ತನ್ನ ಶಿರಸ್ಸಿನಲ್ಲಿ ಮಾಲತೀ ಕುಸುಮವನ್ನು ಅಲಂಕಾರ ಮಾಡಿಕೊಂಡು ತನ್ನ ಮುಖದಲ್ಲಿ ವಿಜೃಂಭಿಸುತ್ತಲಿರುವ ಮನ್ಮಥಸೂಚಕವಾದ ಕಳೆಗಳಿಂದ ಕೂಡಿ, ಕುಂಕುಮಕೇಸರದಿಂದ ವ್ಯಾಪ್ತ ಅಂದರೆ ಮಿಶ್ರವಾದ ಚಂದನ ಲೇಪನೆಯನ್ನು ಮಾಡಿಕೊಂಡು, ತನ್ನ ಕಾಂತನ ವಕ್ಷಸ್ಥಲವನ್ನು ಗಾಢಾ ಲಿಂಗನವನ್ನು ಮಾಡಿಕೊಳ್ಳುತ್ತಾಳೋ ಈ ಮೊದಲಾದ ಉಪಸ್ಕರಗಳಿಂದ ಕೂಡಿದ ಕಾಂತಾಲಿಂಗನವು ಸ್ವರ್ಗವು ಅಂದರೆ ಸ್ವರ್ಗಸುಖಕ್ಕೆ ಸಮಾನ ವಾದದ್ದೆಂದು ಭಾವವು. ಸ್ವರ್ಗಪದ ವಾಚ್ಯಲಿಂಗವಾದ ಸ್ವರ್ಗ ಲೋಕವು

ಶೃಂಗಾರರಸಾನಭಿಜ್ಞರಿಗೆ ಅಗಮ್ಯತಂತ್ರಸಾರವಾದದ್ದು. ಏತೇನ ಶೃಂಗಾರರಸೋದ್ದೀಪನವಿಸಾಮಗ್ರೀಸಮೇತಳಾದ ಸುಂದರಾಂಗಿಯು ಕಾಂತನನ್ನು ದೃಢತರವಾಗಿ ಆಲಿಂಗನೆ ಮಾಡಿಕೊಳ್ಳೋಣವೆ ಸ್ವರ್ಗಸುಖವೆಂದು ತಾತ್ಪರ್ಯ. ||೨೩||

ಶ್ಲೋ|| ಪ್ರಾಙ್ಮಾಮೇತಿಮನಾಗನಾಗತರಸಂಜಾತಾಭಿಲಾಷಂ
ತತಸ್ಸವ್ರೀಡಂತದನು ಶ್ಲಥೋದ್ಯಮಮಥಪ್ರಧ್ವಸ್ತ
ಧೈರ್ಯಂಪುನಃ || ಪ್ರೇಮಾರ್ದ್ರಂಸ್ಪೃಹಣೀಯನಿ
ರ್ಭರರಹಃಕ್ರೀಡಾಪ್ರಗಲ್ಭಂ ತತೋನಿಸ್ಸಂಗಾಂಗ
ವಿಕರ್ಷಣಾಧಿಕಸುಖಂರಮ್ಯಂಕುಲಸ್ತ್ರೀರತಂ ||೨೪||

ಟೀಕು|| ಪ್ರಾಕ್-ಮೊದಲು, ಮನಾಕ್-ಕೊಂಚವಾಗಿ, ಮಾಮಾ-ಬೇಡ ಬೇಡ, ಇತಿ-ಹೀಗೆಂಬವಾಗಿ, ಅನಾಗತರಸಂ ಅನಾಗತ-ಹುಟ್ಟದೆ ಇರತಕ್ಕಂಥಾ, ರಸಂ ಶೃಂಗಾರರಸವುಳ್ಳಂಥ, ತತಃ-ಅನಂತರದಲ್ಲಿ, ಜಾತಾಭಿಲಾಷಂ-ಜಾತ-ಹುಟ್ಟಿದಂಥ, ಅಭಿಲಾಷಂ ಇಚ್ಛೆವುಳ್ಳಂಥ, ತದನು-ಅನಂತರದಲ್ಲಿ, ಸವ್ರೀಡಂ-ಲಜ್ಜೆಯಿಂದ ಕೂಡಿದಂಥ, ಶ್ಲಥೋದ್ಯಮಂ-ಶ್ಲಥ-ಶಿಥಿಲವಾದಂಥ, ಉದ್ಯಮಂ-ವ್ಯವಸಾಯವುಳ್ಳಂಥ, ಅಥ-ಅನಂತರದಲ್ಲಿ, ಪ್ರಧ್ವಸ್ತಧೈರ್ಯಂ-ಪ್ರಧ್ವಸ್ತ-ನಾಶವಾದಂಥ, ಧೈರ್ಯಂ ಧೈರ್ಯವುಳ್ಳಂಥ, ಪುನಃ-ಅನಂತರದಲ್ಲಿ, ಪ್ರೇಮಾರ್ದ್ರಂ-ಪ್ರೇಮ-ಪ್ರಣಯರಸದಿಂದ. ಆರ್ದ್ರಂ-ನೆನೆಯಿಸಲ್ಪಟ್ಟಂಥ, ತತಃ-ಅನಂತರದಲ್ಲಿ, ಸ್ಪೃಹಣೀಯನಿರ್ಭರರಹಃಕ್ರೀಡಾಪ್ರಗಲ್ಭಂ-ಸ್ಪೃಹಣೀಯ-ಅನ್ಯೋನ್ಯ ಅಭಿಲಾಷೆಯುಳ್ಳಂಥ, ನಿರ್ಭರ-ಅಧಿಕವಾದಂಥ, ರಹಃಕ್ರೀಡಾ ರಹಃ-ಏಕಾಂತದ, ಕ್ರೀಡಾ-ಗಂಭೀರಗವ್ಯಾಪಾರಗಳಿಂದ, ಪ್ರಗಲ್ಭಂ-ಪ್ರೌಢವಾದಂಥ, ತತಃ-ಅನಂತರದಲ್ಲಿ, ನಿಸ್ಸಂಗಾಂಗವಿಕರ್ಷಣಾಧಿಕಸುಖಂ-ನಿಸ್ಸಂಗ-ನಿರರ್ಗಳವಾಗಿ. ಅಂಗ-ಅವಯವಗಳ (ಕುಚಾದ್ಯವಯವಗಳ) ವಿಕರ್ಷಣ-ಸಮ್ಮರ್ದನದಿಂದ, ಅಧಿಕ-ಹೆಚ್ಚಾದ, ಸುಖಂ-ಆನಂದಸುಖವುಳ್ಳಂಥ, ಕುಲಸ್ತ್ರೀರತಂ-ಕುಲಸ್ತ್ರೀ-ಕುಲಾಂಗನೆಯರ, ರತಂ-ಕ್ರೀಡೆಯು, ರಮ್ಯಂ-ಮನೋಹರವಾದಂಥಾದ್ದು. ಏತಚ್ಚ ಪ್ರಥಮಸಮಾಗಮಪರತ್ವೇನ ದ್ರಷ್ಟವ್ಯಂ ಅನ್ಯಥಾತಥೋಕ್ತವ್ಯವಹಾರಸಂಭವಾದಿತಿಭಾವಃ. ಕುಲಶಬ್ದವ್ಯಾವೃತ್ತಿಸಂಭೋಗಸ್ಯದಿತಿ ಆರಭ್ಯಪ್ರಾಗಲ್ಭ್ಯಘಟಿತತ್ವೇನೋಕ್ತವಿಲ

ಕ್ಷಣೋಕ್ತ್ಯಾ ಅನ್ಯಾದೃಶೋ ದ್ರಷ್ಟವ್ಯಃ, ನಾಯಿಕಾ ಮುಗ್ಧಾ ನಾಯಕಸ್ತು ಉತ್ತಮೋ ಅನುಕೂಲಃ ಕಾಮತಂತ್ರೇಷು ಉದಾಸುದ್ಯಾಪ್ಯನಾ ಮುಗ್ಧಾ ಲಜ್ಜಾವಿಜಿತಮನ್ಮಥಾ ಇತಿ ಲಕ್ಷಣಾತ್ ಸಂಭೋಗಲಕ್ಷಣಮುಕ್ತಂ, ರತಿರಹಸ್ಯೇ- ಶ್ಲೋಕೇ! ಅನುಕೂಲೌ ನಿಷೇಧೇತಿ ಯತ್ರಾನ್ಯೋನ್ಯಂ ವಿಲಾಸಿನೌ । ದರ್ಶನಸ್ಪರ್ಶನಾದೀನಿ ಸ ಸಂಭೋಗ ಉದಾಹೃತ ಇತಿ

ಅತ್ರ ಮಮೇತಿ ವಾಗಾರಂಭಸೂಚಿತೈಃ ಅನುಭಾವೈಃ ಜಾತಾಭಿಲಾಷಮಿತ್ಯುಕ್ತೇನ ರತ್ಯಾಖ್ಯಸ್ಥಾಯಿಭಾವೇನ ಹ್ರೀಡಿತೇತ್ಯನೇನೋಪಲಕ್ಷಿತೈಃ ಸಂಚಾರಿಭಾವೈಃ ಅವಶಿಷ್ಟೈರ್ವಿಶೇಷಣೈಃ ಯಥಾಯಥಂ ವಾಗನ್ಯೈಃ ಅನುಭಾವಾದಿವಿಶೇಷೈಃ ಕುಲಸ್ತ್ರೀ ಇತ್ಯುಕ್ತೇನ ಆಲಂಬನವಿಭಾವೇನ ಪ್ರತೀಯಮಾನೋ ರಸಸಾರ್ವಭೌಮಃ ಶೃಂಗಾರಃ ಸಸ್ವಾಂಗಾಂಗವಿಕರ್ಷಣಾಧಿಕಸುಖಮಿತ್ಯನೇನ ಪರಿತೋಷಂ ಪ್ರಾಪ್ನೋತೀತಿ ವೇದಿತವ್ಯಂ. ಶಾರ್ದೂಲವಿಕ್ರೀಡಿತವೃತ್ತಂ.

ತಾತ್ಪರ್ಯ—ಈ ಶ್ಲೋಕದಲ್ಲಿ ಅಭ್ಯಂತರ ಶೃಂಗಾರವನ್ನು ವರ್ಣಿಸುತ್ತಾನೆ. ಅದು ಹೇಗೆಂದರೆ—ಅನುಕೂಲವಾದ ನಾಯಕಾ ನಾಯಕಿಯರ ಪ್ರಾಥಮಿಕವಾದ ಶೃಂಗಾರ ಸಂಭೋಗಾದಿಗಳಲ್ಲಿ ನಾಯಕಿಯು ಪ್ರಥಮಾರಂಭದಲ್ಲಿ ನಿಷೇಧೋಕ್ತಿಯನ್ನು ಹೇಳುತ್ತಲೂ, ಅನಂತರದಲ್ಲಿ ಸಂಭೋಗ ಇಚ್ಛೆಯುಳ್ಳಂಥಾವಳಾಗಿ ನಾಯಕಾನುವೃತ್ತಿಯಾದ ಕಾಲ ನಿರರ್ಗಳ ಅಂಗ ಪರಿಚಯ ಕುಚಾವಮರ್ದನೆಯಿಂದ ಶಿಥಿಲ ಪ್ರಯತ್ನವುಳ್ಳವಳಾಗಿ ಅನಂತರ ಪ್ರಣಯರಸದಿಂದ ಪ್ರಿಯನನ್ನು ನೆನಸುತ್ತಾ ಅಧಿಕ ಕೇಳೀಲಂಪಟದಲ್ಲಿ ಕೂಡಿಕೊಂಡಿರುವ ಕುಲಾಂಗನೆಯರ ರತಿಸಂಭೋಗವು ಅತ್ಯಂತ ಗಮನೀಯವಾದದ್ದು. ಆದರೆ ಮುಗ್ಧಾಂಗನೆಯರು ಲಜ್ಜೆಯಿಂದ ಜಿತಮನ್ಮಥರಾಗಿ ಪ್ರಥಮಾರಂಭದಲ್ಲಿ ಕಾಮತಂತ್ರ ನಿಷೇಧೋಕ್ತಿಯನ್ನು ತೋರಿಸಿದಾಗ್ಯೂ ಅನಂತರದಲ್ಲಿ ಪ್ರೌಢತರವಾದ ಸಂಭೋಗದಿಂದ ಪರಮಾನಂದವನ್ನು ಹೊಂದಿಸುತ್ತಾರೆ. ಇದು ಕುಲಾಂಗನೆಯರ ರತಿಸಂಭೋಗ ಲಕ್ಷಣವೆನ್ನಿಸುವದು. ನಾಯಕಾಲಕ್ಷಣ ಸಂಭೋಗ ಶೃಂಗಾರ ರಸೋತ್ಪತ್ತಿ ಮುಂತಾದ ವಿಷಯಗಳು ಈ ಶ್ಲೋಕದ ಅರ್ಥಾನಂತರದಲ್ಲಿ ಅವತರಣಿಕಾಪ್ರಾಯವಾಗಿ ನಿಗಮನವನ್ನು ಮಾಡಿ ಬರೆದಿರುತ್ತದೆ ಆದ್ದರಿಂದ ಸರ್ವವೂ ವಿದಿತವಾಗಿದೆ. || ೨೪ ||

ಶ್ಲೋ॥ ಉರಸಿನಿಪತಿತಾನಾಂಸ್ರಸ್ತಧಮ್ಮಿಲ್ಲಕಾನಾಂ । ಮುಕುಳಿತನಯನಾನಾಂಕಿಂಚಿದುನ್ಮೀಲಿತಾನಾಂ ॥ ಉಪರಿಸುರತಖೇದಸ್ವಿನ್ನಗಂಡಸ್ಥಲಾನಾ । ಮಧರಮಧು ವಧೂನಾಂಭಾಗ್ಯವಂತಃ ಪಿಬಂತಿ ॥ ೨೫ ॥

ಟೀಕ ॥ ಉರಸಿ ವಕ್ಷಸ್ಥಳದಲ್ಲಿ, ನಿಪತಿತಾನಾಂ-ಬಿದ್ದಿರುವಂಥ, ಸ್ರಸ್ತಧಮ್ಮಿಲ್ಲಿಕಾನಾಂ-ಸ್ರಸ್ತ-ಜಾರಿದಂಥ, ಧಮ್ಮಿಲ್ಲಕಾನಾಂ-ಕೇಶಪಾಶಗಳುಳ್ಳಂಥ. ಮುಕುಳಿತನಯನಾನಾಂ-ಮುಕುಳಿತ-ಮುಚ್ಚಲ್ಪಟ್ಟಂಥ, ನಯನಾನಾಂ-ನೇತ್ರಗಳುಳ್ಳಂಥ, ಕಿಂಚಿತ್-ಸ್ವಲ್ಪವಾಗಿ, ಉನ್ಮೀಲಿತಾನಾಂ-ತೆರೆಯಲ್ಪಟ್ಟಂಥ ನೇತ್ರಗಳುಳ್ಳ, ಉಪರಿಸುರತಖೇದಸ್ವಿನ್ನಗಂಡಸ್ಥಲಾನಾಂ ಉಪರಿಸುರತ-ಪುರುಷಾಯಿತದ, ಖೇದ-ಆಯಾಸದಿಂದ, ಸ್ವಿನ್ನ-ನೆನದಂಥ, ಗಂಡಸ್ಥಲಾನಾಂ ಕಪೋಲಭಾಗಗಳುಳ್ಳಂಥ, ವಧೂನಾಂ-ಸ್ತ್ರೀಯರುಗಳ, ಅಧರಮಧು-ಅಧರ ಅಧರಬಿಂಬದ, ಮಧು-ಅಮೃತವನ್ನು, ಭಾಗ್ಯವಂತಃ-ಭಾಗ್ಯವುಳ್ಳಂಥಾ ಮನುಷ್ಯರು, ಪಿಬಂತಿ-ಪಾನಮಾಡುತ್ತಾರೆ. ಸ್ವಭಾವೋಕ್ತ್ಯಲಂಕಾರಃ. ಮಾಲಿನೀವೃತ್ತಂ. ।೨೫।

ತಾತ್ಪರ್ಯ— ಈ ಶ್ಲೋಕದಲ್ಲಿ ರತ್ಯಂತರ ಶೃಂಗಾರವನ್ನು ವರ್ಣನೆಮಾಡುತ್ತಾನೆ. ಅದು ಹೇಗೆಂದರೆ—ಸ್ತ್ರೀಯು ಉಪರಿಸುರತವನ್ನು ಮಾಡಿ ಆಯಾಸದಿಂದ ಪುರುಷನ ವಕ್ಷಸ್ಥಳದಲ್ಲಿ ಮಲಗಿಕೊಂಡು ಕೆನ್ನೆಗಳು ಬೆವರಿ ತಲೆ ಕೂದಲು ಗಂಟುಬಿಚ್ಚಿಹೋಗಿ ಅರೆಕಣ್ಣು ಮುಚ್ಚಿಕೊಂಡು ಸುಖಪಾರವಶ್ಯವನ್ನು ಹೊಂದಿ ಇರುವ ಇಂಥಾ ಸ್ತ್ರೀ ಮುಖವನ್ನು ನೋಡಿ ಅವಳ ಅಧರ ಪಾನವನ್ನು ಭಾಗ್ಯವಂತನಾದವನು ಮಾಡುತ್ತಾನೆ. ಅಥವಾ ಭಾಗ್ಯಶಾಲಿಗಳು ಪಾನಮಾಡುತ್ತಾರೆ. ಪ್ರೌಢಸ್ತ್ರೀಯರುಗಳು ಪುರುಷರಿಗೆ ಬದಲಾಗಿ ತಾವೇ ಸುರತವನ್ನು ಮಾಡುತ್ತಾರೆ. ಇದು ಉಪರಿಸುರತವೆನ್ನಿಸುವದು. ಇದು ಕಾಮಶಾಸ್ತ್ರದಲ್ಲಿ ಹೇಳಿದೆ.

ಶ್ಲೋ॥ ಆಮೀಲಿತನಯನಾನಾಂಯಸ್ಸುರತರಸೋನು ಸಂವಿದಂಭಾತಿ ॥ ಮಿಥುನೈರ್ಮಿಥೋವಧಾರಿತಮವಿತಥಮಿದಮೇವಕಾಮನಿರ್ವಹಣಂ ॥ ೨೬ ॥

ಟೀಕು॥ ಅಮಿಾಲಿತನಯನಾನಾಂ-ಅಮಿಾಲಿತ-ಮುಚ್ಚಲ್ಪಟ್ಟ, ನಯನಾನಾಂ- ನೇತ್ರಗಳುಳ್ಳ ಯೌವನಸ್ತ್ರೀಪುರುಷರುಗಳ, ಯಃ- ಯಾವ. ಸುರತರಸಃ-ಸುರತಃಸ್ವಾದವು, ಅನುಸಂವಿದಂಯಥಾತಥಾ - ಬುದ್ಧಿಗೋಚರವಾಗೋಣವು ಹೇಗೋ ಹಾಗೆ, ಅಥವಾ ಬುದ್ಧಿಗೋಚರವಾಗಿಯೋ, ಭಾತಿ-ಪ್ರಕಾಶಿಸುತ್ತೋ, ಮಿಥುನೈಃ-ಸ್ತ್ರೀಪುರುಷರಿಂದ, ಅವಿತಥಂ-ವ್ಯರ್ಥವಾಗದೆ ಇರತಕ್ಕಂಥ, ಇದಮೇವ-ಈ ಶೃಂಗಾರರಸಾನುಭವವೆ, ಕಾಮಸಿರ್ವಹಣಂ-ಕಾಮ-ಮನ್ಮಥನಿಗೆ, ನಿರ್ವಹಣಂ-ಪ್ರತಿಷ್ಠಾಪನೆಯು ಅಥವಾ ಪುರುಷಾರ್ಥ ಪ್ರಯೋಜನವು. ಅವಧಾರಿತಂ ನಿಶ್ಚಯಿಸಲ್ಪಟ್ಟತು ॥೬೬॥

ತಾತ್ಪರ್ಯ— ಈ ಶ್ಲೋಕದಲ್ಲಿ ಸ್ತ್ರೀ ಪುರುಷರು ಜ್ಞಾನಪೂರ್ವಕವಾಗಿ ಸುರತವನ್ನು ಮಾಡಬೇಕು. ಇಲ್ಲವಾದರೆ ಆ ಸುರತವು ವ್ಯರ್ಥವಾದದ್ದೆಂದು ಹೇಳುತ್ತಾನೆ. ಅದು ಹೇಗೆಂದರೆ— ಕಣ್ಣುಗಳನ್ನು ಮುಚ್ಚಿಕೊಂಡು ಕತ್ತಲೆಯಲ್ಲಿ ಮಾಡುವ ಸುರತವು ಪ್ರಯೋಜನವಿಲ್ಲ. ಸ್ತ್ರೀ ಪುರುಷರಿಂದ ಜ್ಞಾನಪೂರ್ವಕವಾಗಿ ಅನುಭವ ಮಾಡುವ ಸುರತರಸವು ಇದೇ ಮನ್ಮಥರಾಯನ ಪ್ರತಿಷ್ಠೆಯನ್ನು ಸುವದು ಅಂದರೆ ಜ್ಞಾನಪೂರ್ವಕವಾಗಿ ಸುರತಮಾಡಿ ಶೃಂಗಾರರಸವನ್ನು ಅನುಭವಿಸುವದೆ ಸ್ತ್ರೀಪುರುಷರ ಪುರುಷಾರ್ಥ ಪ್ರಯೋಜನವೆಂದು ತಾತ್ಪರ್ಯ. ॥ ೨೬ ॥

ಶ್ಲೋ॥ ಇದಮನುಚಿತಮಕ್ರಮಶ್ಚ ಪುಂಸಾಂಯದಿಹಜರಾಸ್ವಪಿಮನ್ಮಥವಿಕಾರಾಃ ॥ ತದಪಿಚನಕೃತಂನಿತಂಬಿನೀನಾಂಸ್ತನಪತನಾದಧಿಜೀವಿತಂರತಂವಾ ॥ ೨೭ ॥

ಟೀಕು॥ ಇಹ- ಈಲೋಕದಲ್ಲಿ, ಪುಂಸಾಂ ಪುರುಷರುಗಳಿಗೆ, ಜರಾಸ್ವಪಿ-ಮುದುಕತನದಲ್ಲಿಯೂ ಕೂಡ, ಇದಂ- ಇದು, ಅನುಚಿತಂ- ಅಯೋಗ್ಯವು, ಅಕ್ರಮಶ್ಚ-ನಿರ್ಮರ್ಯಾದವಾದದ್ದು. ಮನ್ಮಥವಿಕಾರಾಃಯದಿ - ಮನ್ಮಥವಿಕಾರಗಳೆಂಬುವಂಥಾವುಗಳು, ನಿತಂಬಿನೀನಾಂ ಸ್ತ್ರೀಯರುಗಳಿಗೆ, ತದಪಿಹ - ಅದೂಕೂಡ, ನಕೃತಂ-ಮಾಡತಕ್ಕದ್ದಲ್ಲವು, ರತಂ-ರತಿಯು, ಸ್ತನಪತನಾವಧಿ ಸ್ತನ-ಕುಚಗಳ, ಪತನಾವಧಿ- ಇಳಿಯಬೀಳುವ ಪರ್ಯಂತವೂ, ಜೀವಿತಂ-ಬದುಕಿ ಇರೋಣವು. ॥೨೭॥

ತಾತ್ಪರ್ಯ— ಸ್ತ್ರೀ ಪುರುಷರು ಸುರತವಾಡುವ ಕಾಲದ ಅವಧಿಯನ್ನು ಹೇಳುತಾನೆ. ಅದು ಹೇಗೆಂದರೆ— ಪುರುಷರಿಗೆ ಜರಾಸ್ವಪಿ

ಪ್ರಾಪ್ತವಾದ ಕಾಲದಲ್ಲಿ, ಶೃಂಗಾರವ್ಯಾಪಾರವು ಅಂದರೆ, (ಬಾಹ್ಯಸುರತ ಆಭ್ಯಂತರ ಸುರತಗಳೆಂಬುವ ಕಾಮ ತಂತ್ರಗಳು) ಇದೂ ಕೂಡ ಅನುಚಿತವು; ಅಕ್ರಮವಾಗಿ, ಮತ್ತು ಮರ್ಯಾದಾರಹಿತವಾದದ್ದು. ಹಾಗೆಯೇ ಸ್ತ್ರೀಯರುಗಳಿಗೂ ಸಹ, ಸ್ತನಗಳು ಕೆಳಕ್ಕೆ ಜೋಲು ಬೀಳುವವರೆಗೆ ರತಿಯು ಯೋಗ್ಯವಾದದ್ದು. ಅನಂತರ ಅವರೂ ಕೂಡ ರತಿಮಾಡಬಾರದೆಂದು ತಾತ್ಪರ್ಯವು. ಸ್ತ್ರೀ ಪುರುಷರು ಐವತ್ತೈದು ವರ್ಷವಾದಮೇಲೆ ರತಿಯನ್ನು ಮಾಡಕೂಡದೆಂದು ಕಾಮಶಾಸ್ತ್ರದಲ್ಲಿ ಹೇಳಿದೆ. ಇದು ಸ್ವಭಾವೋಕ್ತ್ಯಲಂಕಾರವು. ॥ ೭೭ ॥

ಪುಷ್ಪಿತಾಗ್ರಾವೃತ್ತಂ ವೃತ್ತಲಕ್ಷಣಂತು.

ಶ್ಲೋ॥ ಅಯುಜಿನಯುಗರೇಫತೋಯಕಾರೋ । ಯುಜಿಚ
ಜರಗಾಶ್ಚ ಪುಷ್ಪಿತಾಗ್ರಾ

ಶ್ಲೋ॥ ರಾಜನ್ ತೃಷ್ಣಾಂಬುರಾಶೇರ್ನಹಿ ಜಗತಿಗತಃ ಕಶ್ಚಿದೇ
ವಾವಸಾನಂ । ಕೋವಾರ್ಥೋರ್ಥೈಃ ಪ್ರಭೂತೈಃ
ಸ್ವವಪುಷಿಗಳಿತೇಯೌವನೇ ಸಾನುರಾಗೇ ॥ ಗಚ್ಛಾ
ಮಸ್ಸದ್ಮತಾವದ್ವಿಕಸಿತ ಕುಮುದೇಂದೀವರಾಲೋಕಿ
ನೀನಾ ! ಮಾಕ್ರಮ್ಯಾಕ್ರಮ್ಯ ರೂಪಂ ಝಟಿತಿನ ಜರ
ಯಾಲುಪ್ಯತೇ ಪ್ರೇಯಸೀನಾಂ ॥ ೭೮ ॥

ಟೀಕು॥ ಹೇರಾಜನ್ ! ಎಲೈ ದೊರೆಯೇ, ಜಗತಿ- ಪ್ರಪಂಚದಲ್ಲಿ, ಕಶ್ಚಿದೇವ- ಯಾವ ಮನುಷ್ಯನೂ, ತೃಷ್ಣಾಂಬುರಾಶೇಃ- ತೃಷ್ಣಾ- ಆಶೆಯೆಂಬ, ಅಂಬುರಾಶೇಃ- ಸಮುದ್ರದ, ಅವಸಾನಂ- ಕೊನೆಯನ್ನು, ನಗತಃ- ಹೊಂದಿದವನಾಗಲಿಲ್ಲವು, ಸ್ವವಪುಷಿ- ಸ್ವ- ತನ್ನ, ವಪುಷಿ ಶರೀರದಲ್ಲಿ, ಸಾನುರಾಗೇ- ಅನುರಾಗದಿಂದ ಕೂಡಿದಂಥ, ಯೌವನೇ- ಪ್ರಾಯವು, ಗಳಿತೇಸತಿ- ಕಳದು ಹೋಗುತ್ತಿರುವಂಥಾದ್ದಾಗುತ್ತಿರಲಾಗಿ, ಪ್ರಭೂತೈಃ- ಅಧಿಕಗಳಾದ, ಅರ್ಥೈಃ- ದ್ರವ್ಯಗಳಿಂದ, ಕೋವಾರ್ಥಃ- ಏನು ಪ್ರಯೋಜನವು ? ಯಾವತ್- ಎಷ್ಟರೊಳಗಾಗಿ, ವಿಕಸಿತಕುಮುದೇಂದೀವರಾಲೋಕಿನೀನಾಂ ವಿಕಸಿತ- ಅರಳಿದಂಥ, ಕುಮುದ ಬಿಳಿನೈದಿಲೆ ಪುಷ್ಪವು, ಇಂದೀವರ- ಕರಿನೈದಿಲೆ ಪುಷ್ಪ ಇವುಗಳೋ

ಪಾದಿಯಲ್ಲಿ, ಆಲೋಕಿನೀನಾಂ ನೋಡುತ್ತಿರುವ, ಪ್ರೇಯಸೀನಾಂ-ಸ್ತ್ರೀಯು ರುಗಳ ರೂಪಂ-ಸೌಂದರ್ಯವು, ಜರಯಾ-ಕಾ ಪ್ಪಿನಿಂದ, ಆಕ್ರಮ್ಯಾಕ್ರಮ್ಯ-ಪದೇಪದೇ ಆಕ್ರಮಿಸಿಕೊಂಡವನ್ನಾಗಿ, ನಲುಪ್ಯತೇ-ಲೋಪವನ್ನು ಹೊಂದುವ ದಿಲ್ಲವೋ, ತಾವತ್-ಅಷ್ಟರೊಳಗಾಗಿ, ಸದ್ಮ- ಮನೆಯನ್ನು, ಗಚ್ಛಾಮಃ-ಹೊಂದೋಣ. ||೩೮||

ತಾತ್ಪರ್ಯ—ಈಶ್ಲೋಕ ಮೊದಲುಗೊಂಡು ಇನ್ನು ಮೂರುಶ್ಲೋಕ ಗಳವರೆಗೂ, ಇರುವ ವಿಷಯವು ರಾಜಸೇವೆಯಲ್ಲಿದ್ದು ಸ್ತ್ರೀ ವಿಯೋಗ ವನ್ನು ಹೊಂದಿದವರು ರಾಜನನ್ನು ಕುರಿತು ಹೇಳುವ ವಿಷಯವಾಗಿದೆ. ಅದು ಹೇಗೆಂದರೆ—ಎಲೈ ರಾಜನೆ! ಲೋಕದಲ್ಲಿ ಆಶೆಯೆಂಬ ಸಮುದ್ರಕ್ಕೆ ಪಾರವೇ ಇಲ್ಲ. ಅನುರಾಗದಿಂದ ಕೂಡಿದಂಥ ಯೌವನವು ಗಳಿತವಾಗಿ ಹೋದನಂತರ ಎಷ್ಟು ಹಣ ಸಂಪಾದಿಸಿದ್ದಾಗ್ಯೂ ನಿಷ್ಪ್ರಯೋಜನವು, ಆದ್ದರಿಂದ ವಿಕಸಿತವಾದ ಬಿಳೆನೈದಿಲೆ ಮತ್ತು ಕರಿನೈದಿಲೆ ಪುಷ್ಪಗಳಂತೆ ನೋಟವುಳ್ಳ ನಮ್ಮ ಕಾಮಿನಿಯರ ಸೌಂದರ್ಯವು. ಜರಾವಸ್ಥೆಯಿಂದ ಆಕ್ರಮಿಸಲ್ಪಡುವದರೊಳಗಾಗಿ ನಮ್ಮ ಮನೆಗಳನ್ನು ಹೊಂದಿ ಸುಖಾನು ಭಾವಿಗಳಾಗುತ್ತೇವೆ. ನಮ್ಮನ್ನು ಬಿಟ್ಟು ಬಿಡು. ಎಂದು ತಾತ್ಪರ್ಯವು ಸ್ರಗ್ಧರಾವೃತ್ತವು. || ೨೮ ||

ಶ್ಲೋ|| ರಾಗಸ್ಯಾಗಾರಮೇಕಂನರಕ ಶತಮಹಾದುಃಖ ಸಂ
ಪ್ರಾಪ್ತಿಹೇತು | ರ್ಮೋಹಸ್ಯೋತ್ಪತ್ತಿಬೀಜಂಜಲ
ಧರಪಟಲಂಜ್ಞಾನತಾರಾಧಿಪಸ್ಯ || ಕಂದರ್ಪಸ್ಯೈಕ
ಮಿತ್ರಂ ಪ್ರಕಟಿತವಿವಿಧಸ್ಪಷ್ಟದೋಷಪ್ರಬಂಧಂ |
ಲೋಕೇಸ್ಮಿನ್ನಹ್ಯನರ್ಥವ್ರಜಕುಲಭವನಂ ಯೌವ
ನಾದನ್ಯದಸ್ತಿ || ೨೯ ||

ಟೀಕು|| ರಾಗಸ್ಯ-ಅನುರಾಗಕ್ಕೆ (ಮತ್ಸರಕ್ಕೆ), ಏಕಂ- ಮುಖ್ಯವಾದ ಅಗಾರಂ- ಮನೆಯ ಸ್ವರೂಪವಾದಂಥ, ನರಕಶತಮಹಾದುಃಖಸಂಪ್ರಾಪ್ತಿ ಹೇತುಃ ನರಕಶತ-ನೂರಾರು ನರಕಗಳಲ್ಲಿ, ಮಹಾ-ಅಧಿಕವಾದ ದುಃಖ-ಯಾ ತನೆಗಳ, ಸಂಪ್ರಾಪ್ತಿ-ಹೊಂದುವಿಕೆಗೆ, ಹೇತುಃ- ಕಾರಣವಾದ, ಮೋಹಸ್ಯ-

ಅಜ್ಞಾನದ, ಉತ್ಪತ್ತಿ-ಜನನಕ್ಕೆ, ಬೀಜಂ-ಅಂಕುರವಾದ, ಜ್ಞಾನತಾರಾಧಿಪಸ್ಯ, ಜ್ಞಾನ-ವಿವೇಕವೆಂಬ, ತಾರಾಧಿಪಸ್ಯ-ಚಂದ್ರನಿಗೆ, ಜಲಧರಪಟಲಂ-ಜಲಧರ-ಮೇಘಗಳ. ಪಟಲಂ-ಸಮುದಾಯಸ್ವರೂಪವಾದ, ಕಂದರ್ಪಸ್ಯ ಮನ್ಮಥನಿಗೆ, ಏಕ ಮುಖ್ಯವಾದ, ಮಿತ್ರಂ-ಸ್ನೇಹಾಸ್ಪದವಾದ, ಪ್ರಕಟಿತವಿವಿಧಸ್ಪಷ್ಟದೋಷಪ್ರಬಂಧಂ-ಪ್ರಕಟಿತ-ಪ್ರಸಿದ್ಧಮಾಡಲ್ಪಟ್ಟ, ವಿವಿಧ ನಾನಾವಿಧಗಳಾದ, ಸ್ಪಷ್ಟ-ಸ್ಫುಟವಾದ ದೋಷ ಪಾಪಗಳ, ಪ್ರಬಂಧಂ-ಕಲ್ಪನೆಯಾದಂಥ (ಕಥಾಸ್ವರೂಪವಾದಂಥ), ಅನರ್ಥವ್ರಜಕುಲಭವನಂ-ಅನರ್ಥ-ಪಾಪಕಾರ್ಯಗಳ, ವ್ರಜ-ಸಮೂಹಗಳಿಗೆ, ಕುಲಭವನಂ-ಜನ್ಮಸ್ಥಾನವಾದಂಥ, ಯೌವನಾತ್-ಪ್ರಾಯಕ್ಕಿಂತಲೂ, ಅನ್ಯತ್-ಬೇರೆಯಾದದ್ದು, ಅಸ್ಮಿನ್ ಲೋಕೇ-ಈ ಪ್ರಪಂಚದಲ್ಲಿ, ನಾಸ್ತಿಹಿ-ಇಲ್ಲವಷ್ಟೆ. ಸ್ರಗ್ಧರಾವೃತ್ತವು. ರೂಪಕಾಲಂಕಾರವು. ||೬೯||

ತಾತ್ಪರ್ಯ – ಯೌವನವು ಸಕಲ ಪಾಪಗಳಿಗೂ ಕಾರಣಭೂತವಾದದ್ದೆಂಬ ವಿಷಯವನ್ನು ಹೇಳುತ್ತಾನೆ. ಈ ಯೌವನವು ಸ್ತ್ರೀಯರಲ್ಲಿ ತನಗೂ ತನ್ನಲ್ಲಿ ಸ್ತ್ರೀಯರಿಗೂ ಹುಟ್ಟತಕ್ಕ ಪರಸ್ಪರಾನುರಾಗಕ್ಕೆ ಗೃಹಸ್ವರೂಪವಾಗಿಯೂ, ಅನೇಕವಾದ ನರಕಗಳಲ್ಲಿ ಯಾತನೆಗಳನ್ನನುಭವಿಸುವದಕ್ಕೆ ಮುಖ್ಯಕಾರಣವಾಗಿಯೂ, ಜ್ಞಾನವೆಂಬಚಂದ್ರನಿಗೆ ಮರೆಮಾಡತಕ್ಕ ಮೇಘ ಸಮುದಾಯಗಳೋಪಾದಿಯಲ್ಲಿಯೂ, ಮನ್ಮಥನಿಗೆ ಮುಖ್ಯವಾದ ಸ್ನೇಹಾಸ್ಪದವಾಗಿಯೂ, ಮತ್ತು ಮಹಾಪಾಪಕಾರ್ಯಗಳನ್ನು ಮಾಡಿಸುವದಕ್ಕೆ ಜನ್ಮಸ್ಥಾನವಾಗಿಯೂ ಇರುವ ಈ ಪ್ರಾಯಕ್ಕಿಂತಲೂ ಕೆಟ್ಟದ್ದು ಇನ್ನು ಈಪ್ರಪಂಚದಲ್ಲಿಯೇ ಇಲ್ಲವೆಂದು ಭಾವವು. (ಅಂದರೆ:– ಈ ದೋಷವು ಅನೇಕ ನರಕಯಾತನೆಗಳಿಗೆ) ಮನುಷ್ಯನನ್ನು ಗುರಿಮಾಡುವದೆಂದು ಕವಿಯ ತಾತ್ಪರ್ಯವು. ||೬೯||

ಶ್ಲೋ|| ಶೃಂಗಾರದ್ರುಮನೀರದೇ ಪ್ರಸೃಮರಕ್ರೀಡಾರಸ
ಸ್ರೋತಸಿ ಪ್ರದ್ಯುಮ್ನಪ್ರಿಯಬಾಂಧವೇ ಚತುರ
ವಾಙ್ಮುಕ್ತಾಫಲೋದನ್ವತಿ || ತನ್ವೀನೇತ್ರಚಕೋರ
ಪಾರ್ವಣವಿಧೌ ಸೌಭಾಗ್ಯಲಕ್ಷ್ಮೀನಿಧೌ ಧನ್ಯಃಕೋ
ಪಿನವಿಕ್ರಿಯಾಂಕಲಯತೇ ಪ್ರಾಪ್ತೇನವೇಯೌವನೇ ||

ಟೀಕಾ॥ ಶೃಂಗಾರದ್ರುಮನೀರದೇ-ಶೃಂಗಾರ-ಶೃಂಗಾರರಸವೆಂಬುವಂಥ, ದ್ರುಮ-ವೃಕ್ಷಕ್ಕೆ. ನೀರದೇ-ಮೇಘಸ್ವರೂಪವಾದ, ಪ್ರಸೃಮರಕ್ರೀಡಾರಸಸ್ರೋತಸಿ ಪ್ರಸೃಮರ- ವಿಸ್ತೃತವಾದ, ಕ್ರೀಡಾರಸ- ಕಾಮಕೇಳಿಯಿಂದುಂಟಾದರಸಕ್ಕೆ, ಸ್ರೋತಸಿ- ಪ್ರವಾಹಸ್ವರೂಪವಾದ, ಪ್ರದ್ಯುಮ್ನಪ್ರಿಯಬಾಂಧವೇ-ಪ್ರದ್ಯುಮ್ನ-ಮನ್ಮಥನಿಗೆ, ಪ್ರಿಯಬಾಂಧವೇ-ಇಷ್ಟಬಂಧುವಾದ, ಚತುರವಾಙ್ಮುಕ್ತಾಫಲೋದನ್ವತಿ ಚತುರವಾಕ್ ಚಮತ್ಕಾರವಾದ ಮಾತುಗಳೆಂಬ, ಮುಕ್ತಾಫಲ-ಮುತ್ತುಗಳಿಗೆ, ಉದನ್ವತಿ-ಸಮುದ್ರಪ್ರಾಯವಾದಂಥ, ತನ್ವೀನೇತ್ರಚಕೋರಪಾರ್ವಣವಿಧೌ- ತನ್ವೀ- ಸ್ತ್ರೀಯರುಗಳ, ನೇತ್ರ ಕಣ್ಣುಗಳೆಂಬ, ಚಕೋರ-ಚಕೋರವೆಂಬಪಕ್ಷಿಗಳಿಗೆ. ಪಾರ್ವಣವಿಧೌ ಹುಣ್ಣಿಮೆಯಚಂದ್ರಪ್ರಾಯವಾದಂಥ, ಸೌಭಾಗ್ಯಲಕ್ಷ್ಮೀನಿಧೌ-ಸೌಭಾಗ್ಯಲಕ್ಷ್ಮೀ-ಸೌಂದರ್ಯಸಂಪತ್ತಿಗೆ, ನಿಧೌ ಸ್ಥಾನವಾದ, ನವ-ನೂತನವಾದ, ಯೌವನೇ-ಯೌವನವು, ಪ್ರಾಪ್ತೇಸತಿ - ಉಂಟಾದಂಥಾದ್ದಾಗುತ್ತಿರಲಾಗಿ, ಕೋಪಿ - ಒಬ್ಬಾನೊಬ್ಬ, ಧನ್ಯಃ ಸುಕೃತಿಪುರುಷನು, ವಿಕ್ರಿಯಾಂ- ಮನ್ಮಥವಿಕಾರವನ್ನು, ನಕಲಯತೇ-ಮಾಡುವದಿಲ್ಲ. ಇಲ್ಲಿ ಶೃಂಗಾರದ್ರುಮನೀರದೇ ಇತ್ಯಾದಿ ಪದಪ್ರಯೋಗಗಳಿಂದ ಪರಸ್ಪರ ಸ್ಯಾಪೇಕ್ಷ್ಯಾನ್ನಿರವಯವ ರೂಪಕಾಲಂಕಾರವು, ಶಾರ್ದೂಲವಿಕ್ರೀಡಿತವೃತ್ತವು. ॥೨೦॥

ತಾತ್ಪರ್ಯ-ಯೌವನಕಾಲದಲ್ಲಿ ಯಾವಮನುಷ್ಯನಾದಾಗ್ಯೂ ಮನ್ಮಥವಿಕಾರಗಳನ್ನು ಮಾಡಿಯೇ ಇರುತ್ತಾನೆಂಬ ವಿಷಯವನ್ನು ಹೇಳುತ್ತಾನೆ. ಅದು ಹೇಗೆಂದರೆ:—ಶೃಂಗಾರರಸವೆಂಬ ವೃಕ್ಷಕ್ಕೆ ಯೌವನವು ಮೇಘಸ್ವರೂಪವಾಗಿಯೂ, ಕ್ರೀಡಾರಸಕ್ಕೆ ಪ್ರವಾಹರೂಪವಾಗಿಯೂ, ಸ್ತ್ರೀಪುರುಷರ ಚಾಟೂಕ್ತಿ ಪ್ರಿಯೋಕ್ತಿಗಳೆಂಬ ಮುಕ್ತಾಫಲಗಳಿಗೆ ಸಮುದ್ರಪ್ರಾಯವಾಗಿಯೂ, ಸ್ತ್ರೀಯರುಗಳ ನೇತ್ರಗಳೆಂಬ ಚಕೋರಪಕ್ಷಿಗಳಿಗೆ ಪೂರ್ಣಮಾಚಂದ್ರಸ್ವರೂಪವಾಗಿಯೂ, ಸೌಂದರ್ಯಲಕ್ಷ್ಮೀನಿಧಾನವಾಗಿಯೂ ಇರುವ ನೂತನವಾದ ಯೌವನಕಾಲದಲ್ಲಿ ಯಾವ ಸುಕೃತಿಪುರುಷನುತಾನೆ ಮನ್ಮಥವ್ಯಾಪಾರವನ್ನು ಮಾಡದೆ ಇರುತ್ತಾನೆ ? ಅಂದರೆ ಸರ್ವರೂ ಮಾಡಿಯೇ ಮಾಡುತ್ತಾರೆಂದು ಭಾವವು. (ಯೌವನಕಾಲದಲ್ಲಿ ಎಂತಹ ಮುಕ್ತಪುರುಷನಾದರೂ ಇಂದ್ರಿಯನಿಗ್ರಹವನ್ನು ಮಾಡುವದಕ್ಕಾಗುವದಿಲ್ಲವೆಂದು ಮುಖ್ಯತಾತ್ಪರ್ಯವು) ॥೨೦॥

ಶ್ಲೋ॥ ಸಂಸಾರೇಽಸ್ಮಿನ್ನಸಾರೇ ಕುನೃಪತಿಭವನದ್ವಾರಸೇವಾ
ಕಳಂಕವ್ಯಾಸಂಗವ್ಯಸ್ತಧೈರ್ಯಂ ಕಥಮಮಲಧಿಯೋ
ಮಾನಸಂ ಸಂವಿದಧ್ಯುಃ ॥ ಯದ್ಯೇತಾಃ ಪ್ರೋದ್ಯದಿಂ
ದುದ್ಯುತಿನಿಚಯಭೃತೋ ನ ಸ್ಯುರಂಭೋಜನೇತ್ರಾಃ
ಪ್ರೇಂಖತ್ಕಾಂಚೀಕಲಾಪಾಸ್ತನಭರವಿನಮನ್ಮಧ್ಯಭಾ
ಜಸ್ತರುಣ್ಯಃ ॥೨೧॥

ಟೀಕು॥ ಪ್ರೋದ್ಯದಿಂದುದ್ಯುತಿನಿಚಯಭೃತಃ-ಪ್ರೋದ್ಯತ್-ಉದಯಿಸುತ್ತಲಿರುವ, ಇಂದು-ಚಂದ್ರನ, ದ್ಯುತಿ - ಕಾಂತಿಯ ಸೋಪಾಧಿಯಲ್ಲಿ, ಕಾಂತಿಯುಳ್ಳ, ನಿಚಯ ವಸ್ತ್ರವನ್ನು. ಭೃತಃ- ಧರಿಸಿಕೊಂಡಿರುವ, ಪ್ರೇಂಖತ್ಕಾಂಚೀಕಲಾಪಾಃ-ಪ್ರೇಂಖತ್-ಧ್ವನಿಮಾಡುತ್ತಿರುವ, ಕಾಂಚೀ-ಒಡ್ಯಾಣಗಳೆಂಬ, ಕಲಾಪಾಃ-ಆಭರಣಗಳುಳ್ಳಂಥ, ಅಂಭೋಜನೇತ್ರಾಃ-ಕಮಲಗಳೋಪಾದಿಯಲ್ಲಿ ಕಣ್ಣುಗಳುಳ್ಳ, ಸ್ತನಭರವಿನಮನ್ಮಧ್ಯಭಾಜಃ- ಸ್ತನ- ಕುಚಗಳ, ಭರ- ಭಾರದಿಂದ, ವಿನಮತ್- ಬಗ್ಗಿದಂಥ, ಮಧ್ಯಭಾಜಃ- ಸೊಂಟಗಳುಳ್ಳ, ತರುಣ್ಯಃ ಸ್ತ್ರೀಯರುಗಳು, ನಸ್ಯುರ್ಯದಿ- ಇಲ್ಲದೆ ಇರುವವರಾದರೆ, ಅಮಲಧಿಯಃ-ಅಮಲ-ನಿರ್ಮಲವಾದ, ಧಿಯಃ-ಬುದ್ಧಿಗಳುಳ್ಳ ಮಹಾತ್ಮರು, ಮಾನಸಂ-ತಮ್ಮ ನಿಜವಾದ ಮನಸ್ಸನ್ನು. ಅಸಾರೇ-ದಾರಾಪುತ್ರಾದಿಪೋಷಣವಿಷಯವಾದ ಸಂಸಾರದಲ್ಲಿ, ಕುನೃಪತಿಭವನದ್ವಾರಸೇವಾಕಳಂಕವ್ಯಾಸಂಗವ್ಯಸ್ತಧೈರ್ಯಂ ಸತ್-ಕುನೃಪತಿ-ಕುತ್ಸಿತನಾದ ರಾಜನ, ಭವನ- ಮನೆಯ, ದ್ವಾರ- ಬಾಗಲಿನ, ಸೇವಾ- ಸೇವಕರ ಅನುವರ್ತನವೆಂಬುವ, ಕಳಂಕ- ಅಪವಾದದ, ವ್ಯಾಸಂಗ-ವ್ಯಾಪಾರದಿಂದ, ವ್ಯಸ್ತ-ಆಸಕ್ತವಾದ, ಧೈರ್ಯಂಸತ್- ಧೈರ್ಯವುಳ್ಳಂಥಾದ್ದನ್ನಾಗಿ ಕಥಂ- ಹೇಗೆ, ಸಂವಿದಧ್ಯುಃ- ಮಾಡಿದರೊ, ಅತ್ರ, ಮನೋನಿಗ್ರಹೇತುತರುಣೀ ಸದ್ಭಾವೇದುತ್ತರತ್ವೋಕ್ತೇಃ, ಕಾಮಿನೀಸೌಂದರ್ಯಾದಿ ಉತ್ತರೋತ್ತರವಾಕ್ಯಾರ್ಥೇನ ಸಮರ್ಥನಾತ್‌ಕಾವ್ಯಲಿಂಗಾಕಾರಃ- ವೃತ್ತಲಕ್ಷಣಂತು ಸ್ರಗ್ಧರಾವೃತ್ತಂ. ॥೨೧॥

ತಾತ್ಪರ್ಯ—ಯೌವನಕಾಲದಲ್ಲಿ ಕಾಮಿನಿಯರ ಪರಿತ್ಯಾಗವು ಅಯುಕ್ತವೆಂಬುವದನ್ನು ಹೇಳುತ್ತಾನೆ. ಹೇಗೆಂದರೆ:—ನಿರ್ಮಾಲಿನವಾದ ಬುದ್ಧಿಯುಳ್ಳ ಮಹಾಜನರು ಕುತ್ಸಿತರಾದ ರಾಜರ ಮನೆಗಳ ದ್ವಾರಗಳಲ್ಲಿ ಸೇವಕರಾಗಿ ನಿಂತು ರಾಜಸೇವಾಕಳಂಕದಲ್ಲಿದ್ದುಕೊಂಡು ತದ್ವ್ಯಾಸಂಗ

ಪರರಾಗಿ, ತಮ್ಮ ನಿಜವಾದ ನಿರ್ಮಲವುಳ್ಳ ಮನಸ್ಸುಗಳನ್ನು ಕಡಿಸಿಕೊಂಡು ನಿಜಕಾಮಿನಿಯರಲ್ಲಿ ಸಂಭೋಗೇಚ್ಛೆಗಳುಳ್ಳವರಾಗಿ ಕಳವಳ ಪಡುತ್ತಾರೆ. ಮತ್ತು ಉದಯಿಸುತ್ತಲಿರುವ ಚಂದ್ರನ ಕಾಂತಿಯೋಪಾದಿಯಲ್ಲಿ ನೇತ್ರಗಳುಳ್ಳ, ಶಬ್ದಮಾಡುತ್ತಿರುವ ವಡ್ಯಾಬಗಳೆಂಬ ಆಭರಣಧಾರಿಗಳಾಗಿ, ಕುಚಭಾರದಿಂದ ಬಗ್ಗಿಹೋಗಿರುವ ಮಧ್ಯಪ್ರದೇಶಗಳುಳ್ಳ ಸ್ತ್ರೀಯರುಗಳೇ ಇಲ್ಲವಿದ್ದರೆ ಮನಸ್ಸನ್ನು ಜಿತವಾಗಿ ಮಾಡಿಕೊಂಡಿರಬಹುದು. ಎಂಬ ಭಾವವು. ||೩೧||

ಶ್ಲೋ|| ಸಿದ್ಧಾಧ್ಯಾಸಿತಕಂದರೇಹರವೃಷಸ್ಕಂಧಾವರುಗ್ಣದ್ರು
ಮೇಗಂಗಾಧೌತಶಿಲಾತಲೇಹಿಮವತಸ್ಸ್ಥಾನೇಸ್ಥಿತೇ
ಶ್ರೇಯಸಿ || ಕಃಕುರ್ವೀತಶಿರಃಪ್ರಣಾಮಮಲಿನಂ
ಮ್ಲಾನಂಮನಸ್ವೀಜನೋ ಯದ್ವಿತ್ರಸ್ತಕುರಂಗಶಾ
ಬನಯನಾನಸ್ಯುಸ್ಸ್ಮರಾಸ್ತ್ರಂಸ್ತ್ರಿಯಃ || ೩೨ ||

ಟೀಕು|| ಸಿದ್ಧಾಧ್ಯಾಸಿತಕಂದರೇ- ಸಿದ್ಧ- ಸಿದ್ಧಪುರುಷರಿಂದ, ಅಧ್ಯಾಸಿತ ಆಶ್ರಯಿಸಲ್ಪಟ್ಟ, ಕಂದರ- ಗುಹೆಗಳುಳ್ಳ, ಹರವೃಷಸ್ಕಂಧಾವರುಗ್ಣದ್ರುಮೇ, ಹರ- ಈಶ್ವರನ, ವೃಷ- ವಾಹನವಾದೆತ್ತಿನ ಸ್ಕಂದ- ಭುಜಶಿರಸ್ಸಿನಿಂದ, ಅವರುಗ್ಣ- ಮುರಿಯಲ್ಪಟ್ಟ, ದ್ರುಮೇ- ವೃಕ್ಷಗಳುಳ್ಳ, ಗಂಗಾಧೌತಶಿಲಾತಲೇ ಗಂಗಾ ದೇವಗಂಗೆಯಿಂದ ಧೌತ- ತೊಳೆಯಲ್ಪಟ್ಟ, ಶಿಲಾತಲೇ ಕಲ್ಲುಪ್ರದೇಶಗಳುಳ್ಳ, ಶ್ರೇಯಸಿ- ಶ್ರೇಯಃಪ್ರದವಾದ, ಹಿಮವತಃ ಹಿಮವತ್ಪರ್ವತದ, ಸ್ಥಾನೇ- ಪ್ರದೇಶವು, ಸ್ಥಿತೇಸತಿ ಇರುತ್ತಿರಲಾಗಿ, ಕಃ- ಯಾವ, ಮನಸ್ವೀ- ಧೈರ್ಯಶಾಲಿಯಾದ, ಜನಃ- ಮನುಷ್ಯನು, ಶಿರಃ ತನ್ನ ತಲೆಯನ್ನು, ಪ್ರಣಾಮ- ನಮಸ್ಕಾರದಿಂದ, ಮಲಿನಂ- ಕಳಂಕವುಳ್ಳದ್ದನ್ನಾಗಿ, ಕುರ್ವೀತ? ಮಾಡುತ್ತಾನೆ? ಯತ್- ಯಾವಕಾರಣದ ದೆಸೆಯಿಂದ ವಿತ್ರಸ್ತ- ಭಯಪಟ್ಟ, ತುರಂಗಶಾಬ- ಜಿಂಕೆಯಮರಿಯ, ನಯನಾಃ- ಕಣ್ಣುಗಳೋಪಾದಿಯಲ್ಲಿ ಕಣ್ಣುಗಳುಳ್ಳ, ಸ್ಮರಾಸ್ತ್ರಂ- ಸ್ಮರ- ಮನ್ಮಥನ, ಅಸ್ತ್ರಂ ಆಯುಧಸ್ವರೂಪವಾದ, ಸ್ತ್ರಿಯಃ- ಸ್ತ್ರೀಯರು, ನಸ್ಯುರ್ಯದಿ- ಇಲ್ಲದೆ ಹೋದರೆ, ಕುರ್ವೀತ ಇಂದ್ರಿಯ ನಿಗ್ರಹವನ್ನು ಮಾಡುತ್ತಾನೆ. ವೃತ್ತಲಕ್ಷಣಂ ಶಾರ್ದೂಲವಿಕ್ರೀಡಿತವೃತ್ತಂ.

ತಾತ್ಪರ್ಯ—ಮನುಷ್ಯರು ತಪಸ್ಸುಮಾಡಿ ಸ್ವರ್ಗಾದಿ ಲೋಕಗಳ ನ್ನು ಹೊಂದಬಹುದು, ಅಂಥಾ ತಪಸ್ಸನ್ನು ಮಾಡುವದಕ್ಕಾಗುವದಿಲ್ಲವೆಂಬು ವದನ್ನು ಹೇಳುತ್ತಾನೆ ಹೇಗಂದರೆ:—ಸಿದ್ಧಪುರುಷರು ತಪಸ್ಸುಮಾಡು ವ ಸ್ಥಲವಾದಂಥಾದ್ದಾಗಿ, ಈಶ್ವರನ ವಾಹನವಾದ ವೃಷಭದ ಭುಜಗಳಿ ಗೆ ತಗಲಿ ಮುರಿದುಹೋದ ಮರಗಳುಳ್ಳದ್ದಾಗಿ, ಗಂಗಾಪ್ರವಾಹದ ದೆಸೆಯಿಂ ದ ಪರಿಶುದ್ಧಗಳಾದ ಹಿಮವತ್ಪರ್ವತದ ಗುಹೆಗಳು ಸಿದ್ಧವಾಗಿರುವಲ್ಲಿ, ಯಾ ರುತಾನೆ ತಮ್ಮ ತಲೆಯನ್ನು ಬಗ್ಗಿಸಿ ಇತರರಿಗೆ ನಮಸ್ಕಾರಮಾಡಿ ಅವರ ಆಜ್ಞಾಧಾರಕರಾಗಿದ್ದಾರು? ಯಾರೂ ಇರುವದಿಲ್ಲ. ಆದರೆ ಇರುವದಕ್ಕೆ ಒಂದು ಕಾರಣವುಂಟು. ಮನ್ಮಥಾಸ್ತ್ರಸ್ವರೂಪರಾದ ಸಭೆಯು ಕುರಂಗ ಶಾಬಕ ಚಂಚಲಾಕ್ಷಿಯರು ಇಲ್ಲದೇನೆ ಹೋಗಿದ್ದರೆ ಸರ್ವರೂ ತಪಸ್ಸುಮಾ ಡಿ ಕೃತಾರ್ಥರಾಗಬಹುದಾಗಿತ್ತು. ಅಂದರೆ ಚಂಚಲಚಿತ್ತರಾದ ಸ್ತ್ರೀ ಯರೇ ಸಕಲ ಅನರ್ಥಗಳಿಗೂ ಕಾರಣಭೂತರೆಂದು ಮುಖ್ಯ ತಾತ್ಪರ್ಯವು.

ಶ್ಲೋ॥ ಸಂಸಾರತವಪರ್ಯಂತಪದವೀನದವೀಯಸೀ॥ ಅಂತ
ರಾದುಸ್ತರಾನುಸ್ಯುರ್ಯದಿತೇಮದಿರೇಕ್ಷಣಾಃ ॥೩೩॥

ಟೀಕು॥ ಕಿಂತು-ಮತ್ತೇನಂದರೋ, ತೇ-ನಿನಗೆ, ದುಸ್ತರಾಃ- ದಾಟಲಶ ಕ್ಯರಾದ, ಅಂತರಾಃ-ವಿಘ್ನರಾದ, ಮದಿರೇಕ್ಷಣಾಃ- ಮದಿರ- ಮದಿಸಿದ, ಈಕ್ಷ ಣಾಃ ದೃಷ್ಟಿಗಳುವುಳ್ಳ ಸ್ತ್ರೀಯರುಗಳು, ನಸ್ಯುಃ ಯದಿ ಇಲ್ಲದಿದ್ದರೆ, ಹೇಸಂ ಸಾರ-ಎಲೈ ಸಂಸಾರವೆ! ತವ-ನಿನ್ನ, ಪರ್ಯಂತಪದವೀ-ಪರ್ಯಂತ-ಎಲ್ಲೆ ಕಟ್ಟಿನ, ಪದವೀ-ಮಾರ್ಗವು, ನದವೀಯಸೀ-ದೂರತರವಾದದ್ದಲ್ಲವು, ವೃತ್ತಂ ಅನು ಷ್ಟುಪ್ ವೃತ್ತಂ. ॥೩೩॥

ತಾತ್ಪರ್ಯ—ಎಲೈ ಸಂಸಾರವೇ ನಿನ್ನ ಪಾರವು ಅಷ್ಟು ಕಷ್ಟತರವಾ ದ್ದಲ್ಲ ಅಂದರೆ ಮಧ್ಯಕಾಲದಲ್ಲಿ ಸ್ತ್ರೀ ಸಂಬಂಧವಾದ ಸುಖವಿಲ್ಲವಾದರೆ ನಿನ್ನ ಎಲ್ಲೆ ಕಟ್ಟು ದೂರವಾಗದು. ಸ್ತ್ರೀ ಸುಖದಲ್ಲಿರುವವನಿಗೆ ಸಂಸಾರ ವೆಂಬುವದು ಅತಿದೂರವಾಗುವದೆಂಬ ತಾತ್ಪರ್ಯವು. ॥೩೩॥

ಶ್ಲೋ॥ ದಿಶವನಹರಿಣೀಭ್ಯೋವಂಶಕಾಂಡಚ್ಛವೀನಾಂಕಬಳ
ಮುಪಲಕೋಟಿಚ್ಛಿನ್ನ ಮೂಲಂಕುಶಾನಾಂ ॥ ಶಕ

ಯುವತಿಕಪೋಲಪಾಂಡುತಾಂಬೂಲವಲ್ಲೀದಳಮರು
ಣನಖಾಗ್ರೈಃಪಾಟಿತಂವಾನವಧೂಭ್ಯಃ ॥೨೪॥

ಟೀಕು॥ ವನಹರಿಣೀಭ್ಯಃ-ಅರಣ್ಯದಲ್ಲಿರುವ ಜಿಂಕೆಗಳಂತೆ ವಂಶಕಾಂಡ ಚ್ಛವೀನಾಂ ವಂಶ-ಬಿದುರಿನ, ಕಾಂಡ-ದಂಟಿನ, ಛವೀನಾಂ-ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಉಪಲಕೋಟಿಚ್ಛಿನ್ನಮೂಲ-ಉಪಲ-ಕಲ್ಲುಗಳ, ಕೋಟಿ ಕೊನೆಗಳಿಂದ ಛಿನ್ನ-ಕತ್ತರಿಸಲ್ಪಟ್ಟ, ಮೂಲಂ ಬುಡಗಳುಳ್ಳ, ಕುಶಾನಾಂ-ದರ್ಭೆಗಳ, ಕಬಳಂ-ಗ್ರಾಸವನ್ನು, ದಿಶ ಕೊಡು, ಅಥವಾ-ಹಾಗಲ್ಲದಿದ್ದರೆ, ವಧೂಭ್ಯಃ ಸ್ತ್ರೀಯರುಗಳಿಗೆ, ಅರುಣ ಕೆಂಪಾದ, ನಖಾಗ್ರೈಃ ಉಗುರುಗಳಕೊನೆಗಳಿಂದ, ಪಾಟಿತ-ಸೀಳಲ್ಪಟ್ಟ, ಶಕಯುವತಿಕಪೋಲಪಾಂಡುತಾಂಬೂಲವಲ್ಲೀದಳಂವಾ- ಶಕ- ಶಕಾಖ್ಯದೇಶಸ್ತ್ರೀಯರುಗಳ ಕಪೋಲ- ಕೆನ್ನೆಗಳೋಪಾದಿಯಲ್ಲಿ, ಆಪಾಂಡು-ಎಲ್ಲಾಕಡೆಯಲ್ಲಿಯೂ ಬೆಳ್ಳಗಿರುವ, ತಾಂಬೂಲವಲ್ಲೀ-ತಾಂಬುಲತೆಯ, ದಳಂವಾ-ಎಲೆಗಳನ್ನಾಗಲಿ, ದಿಶ-ಕೊಡು ಮಾಲಿನೀವೃತ್ತಂ ॥೨೪॥

ತಾತ್ಪರ್ಯ—ಸ್ತ್ರೀಯರುಗಳನ್ನು ಬಿಡುವದಕ್ಕೆ ಆಗುವದಿಲ್ಲವೆಂಬುವ ಆಶಂಕೆ ಉಂಟಾದರೆ:—ಈ ಶ್ಲೋಕದಲ್ಲಿ ವಿರಕ್ತಿ ಅನುರಕ್ತಿಗಳೆಂಬ ಉಭಯಮತಗಳನ್ನೂ ಹೇಳುತ್ತಾನೆ. ಹೇಗೆಂದರೆ—ಎಲೈ ಮನುಷ್ಯನೆ ಪುಣ್ಯಾರಣ್ಯಗಳಲ್ಲಿ ಸಂಚರಿಸುವ ಜಿಂಕೆಗಳಿಗೆ ಕಲ್ಲುಗಳ ಕೊನೆಗಳಿಂದ ಕೊಯ್ಯಲ್ಪಟ್ಟ ದರ್ಭೆಗಳ ಗ್ರಾಸವನ್ನು ಮಾಡಿ ಕೊಡು (ಇದು ಆ ಮುಷ್ಮಿಕಫಲಸಾಧಕವಾದ ವಿಷಯವು.) ಇಲ್ಲವೆ ಹೋದರೆ, ಕೆಂಪಾದ ನಖಾಗ್ರಗಳಿಂದ ಸೀಳಲ್ಪಡುವ, ಶಕದೇಶದ ಸ್ತ್ರೀಯರುಗಳ ಕೆನ್ನೆಗಳೋಪಾದಿಯಲ್ಲಿ ಶುಭ್ರವಾದ ಕಾಂತಿಯುಳ್ಳ ತಾಂಬೂಲವನ್ನಾಗಲಿ ಸ್ತ್ರೀಯರಿಗೆಕೊಡು. (ಅಂದರೆ) ಉತ್ತಮ ಸ್ತ್ರೀಯರುಗಳೊಡನೆ ಕೂಡಿಕೊಂಡು ತಾಂಬೂಲಚರ್ವಣೇತ್ಯಾದಿಗಳನ್ನು ಮಾಡಿ ಸುಖವನ್ನಾದರು ಅನುಭವಿಸು. (ಇದು ಐಹಿಕಫಲಸಾಧಕವಾದ ವಿಷಯವು.)

ಈ ಶ್ಲೋಕದಲ್ಲಿ ನಖಾಗ್ರದಲ್ಲಿ ಆರುಣ್ಯವರ್ಣನೆ ಮಾಡಿರುವದರಿಂದ ಉತ್ತಮತ್ವವನ್ನು ವರ್ಣಿಸಿದಂತಾಯ್ತು ಸಾಮುದ್ರಿಕಾ ಶಾಸ್ತ್ರದಲ್ಲಿ:—

ಶ್ಲೋಕ॥ ಪಾಣಿಪಾದತಲೇರಕ್ತೇನೇತ್ರಾಂತಾಚನಖಸ್ತಥಾ ।

ತಾಲುಜಿಹ್ವಾಧರೋಷ್ಠಂಚಸಪ್ತರಕ್ತಃ ಸುಖೀಭವೇತ್॥

ಎಂದು ವರ್ಣಿಸಿ ಇರುತ್ತಾನೆ. ॥೩೮॥

ಶ್ಲೋ॥ ಅಸಾರಾಸ್ಸರ್ವೇತೇವಿರತಿವಿರಸಾಃಪಾಪವಿಷಯಾಜುಗು
ಪ್ಸ್ಯಂತಾಂಯದ್ವಾನನುಸಕಲದೋಷಾಸ್ಪದಮಿತಿ॥ತ
ಥಾಪ್ಯೇತದ್ಭೂಮೌನಹಿಪರಹಿತಾತ್ಪುಣ್ಯಮಧಿಕಂನ
ಚಾಸ್ಮಿನ್ಸಂಸಾರೇಕುವಲಯದೃಶೋರಮ್ಯಮಪರಂ॥

ಟೀಕು॥ ನನು ಹಾಗಾದರೆ, ಹೇಜನಾಃ-ಎಲೈ ಜನಗಳಿರಾ, ಪ್ರಸಿದ್ಧಾಃ ಪ್ರಸಿದ್ಧಗಳಾದ, ಸರ್ವೇ-ಸಮಸ್ತಗಳಾದ, ಪಾಪವಿಷಯಾಃ-ಪಾಪ ಪಾಪಕರಗಳಾದ, ತೇ-ಆ ವಿಷಯಾಃ- ಸ್ರಕ್ಚಂದನಾದಿ ವಿಷಯಗಳು, (ಇಂದ್ರಿಯವ್ಯಾಪಾರಗಳು.) ಅಸಾರಾಃ-ನಿಸ್ಸಾರವಾದವುಗಳು ತಥಾ-ಹಾಗೆ. ವಿರತಿವಿರಸಾಃ ವಿರತಿ-ಪರಿಣಾಮದಲ್ಲಿ ವಿರಸಾಃ ಅನರ್ಥಕಾರಿಗಳು, ಯದ್ವಾ ಹಾಗಲ್ಲದೆ ಹೋದರೆ, ಸಕಲದೋಷಾಸ್ಪದಂ - ಸಕಲ - ಸಮಸ್ತವಾದ ದೋಷ- ಪಾಪಕಾರ್ಯಗಳಿಗೆ, ಆಸ್ಪದಂ- ಸ್ಥಾನವಾದದ್ದು. ಇತಿ- ಹೀಗೆಂದು, ಜುಗುಪ್ಸ್ಯಂತಾಂ- ಪರಿತ್ಯಾಗ ಮಾಡಲ್ಪಡಲಿ, ತಥಾಪಿ - ಆದಾಗ್ಯೂ, ಏತದ್ಭೂಮೌ- ಈ ಪ್ರಪಂಚದಲ್ಲಿ, ಪರಹಿತಾತ್-ಪರೋಪಕಾರಕ್ಕಿಂತಲೂ, ಅಧಿಕಂ- ಹೆಚ್ಚಾದ, ಪುಣ್ಯಂ ಪುಣ್ಯವು, ನಹಿ-ಇಲ್ಲವು, ಅಸ್ಮಿನ್ ಈ, ಸಂಸಾರೇ- ಸಂಸಾರದಲ್ಲಿ ಕುವಲಯದೃಶಃ-ಕುವಲಯ - ಕನ್ನೈದಿಲೆಯಂತೆ, ದೃಶಃ- ನೇತ್ರಗಳುಳ್ಳ ಸ್ತ್ರೀಯರಿಗಿಂತಲೂ, ಅಪರಂ-ಮತ್ತೊಂದಾದ, ರಮ್ಯಂ ಮನೋಹರವಾದ ವಸ್ತುವು, ನ-ಇಲ್ಲವು. ವೃತ್ತಲಕ್ಷಣಂ ಶಿಖರಿಣೀವೃತ್ತಂ. ॥೩೯॥

ತಾತ್ಪರ್ಯ—ಎಲೈ ಜನಗಳಿರಾ, ಪ್ರಸಿದ್ಧಗಳಾದ ಸಂಸಾರ ಸಂಬಂಧವುಳ್ಳ ವಿಷಯಗಳೆಲ್ಲವೂ ಕೇವಲ ನಿಸ್ಸಾರವಾಗಿಯೂ, ಪರಿಣಾಮಕಾಲದಲ್ಲಿ ಪಾಪಹೇತುಗಳಾಗಿ ಅನರ್ಥಗಳನ್ನುಂಟು ಮಾಡತಕ್ಕವುಗಳಾಗಿಯೂ ಇರುವುದೆಂದೂ ತಿಳಿದುಕೊಂಡು ಈ ಸ್ತ್ರೈಣೀಯವಾದ ಸ್ರಕ್ಚಂದನಾದಿ ವಿಷಯಗಳನ್ನು ಬಿಟ್ಟುಬಿಡಿರಿ, ಹಾಗಲ್ಲದೆ ಹೋದರೆ, ಈ ಪ್ರಪಂಚದಲ್ಲಿ ಸುಂದರವಾದ ಸ್ತ್ರೀಯರಿಗಿಂತಲೂ ಹೆಚ್ಚಾದ ವಸ್ತುವೇ ಇನ್ನಿಲ್ಲವೆಂದು ಭಾವಿಸಿ ಸಂಸಾರ ಸೌಖ್ಯವನ್ನಾದರೂ ಅನುಭವಿಸಿರಿ: (ಎಂಬ ವಿರಕ್ತಿ, ಅನುರಕ್ತಿಭಾವಗಳನ್ನು ಈ ಶ್ಲೋಕದಲ್ಲಿಯೂ ಹೇಳಿದ್ದಾನೆ.) ॥೩೯॥

ಶ್ಲೋ॥ ಮಾತ್ಸರ್ಯಮುತ್ಸಾರ್ಯವಿಚಾರ್ಯಕಾರ್ಯಮಾರ್ಯಾಸ್ಸಮರ್ಯಾದಮಿದಂಬ್ರುವಂತು ॥ ಸೇವ್ಯಾನಿತಂಬಾಃಕಿಮುಭೂಧರಾಣಾಮುತಸ್ಮರಸ್ಮೇರವಿಲಾಸಿನೀನಾಂ ॥ ೨೬ ॥

ಟೀಕು॥ ಆರ್ಯಾಃ-ಪೂಜ್ಯರು, ಮಾತ್ಸರ್ಯಂ-ಮತ್ಸರವನ್ನು, ಉತ್ಸಾರ್ಯ-ಬಿಟ್ಟು, ಭೂಧರಾಣಾಂ - ಪರ್ವತಗಳ, ನಿತಂಬಾಃ- ಕಟಕಶಾಖಾದ್ಭಾಗಗಳು, (ತಪ್ಪಲು) ಸೇವ್ಯಾಃ-ಸೇವಿಸುವದಕ್ಕೆ ಯೋಗ್ಯಗಳೋ ? ಉತ-ಹಾಗಲ್ಲದಿದ್ದರೆ, ಸ್ಮರಸ್ಮೇರವಿಲಾಸಿನೀನಾಂ-ಸ್ಮರ-ಮನ್ಮಥೋಲ್ಲಾಸಿತರಾದ, ಸ್ಮೇರವಿಲಾಸಿನೀನಾಂ- ಹಾವಭಾವ ವಿಲಾಸಗಳುಳ್ಳ ಸ್ತ್ರೀಯರುಗಳ, ನಿತಂಬಾಃ- ಕಟಿಪಶ್ಚಿದ್ಭಾಗಗಳು, ಸೇವ್ಯಾಃ- ಸೇವಿಸುವದಕ್ಕೆ ಯೋಗ್ಯಗಳೋ ? ವಿಚಾರ್ಯ-ಇವೆರಡನ್ನೂ ವಿಚಾರಮಾಡಿ, ಇದಂಕಾರ್ಯಂ- ಈಕಾರ್ಯವು, ಸಮರ್ಯಾದಂ-ಮರ್ಯಾದೆಯಿಂದ ಕೂಡಿರುವದೇನು, ಬ್ರುವಂತು-ಹೇಳಲಿ. ॥೨೬॥

ತಾತ್ಪರ್ಯ—ಪೂಜ್ಯರಾದವರು ಮತ್ಸರವನ್ನು ಬಿಟ್ಟು ಗುಣದೋಷಗಳನ್ನು ಆಲೋಚಿಸಿ, ಮನುಷ್ಯರು ಪರ್ವತಗಳಲ್ಲಿ ಕುಳಿತು ತಪಸ್ಸುಮಾಡುವದು ಯೋಗ್ಯವೋ? ಅಥವಾ ಉತ್ತಮಸ್ತ್ರೀಯರಲ್ಲಿ ಸಂಭೋಗವನ್ನು ಅನುಭವಿಸಿಕೊಂಡಿರುವದು ಯೋಗ್ಯವೋ? ಹೇಳಲಿ? ಅಂದರೆ, ವೈರಾಗ್ಯ ಉಳ್ಳವರು ಪರ್ವತಗಳಲ್ಲಿ ಕುಳಿತು ತಪಸ್ಸುಮಾಡಿ ಉತ್ತಮಗತಿಯನ್ನು ಸಾಧಿಸಬೇಕು. ಇಲ್ಲದಿದ್ದರೆ, ಉತ್ತಮಸ್ತ್ರೀಯರಲ್ಲಿ ಸಂಭೋಗ ಸುಖವನ್ನು ಅನುಭವಿಸಬೇಕು ಎಂಬಭಾವವು. ॥೨೬॥

ಶ್ಲೋ॥ ಸಂಸಾರೇಸ್ಮಿನ್ನಸಾರೇಪರಿಣತಿತರಳೇದ್ವೇಗತೀಪಂಡಿತಾನಾಂತತ್ತ್ವಜ್ಞಾನಾಮೃತಾಂಭಃಪ್ಲವಲಲಿತಧಿಯಾಂಯಾತುಕಾಲಃಕಥಂಚಿತ್ ॥ ನೋಚೇನ್ಮುಗ್ಧಾಂಗನಾನಾಂಸ್ತನಘನಜಘನಾಭೋಗಸಂಭೋಗಿನೀನಾಂ ಸ್ಥೂಲೋಪಸ್ಥಸ್ಥಲೀಷುಸ್ಥಗಿತಕರತಲಸ್ಪರ್ಶಲೀಲೋದ್ಯಮಾನಾಂ ॥ ೨೭ ॥

ಟೀಕು॥ ಸ್ವಪ್ನಸಾರೇ-ಸ್ವಪ್ನಪ್ರಾಯವಾದ, ಪರಿಣತಿತರಳೇ-ಪರಿಣತಿ-ಪಾಕದಲ್ಲಿ, ತರಳೇ ಚಂಚಲವಾದ, ಸಂಸಾರೇ-ಸಂಸಾರದಲ್ಲಿ, ಪಂಡಿತಾನಾಂ-ವಿದ್ವಾಂಸರಿಗೆ, ದ್ವೇ-ಎರಡು ವಿಧವಾದ, ಗತೀ-ಮಾರ್ಗಗಳು ಇರುತ್ತವೆ, ಅವು ಯಾವುಗಳೆಂದರೆ— ತತ್ತ್ವಜ್ಞಾನಾಮೃತಾಂಭಃಪ್ಲವಲಲಿತಧಿಯಾಂ-ತತ್ತ್ವಜ್ಞಾನ-ಬ್ರಹ್ಮಜ್ಞಾನವೆಂಬ, ಅಮೃತಾಂಭಃ-ಅಮೃತದಸ್ಸಿನಲ್ಲಿ, ಪ್ಲವ-ಮುಳುಗೋಣವಲ್ಲಿ (ಕ್ರೀಡಿಸುವದರಲ್ಲಿ), ಲಲಿತ ಆಸಕ್ತವಾದ, ಧಿಯಾಂ-ಬುದ್ಧಿಯುಳ್ಳಧೀರರಿಗೆ, ಕಾಲಃ-ಕಾಲವು, ಕಥಂಚಿತ್-ಅತಿಪ್ರಯತ್ನದಿಂದ ಯ ತ... ಹೋಗಲಿ, ನೋಚೇತ್- ಹಾಗಲ್ಲದೆ ಹೋದರೆ, ಸ್ತನಘನಜಘನಾಭೋಗಸಂಭೋಗಿನೀನಾಂ-ಸ್ತನ-ಕುಚಗಳ ಘನ-ಗಂಭೀರವಾದ, ಜಘನ-ಕಟಿಪುರೋಭಾಗದ, ಆಭೋಗ-ವಿಸ್ತಾರದಲ್ಲಿ, ಸಂಭೋಗಿನೀನಾಂ-ಸಂಭೋಗೇಚ್ಛೆಯುಳ್ಳ, ಮುಗ್ಧಾನಾಂ-ಸುಂದರಸ್ತ್ರೀಯರ, ಸ್ಥೂಲೋಪಸ್ಥಸ್ಥಲೀಷು-ಸ್ಥೂಲ-ಕೆಬ್ಬಾದ, ಉಪಸ್ಥ-ಮದನಸದನದ, ಸ್ಥಲೀಷು ಪ್ರದೇಶಗಳಲ್ಲಿ, ಸ್ಥಗಿತಕರತಲಸ್ಪರ್ಶಲೀಲೋದ್ಯಮಾನಾಂ-ಸ್ಥಗಿತ ಆಚ್ಛಾದಿಸಲ್ಪಟ್ಟ, ಕರತಲ-ಹಸ್ತಪ್ರದೇಶದ, ಸ್ಪರ್ಶ-ಮುಟ್ಟೋಣದ, ಲೀಲಾ-ವಿಲಾಸದಲ್ಲಿ, ಉದ್ಯಮಾನಾಂ-ಆಸಕ್ತರಾದ ಪಂಡಿತರಿಗೆ, ಕಾಲಃ ಕಾಲವು ಯಾತು-ಕಳೆಯಲಿ. ವೃತ್ತಲಕ್ಷಣಂತು ಸ್ರಗ್ಧರಾವೃತ್ತಂ. ಮ್ರಭ್ನೈರ್ಯಾನಾಂತ್ರಯೇಣತ್ರಿಮುನಿ ಯತಿಯುತಾ ಸ್ರಗ್ಧರಾಕೀರ್ತಿತೇಯಂ. ಸ್ವಭಾವೋಕ್ತ್ಯಲಂಕಾರವು ॥೩೭॥

ತಾತ್ಪರ್ಯ—ಸ್ವಪ್ನಪ್ರಾಯವಾಗಿ ಮಿಥ್ಯಾರೂಪವಾದ ಈ ಸಂಸಾರದಲ್ಲಿ ವಿವೇಕಿಗಳಾದವರಿಗೆ ಎರಡುವಿಧವಾದ ಮಾರ್ಗಗಳಿರುವವೆಂದು ಹೇಳುತ್ತಾನೆ. ಅವು ಯಾವುವೆಂದರೆ:—ತತ್ತ್ವಜ್ಞರಾಗಿ ಬ್ರಹ್ಮಜ್ಞಾನದಿಂದ ಮೋಕ್ಷಮಾರ್ಗಾವಲಂಬನೆ ಮಾಡುವದು. ಇಲ್ಲದೆ ಹೋದರೆ ವಿಸ್ತಾರವಾದ ಸ್ತನಜಘನ ಪ್ರದೇಶಗಳುಳ್ಳ ಸುಂದರಸ್ತ್ರೀಯರಲ್ಲಿ ಬಾಹ್ಯಸುರತ ಅಭ್ಯಂತರ ಸುರತಗಳಿಂದ ಸುಖಪಟ್ಟುಕೊಂಡಿರುವದು. ಇವೆರಡು ಮಾರ್ಗಗಳಲ್ಲಿ ಯಾವದಾದರೊಂದನ್ನಾದರೂ ಚನ್ನಾಗಿ ಅನುಭವಿಸಬೇಕೆಂಬ ವಿರಕ್ತ್ಯನುರಕ್ತಿ ಭಾವಗಳನ್ನು ಈ ಶ್ಲೋಕದಲ್ಲಿಯೂ ಹೇಳಿರುತ್ತಾನೆ.

ವಿಶೇಷವಿಷಯು:—ಈ ಶ್ಲೋಕದಲ್ಲಿ ಸ್ತ್ರೀಯರ ವಿಸ್ತಾರವಾದ ಸ್ತನಜಘನಮದನ ಸದನವೆಂಬ ವಿಷಯುವನ್ನು ಹೇಳಿರುವದರಿಂದ ಚಿತ್ರಿಣೀ ಜಾತಿಸ್ತ್ರೀಯರ ವರ್ಣನೆಯನ್ನು ಮಾಡಿದಂತಾಯ್ತು. ತಜ್ಜಾತಿ ಸ್ತ್ರೀ ಲಕ್ಷಣವೇನಂದರೆ.—ರತಿರಸಸ್ಯೈ—

ಶ್ಲೋ॥ ಮದನಸದನಮುಸ್ತ್ಯಾವರ್ತುಲೋಚ್ಛ್ರಾನಮಂತರ್ಮಧುಮದನ ಜಲಾಢ್ಯಂರೋಮಭಿನಾಕ್ತಿಕಾಂದ್ಯೈಃ॥ ಪ್ರಕೃತಿಚಪಲದೃಷ್ಟಿರ್ಬಾಹ್ಯ ಸಂಭೋಗರಕ್ತಾ ರಸಯತಿ ಮಧುರಾಲ್ಪಂಚಿತ್ರಿಣೀಚಿತ್ರರಕ್ತಾ ॥

ಮತ್ತು ಶ್ಲೋಕ॥ ವ್ರಜತಿಸುಖಾರ್ಥಂಚಿತ್ರಿಣೀಮುಗ್ಧಯಾಮೇ। ಭಜತಿ ದಿನರಜನ್ಯೋ ರ್ಹಸ್ತಿನೀಂಚದ್ವಿತೀಯೇ॥ ರಮಯತಿ ಚತೃತೀಯೇಶಂಖಿನೀಮಾದ್ರ್ಯಭಾವಾಂ ರಮಯತಿರಮಣೀಯಾಂ ಪದ್ಮಿನೀಂತುರ್ಯಯಾಮೇ ॥

ಎಂಬರೀತ್ಯಾ ರತಿರಹಸ್ಯದಲ್ಲಿ ಹಸ್ತಿನಿ, ಚಿತ್ರಿಣಿ, ಶಂಖಿನಿ, ಪದ್ಮಿನೀಜಾತಿಸ್ತ್ರೀವರ್ಣನೆಗಳನ್ನು ಹೇಳಿರುತ್ತಾನೆ.

ಪುನಃ ಶ್ಲೋಕ॥ ಘನಕುಚನಖಭೇದೈರ್ಮುಷ್ಟಿಘಾತೈಶ್ಚ ಮಧ್ಯೇ ರತಿನಿಯುತಕರೈಶ್ಚ ಪ್ರೀತಿಯುಕ್ತೈರ್ವಚೋಭಿಃ। ಅಮೃತರಸಕಥಾಭಿಸ್ತತ್ರ ಯಾಮೇದ್ವಿತೀಯೇಸುಗುಣಸಹಿತದಂತಶ್ಚಿತ್ರಿಣೀಂಸಂಲಭಂತಾಂ ॥

ಎಂದು ಹೇಳಿದ್ದಾನೆ. ಅಲ್ಲದೆ ಈ ಶ್ಲೋಕದಲ್ಲಿ ಮುಗ್ಧಾಂಗನೆಯು ರ ವಿಷವನ್ನು ಹೇಳಿರುವದರಿಂದ ಮುಗ್ಧಾನಾಯಕೀ ಪ್ರತಾಪರುದ್ರೀಯೇ॥

ಶ್ಲೋ ॥ ಉದಯದ್ಯೌವನಾ ಮುಗ್ಧಾಲಜ್ಜಾವಿಜಿತಮನ್ಮಥಾ ॥ ಇತಿ ಲಕ್ಷಣಾತ್ ॥ ॥೩೭॥

ಶ್ಲೋ॥ ಆವಾಸಃಕಿ ಕ್ರಿಯತಾಂಗಾಂಗೇಪಾಪಹಾರಿಣಿವಾರಿಣಿ ॥
ಸ್ತನದ್ವಯೇತರುಣ್ಯಾವಾಮನೋಹಾರಿಣಿಹಾರಿಣಿ ॥

ಟೀಕ-॥ ಪಾಪಹಾರಿಣಿ-ಪಾಪ- ಪಾಪಗಳನ್ನು, ಹಾರಿಣಿ- ಅಪಹರಿಸುವ (ಹೋಗಲಾಡಿಸುವ), ಗಾಂಗೇ- ಗಂಗಾನದೀ ಸಂಬಂಧವಾದ, ವಾರಿಣಿ-ಉದಕದಲ್ಲಿ, ಆವಾಸಃ- ವಾಸವು. ಕ್ರಿಯತಾಂ- ಮಾಡಲ್ಪಡಲಿ, ಅಥವಾ, ಮನೋಹಾರಿಣಿ-ಮನೋಹರವಾದ, ಹಾರಿಣಿ-ಮುಕ್ತಾಹಾರಗಳುಳ್ಳ,ತರುಣ್ಯಾಃ-ಸ್ತ್ರೀಯ, ಸ್ತನದ್ವಯೇವಾ - ಕುಚಯುಗ್ಮದಲ್ಲಿಯಾಗಲಿ, ಆವಾಸಃ- ವಾಸವು, ಕ್ರಿಯತಾಂ-ಮಾಡಲ್ಪಡಲಿ. ॥೩೮॥

ತಾತ್ಪರ್ಯ—ಸಂಸಾರದಲ್ಲಿ ವಿರಕ್ತಿಯುಳ್ಳ ವಿವೇಕಿಯು ಸಮಸ ಪಾಪಗಳನ್ನೂ ನಾಶಮಾಡತಕ್ಕ ಗಂಗಾನದಿಯಲ್ಲಿ ಸ್ನಾನ ಮಾಡಿಕೊಂಡು ತಪಸ್ಸು ಮಾಡಿಕೊಂಡಿರಬೇಕು. ಇಲ್ಲವೆ ಹೋದರೆ ಸಂಸಾರದಲ್ಲಿ ಅನು

ರಕ್ತಿಯುಳ್ಳವನು ಮನೋಹರವಾದ ಮುಕ್ತಾಹಾರಗಳಿಂದ ಕೂಡಿರುವ ಸುಂದರಿಯರ ಸ್ತನದ ಅಗ್ರಗಳಲ್ಲಿ ಕ್ರೀಡಿಸುವದರಿಂದಾಗಲಿ ಸಂತುಷ್ಟನಾಗಿ ಕೊಂಡಿರಬೇಕು ಅಂದರೆ ಉಭಯ ಭ್ರಷ್ಟನಾಗಬಾರದೆಂಬ ತಾತ್ಪರ್ಯವು

ವಿಶೇಷ ವಿಷಯಃ:—ಅತ್ರ ತರುಣೀಗ್ರಹಣಂ ಸ್ತನದ್ವಯಸ್ಯಪತನಾಭಾವೇನ ಕಾಠಿನ್ಯಾತಿಶಯದ್ಯೋತನಾರ್ಥಂ. ಅನ್ಯಥಾ ಆಭಾಸತ್ವ ಪ್ರಸಂಗಾತ್ ಏತೇನ ಮಣಿ ಹಿರಣ್ಮಯ ಕಂಕಣಯೋರಿವಸ್ತನದ್ವಯ ಹಾರಯೋರನ್ಯೋನ್ಯರಾಮಣೀಯಕ ಪ್ರಕಾಶ ಪರಿಪೋಷಾವಗಾಹಿತ್ವೇನವಿಶಿಷ್ಟಸ್ತನದ್ವಯಸ್ಯಾಶ್ರಯಣಯೋಗ್ಯತ್ವಂ ಸೂಚಿತಮಿತ್ಯವಗಂತವ್ಯಂ ಯಥಾಹ ಶ್ರೀಹರ್ಷಃ ॥ ತರುಣೀಸ್ತನಏವದೀಪ್ಯತೇ ಮಣಿಹಾರಾವಳಿರಾಮಣೀಯಕಮಿತಿಚ ॥ ಅತ್ರಪೂರ್ವೋತ್ತರ ವಾಕ್ಯಾರ್ಥಯೋರನುಪ್ರಾಸಯಮಕಯೋಶ್ಚಬ್ದಾಲಂಕಾರಯೋಸ್ಸಂಸೃಷ್ಟಿಃ ವೃತ್ತಂ ಅನುಷ್ಟುಪ್ ॥೨೮॥

ಶ್ಲೋ॥ ಕಿಮಿಹಬಹುಭಿರುಕ್ತೈರ್ಯುಕ್ತಿಶೂನ್ಯೈಃಪ್ರಲಾಪೈ
ರ್ದ್ವಯಮಿಹಪುರುಷಾಣಾಂಸರ್ವದಾಸೇವನೀಯಂ ॥
ಅಭಿನವಮದಲೀಲಾಲಾಲಸಂಸುಂದರೀಣಾಂಸ್ತನಭರಪ
ರಿಖಿನ್ನಂಯೌವನಂವಾವನಂವಾ ॥೨೯॥

ಟೀಕು॥ ಇಹ-ಈ ಅರ್ಥದಲ್ಲಿ, ಬಹುಭಿಃ-ಅಧಿಕಗಳಾಗಿ, ಉಕ್ತೈಃ ಹೇಳಲ್ಪಟ್ಟ, ಯುಕ್ತಿಶೂನ್ಯೈಃ-ನಿಸ್ಸಾರಗಳಾದ, ಪ್ರಲಾಪೈಃ ಅನರ್ಥವಚನಗಳಿಂದ, ಕಿಂ-ಏನುಪ್ರಯೋಜನವು. ಅಭಿನವಮದಲೀಲಾಲಾಲಸಂ ಅಭಿನವ- ನೂತನವಾದ, ಮದ- ಮನ್ಮಥಾವಸ್ಥೆಯಿಂದುಂಟಾದ, ಲೀಲಾ- ವಿಲಾಸದಲ್ಲಿ, ಲಾಲಸಂ-ಲೋಲುಪವಾದ. ಸ್ತನಭರಪರಿಖಿನ್ನಂ-ಸ್ತನ-ಕುಚಗಳ ಭರ-ಭಾರದಿಂದ, ಪರಿಖಿನ್ನಂ-ಶ್ರಾಂತವಾದ, ಸುಂದರೀಣಾಂ-ಸುಂದರಸ್ತ್ರೀಯರ, ಯೌವನಂವಾ- ಪ್ರಾಯವಾಗಲಿ, ಅಥವಾ-ಹಾಗಲ್ಲದಿದ್ದರೆ ವನಂವಾ-ಅರಣ್ಯವಾಗಲಿ, ಸರ್ವದಾ-ಯಾವಾಗಲೂ, ಪುರುಷಾಣಾಂ ಮನುಷ್ಯರಿಗೆ, ಸೇವನೀಯಂ-ಸೇವಿಸುವದಕ್ಕೆ ಯೋಗ್ಯವಾದದ್ದು. ಮಾಲಿನೀವೃತ್ತವು ॥೨೯॥

ತಾತ್ಪರ್ಯ—ಈ ಅರ್ಥದಲ್ಲಿ ಯುಕ್ತಿಶೂನ್ಯಗಳಾಗಿಯೂ, ನಿಸ್ಸಾರಗಳಾಗಿಯೂ ಇರುವ ಬಹುಮಾತುಗಳಿಂದೇನೂ ಫಲವಿಲ್ಲವು. ಮನುಷ್ಯನು ನೂತನವಾದ ಯೌವನ ಸಂಪತ್ತಿನಿಂದ ತುಂಬಿ ಮನ್ಮಥ ಕಲಾಸೂಚಿತ

ವಾದ ಶೃಂಗಾರ ವಿಲಾಸಗಳುಳ್ಳ ಸುಂದರಿಯರ ಕುಚಮರ್ದನಾದಿ ಬಾಹ್ಯಾಭ್ಯಂತರ ಸುರತಾದಿ ಸಂಸಾರ ಸುಖಗಳನ್ನಾದರೂ ಅನುಭವಿಸಬೇಕು. ಇಲ್ಲದೆ ಹೋದರೆ ಈ ಸಂಸಾರ ಸುಖವನ್ನೇ ತೊರೆದು ವಿರಕ್ತನಾಗಿ ಮಹಾರಣ್ಯಗಳಲ್ಲಿ ತಪಸ್ಸನ್ನಾದರೂ ಮಾಡಿ ಮೋಕ್ಷಮಾರ್ಗಾವಲಂಬನೆಂಬುದನ್ನಾದರೂ ಮಾಡಬೇಕು. ಇವೆರಡನ್ನೂ ಬಿಟ್ಟು ಭ್ರಷ್ಟನಾಗಬಾರದೆಂದು ಮುಖ್ಯ ತಾತ್ಪರ್ಯವು. ||೩೯||

ಶ್ಲೋ|| ಸತ್ಯಂಜನಾವಚ್ಮಿನಪಕ್ಷಪಾತಾಲ್ಲೋಕೇಷುಸಪ್ತಸ್ವಪಿ
ತಥ್ಯಮೇತತ್ || ನಾನ್ಯನ್ಮನೋಹಾರಿನಿತಂಬಿನೀ
ಭ್ಯೋದುಃಖೈಕಹೇತುರ್ನಚಕಶ್ಚಿದನ್ಯಃ ||೪೦||

ಟೀಕು|| ಹೇ ಜನಾಃ- ಎಲೈ ಜನಗಳಿರಾ! ಸತ್ಯಂ- ಯಥಾರ್ಥವನ್ನು, ವಚ್ಮಿ-ಹೇಳುತ್ತೇನೆ ಪಕ್ಷಪಾತಾತ್- ವಂಚನೆಯಿಂದ, ನವಚ್ಮಿ-ಹೇಳುವದಿಲ್ಲ. ಸಪ್ತಸು ಏಳಾದ, ಲೋಕೇಷ್ವಪಿ-ಲೋಕಗಳಲ್ಲಿಯೂ ಕೂಡ, ಏತತ್ ನಾನು ಹೇಳುವ ವಿಷಯವು, ತಥ್ಯಂ-ಯಥಾರ್ಥವಾದದ್ದು, ನಿತಂಬಿನೀಭ್ಯಃ-ಸುಂದರಸ್ತ್ರೀಯರಿಗಿಂತಲೂ, ಮನೋಹಾರಿ- ಮನೋಹರವಾದವಸ್ತು, ನ ಇಲ್ಲ, ಅನ್ಯಃ- ಇದೇ ಸ್ತ್ರೀಸಂಬಂಧವಾದ, ದುಃಖೈಕಹೇತುಃ- ದುಃಖ- ವ್ಯಸನಕ್ಕೆ ಏಕಹೇತುಃ- ಮುಖ್ಯಕಾರಣವಾದ, ಅನ್ಯಃ- ಮತ್ತೊಂದಾದ ವಸ್ತುವು ಕಶ್ಚಿದಪಿ ಒಂದಾದರೂ, ನ-ಇಲ್ಲ ||೪೦||

ಈ ಶ್ಲೋಕದಲ್ಲಿ ಸುಂದರಿಯರ ಸುಖಕ್ಕೆ ಸಾದೃಶ್ಯವಾದ ವಸ್ತುಗಳು ಇದ್ದಾಗ್ಯೂ ಇಲ್ಲವೆಂದು ಹೇಳಿರುತ್ತಾನಾದ್ದರಿಂದ:- ಸಂಬಂಧೇ ಽಸಂಬಂಧೋಕ್ತೇರತಿಶಯೋಕ್ತ್ಯಲಂಕಾರಃ. ವೃತ್ತಲಕ್ಷಣಂತು ಇಂದ್ರವಜ್ರಾವೃತ್ತ ವೃತ್ತಲಕ್ಷಣಂಸ್ಯಾದಿಂದ್ರವಜ್ರಾಯದಿತೌಜಗೌಗಃ | ಉಪೇಂದ್ರವಜ್ರಾಜತಜಾಸ್ತತೋಗೌ | ಇತಿಲಕ್ಷಣಾತ್.

ತಾತ್ಪರ್ಯ—ಹಿಂದಿನ ಶ್ಲೋಕಾಭಿಪ್ರಾಯವನ್ನೇ ಈ ಶ್ಲೋಕದಲ್ಲೂ ಹೇಳುತ್ತಾನೆ. ಹೇಗೆಂದರೆ:—ಎಲೈ ಜನಗಳಿರಾ! ಏಳು ಲೋಕಗಳಲ್ಲಿಯೂ ಯಥಾರ್ಥವಾಗಿರುವ ಪಕ್ಷಪಾತವಿಲ್ಲದ ಒಂದು ಸತ್ಯವಾದ ಮಾತನ್ನು ಹೇಳುತ್ತೇನೆ ಕೇಳಿರಿ. ಸುಂದರಸ್ತ್ರೀಯರಿಗಿಂತಲೂ ಉತ್ತಮವಾದ ವಸ್ತುವು ಯಾವ ಲೋಕದಲ್ಲಿಯೂ ಇಲ್ಲ. ಇವರಿಗಿಂತಲೂ ದುಃಖಹೇತು

ವಾದ ವಸ್ತುವೂ ನಹ ಇಲ್ಲ. ಅಂದರೆ ಕಾಮಿನಿಯರು ಪುರುಷರಿಗೆ ಸ್ವರ್ಗಾದಿಲೋಕಗಳಲ್ಲಾಗುವ ಸೌಖ್ಯಗಳಿಗಿಂತಲೂ ಅತಿಶಯವಾದ ಸೌಖ್ಯವನ್ನು ಉಂಟುಮಾಡುತ್ತಾರೆ ಮತ್ತು ಮಹತ್ತಾದ ದುಃಖಗಳನ್ನೂ ಉಂಟುಮಾಡುತ್ತಾರಾಗಿ, ಮುಖ್ಯವಾಗಿ ಪುರುಷರ ಸುಖ ದುಃಖಾದಿಗಳಿಗೆ ಡಕ್ಕೂ ಸ್ತ್ರೀಯರೇ ಕಾರಣಭೂತರೆಂದು ಅಭಿಪ್ರಾಯವು. ||೮೧||

ಇತಿ ಸಂಜೀವನೀ ಟೀಕಾ ಸಹಿತ ಭರ್ತೃಹರಿ ಸುಭಾಷಿತೇ

ಶೃಂಗಾರ ಶತಕೇ ಸಂಭೋಗ ಪದ್ಧತಿಃ

ಸಮಾಪ್ತಾ

---

## — ಕಾಮಿನೀಗರ್ಹಣಾ ಪದ್ಧತಿ ಪ್ರಾರಂಭಃ —

ಶ್ಲೋ|| ಕಾಂತೇತ್ಯುತ್ಪಲಲೋಚನೇತಿವಿಪುಲ ಶ್ರೋಣೀಭರೇ
ತ್ಯುನ್ನಮತ್ಪೀನೋತ್ತುಂಗಪಯೋಧರೇತಿಸುಮು
ಖಾಂಭೋಜೇತಿಸುಭ್ರೂರಿತಿ || ದೃಷ್ಟ್ವಾಮಾದ್ಯತಿ
ಮೋದತೇಭಿರಮತೇಪ್ರಸ್ತೌತಿವಿದ್ವಾನಪಿ ಪ್ರತ್ಯಕ್ಷಾ
ಶುಚಿಭಸ್ತ್ರಿಕಾಂಸ್ತ್ರಿಯಮಹೋ ಮೋಹಸ್ಯದು
ಶ್ಚೇಷ್ಟಿತಂ ||೮೨||

ಟೀಕು|| ವಿದ್ವಾನಪಿ- ವಿದ್ವಾಂಸನಾದರೂ ಕೂಡ, ಪ್ರತ್ಯಕ್ಷಾಶುಚಿಭಸ್ತ್ರಿಕಾಂ-ಪ್ರತ್ಯಕ್ಷ ಪ್ರತ್ಯಕ್ಷವಾಗಿ, ಅಶುಚಿ-ಅಪರಿಶುದ್ಧವಾದ, ಭಸ್ತ್ರಿಕಾಂ-ಚರ್ಮದಹೊದಿಕೆಯುಳ್ಳ, ಸ್ತ್ರಿಯಂ ಸ್ತ್ರೀಯನ್ನು, ದೃಷ್ಟ್ವಾ-ನೋಡಿ ಕಾಂತೇತಿ-ಕಾಂತಾ-ಸುಂದರಿಯಾದವಳು! ಇತಿ-ಹೀಗೆಂಬದಾಗಿಯೂ ಉತ್ಪಲಲೋಚನೇತಿ ಉತ್ಪಲ- ಕನ್ನೈದಿಲೆಯ ಪುಷ್ಪದೋಪಾದಿಯಲ್ಲಿ, ಲೋಚನಾ- ನೇತ್ರಗಳುಳ್ಳವಳು, ಇತಿ-ಹೀಗೆಂಬದಾಗಿಯೂ, ವಿಪುಲಶ್ರೋಣೀಭರೇತಿ-ವಿಪುಲ ವಿಸ್ತಾರವಾದ, ಶ್ರೋಣೀಭರಾ- ಕಟಿಪಶ್ಚಾದ್ಭಾಗವುಳ್ಳವಳು. ಇತಿ- ಹೀಗೆಂಬದಾಗಿಯೂ, ಪೀನೋತ್ತುಂಗಪಯೋಧರೇತಿ- ಪೀನ- ಬಲಿತಿರುವ, ಉತ್ತುಂಗ-ಉನ್ನತವಾದ ಪಯೋಧರಾ-ಸ್ತನಗಳುಳ್ಳವಳು, ಇತಿ- ಹೀಗೆಂಬದಾಗಿಯೂ, ಸುಭ್ರೂರಿತಿ-ಸು-ಅಂದವಾದ, ಭ್ರೂ-ಕಣ್ಣುಹುಬ್ಬುಗಳುಳ್ಳವಳು, ಇತಿ ಹೀ

ಗಂಬವಾಗಿಯೂ, ಮಾದ್ಯತಿ- ಮದವನ್ನು ಹೊಂದುತ್ತಾನೆ (ಮತ್ತನಾಗುತ್ತಾನೆ.) ಮೋದತೇ- ಸಂತೋಷಿಸುತ್ತಾನೆ. ಅಭಿರಮತೇ-ಅತ್ಯಂತವಾಗಿ ಕ್ರೀಡಿಸುತ್ತಾನೆ, ಪ್ರಸ್ತೌತಿ- ಸ್ತುತಿಮಾಡುತ್ತಾನೆ, (ಆದ್ದರಿಂದ) ಇದಂ- ಈ ವಿಕಾರಗಳೆಲ್ಲವೂ, ಮೋಹನ.-ಮದಾಂಧತೆಯಿಂದುಂಟಾದ ಅಭಿಲಾಷೆಯ, ದುಶ್ಚೇಷ್ಟಿತಂ- ಕೆಟ್ಟವ್ಯಾಪಾರಗಳು ಅಲಂಕಾರಃ ಉಪಮಾಲಂಕಾರೋಜ್ಜೀವಿತ ಸ್ವಭಾವೋಕ್ತಿಃ. ಕ್ರಿಯಾಸಮುಚ್ಚಯಾಲಂಕಾರಶ್ಚ ಏತಯೋಸ್ಸಂಸೃಷ್ಟಿಃ. ಶಾರ್ದೂಲವಿಕ್ರೀಡಿತವೃತ್ತವು. |೪೧|

ತಾತ್ಪರ್ಯ—ಈ ಪದ್ಧತಿಯ ಈಶ್ಲೋಕ ಮೊದಲುಗೊಂಡು ಕಾಮಿನಿಯರ ಸ್ವರೂಪವನ್ನು ದೂಷಿಸುತ್ತಾನೆ ಅಶುದ್ಧವಾದ ಚರ್ಮದಹೊದಿಕೆಯಿಂದ ಕೂಡಿಕೊಂಡು ಒಳಗಡೆ ಅಸಹ್ಯಕರವಾದ ಮೇದೋಮಜ್ಜರುಧಿರಾಸ್ಥಿಮಯವಾದ ಸ್ತ್ರೀ ವಿಗ್ರಹವನ್ನು ಎಂಥಾ ವಿವೇಕಶಾಲಿಯಾದಾಗ್ಯೂ ನೋಡಿದ ಕೂಡಲೆ, ಆಹ! ಈ ಸ್ತ್ರೀಯು ಬಹಳ ಸೌಂದರ್ಯವುಳ್ಳವಳಾಗಿರುವಳು! ಕಾಮಿನಿಯು ಕಸ್ತೂರಿಯಂತೆ ಕಣ್ಣುಗಳುಳ್ಳವಳು! ಆಹ! ವಿಸ್ತಾರವಾದ ಕಟಿಪಶ್ಚಾದ್ಭಾಗವುಳ್ಳವಳು! ಉನ್ನತವಾಗಿಯೂ ಘಟ್ಟಿಯಾಗಿಯೂ ಇರುವ ಕುಚಯುಗ್ಮವುಳ್ಳವಳು! ಕಮಲದೋಪಾದಿಯಲ್ಲಿ ಮುಖವುಳ್ಳವಳೇ! ಆಹಹ! ಮನ್ಮಥನ ಧನುಸ್ಸಿನೋಪಾದಿಯಲ್ಲಿ ಕಣ್ಣುಹುಬ್ಬುಗಳುಳ್ಳವಳು! ಎಂದು ಈರೀತಿಯಾಗಿ ಕಾಮಾಂಧತೆಯಿಂದ ಮದಿಸಿದವನಾಗಿ, ಸಂತೋಷದಿಂದ ಕೂಡಿದವನಾಗಿ ಅತ್ಯಂತವಾಗಿ ಕ್ರೀಡಿಸುತ್ತಾ ಸ್ತೋತ್ರ ಮಾಡುತ್ತಾನೆ ಆಹ!! ಆಶ್ಚರ್ಯವು! (ಅಂದರೆ, ನಿಸ್ಸಾರವಾದ ದೇಹವುಳ್ಳ ಕಾಮಿನಿಯರನ್ನೂ ನೋಡಿ ವಿವೇಕಿಗಳಾದವರೇ ಈ ರೀತಿ ಮೋಹವನ್ನು ಹೊಂದುವಾಗ್ಯೆ ಮೂಢರು ಇನ್ನೆಷ್ಟು ಮೋಹಿತರಾಗಬಹುದೆಂಬ ಅಭಿಪ್ರಾಯವು ||೪೧||

ಶ್ಲೋ|| ಸ್ಮೃತಾಭವತಿತಾಪಾಯದೃಷ್ಟಾಚೋನ್ಮಾದಕಾರಿಣೀ||
ಸ್ಪೃಷ್ಟಾಭವತಿಮೋಹಾಯಸಾನಾಮದಯಿತಾಕಥಂ||

ಟೀಕು| ಯಾ- ಯಾವಸ್ತ್ರೀಯಾದರೆ, ಸ್ಮೃತಾಸತೀ- ಸ್ಮರಣ್ಣೆ ಮಾಡಲ್ಪಟ್ಟವಳು, ಭವತಿ-ಆಗುತ್ತಾಳೋ, ತಾಪಾಯ- ಸಂತಾಪಕ್ಕಾಗಿ, ಭವತಿ- ಆಗುತ್ತಾಳೆ, ದೃಷ್ಟಾಚ- ನೋಡಲ್ಪಟ್ಟವಳಾದರೆ, ಉನ್ಮಾದಕಾರಿಣೀ ಉನ್ಮಾದ-ಹೆಚ್ಚಿದ ಮದವನ್ನು, ಕಾರಿಣೀ- ಉಂಟುಮಾಡುತ್ತಾಳೆ, ಸ್ಪೃಷ್ಟಾ- ಮುಟ್ಟ

ಲ್ಪಿಷ್ಟವಳಾದರೆ, ಮೋಹಾಯ - ಬಹಿಃಪ್ರಪಂಚವಿಸ್ಮರಣೆಗೋಸ್ಕರ, ಭವತಿ- ಆಗುತ್ತಾಳೆಯೋ. ಸಾನಾವು- ಅಂಥಾಸ್ತ್ರೀಯು, ದಯಿತಾ- ಪ್ರಿಯಳು, ಕಥಂ- ಹೇಗೆ, ಭವತಿ ಆಗುತ್ತಾಳೆ ||೪೨||

ಈ ಶ್ಲೋಕದಲ್ಲಿ ಸ್ಮರಣೆಯಿಂದ ತಾಪವೆಂಬ ಪದಾರ್ಥಗತಿಗಳಿಗಿಂದಲೂ ನಾಲ್ಕನೇಪಾದದಲ್ಲಿ ಹೇಳಿರುವ ಬುದ್ಧಿಭ್ರಂಶ್ಯಕಾರ್ಯಗಳಿಗೆ ಹೇತುವಾದ್ದರಿಂದ ಪದಾರ್ಥಹೇತುಕ ಕಾವ್ಯಲಿಂಗಾಲಂಕಾರಃ. ವೃತ್ತಂ ಅನುಷ್ಟುಪ್.

ತಾತ್ಪರ್ಯ—ಈ ಶ್ಲೋಕ ಮೊದಲುಗೊಂಡು ಇನ್ನು ಮೂರು ಅನುಷ್ಟುಪ್ ಶ್ಲೋಕಗಳಲ್ಲಿಯೂ ಕಾಮಿನೀಸ್ವರೂಪ ದೂಷಣವನ್ನೇ ಹೇಳುತ್ತಾನೆ. ಹೇಗಂದರೆ—ದೇಶಾಂತರಗತನಾಗಿ ಹೊರಟು ಹೋಗಿರುವ ಪುರುಷನು ಒಂದಾನೊಂದು ಕಾಲದಲ್ಲಿ ಸಾದೃಶ್ಯವಸ್ತು ದರ್ಶನದಿಂದ ಸ್ವಸ್ತ್ರೀಯನ್ನು ಸ್ಮರಣೆ ಮಾಡಿಕೊಂಡ ಮಾತ್ರದಿಂದಲೆ, ವಿರಹತಾಪದಿಂದ ಅವನಿಗೆ ಬಹಳ ಸಂಕಟ ಉಂಟಾಗುತ್ತದೆ. ಹಾಗೆಯೇ ನೋಡಿದರೆ ಹೆಚ್ಚಾದ ಮದ ಉಂಟಾಗುತ್ತದೆ ಮತ್ತು ಸ್ಪರ್ಶಮಾಡಿದ ಮಾತ್ರದಿಂದಲೆ ದೇಹಸ್ಮರಣೆ ಮಾತ್ರದಿಂದಲೆ ದುಃಖ, ನೋಡೋಣದರಿಂದ ಮದ, ಮುಟ್ಟೋಣದರಿಂದ ಜ್ಞಾನ ತಪ್ಪುವದು, ಈರೀತಿಯಾದ ಸುಖದುಃಖಾಸ್ಪದಗಳಾದ ಸ್ತ್ರೀಯನ್ನು ಪ್ರಿಯಳೆಂದು ಅನ್ನಬಾರದೆಂಬ ಭಾವವು. ||೪೨||

ಶ್ಲೋ|| ತಾವದೇವಾಮೃತಮಯೀ ಯಾವಲ್ಲೋಚನಗೋಚರಾ || ಚಕ್ಷುಃಪಥಾದತೀತಾತು ವಿಷಾದಪ್ಯತಿರಿಚ್ಯತೇ ||

ಟೀಕು|| ಕಾಮಿನೀ- ಸ್ತ್ರೀಯು, ಯಾವತ್- ಎಷ್ಟು ಪರ್ಯಂತರವೂ, ಲೋಚನ ನೇತ್ರಗಳಿಗೆ, ಗೋಚರಾ - ವಿಷಯಳಾಗಿರುತ್ತಾಳೆಯೋ, ತಾವದೇವ ಅಷ್ಟುಪರ್ಯಂತವೂ, ಅಮೃತಮಯೀ- ಅಮೃತಸ್ವರೂಪವುಳ್ಳವಳಾಗಿರುತ್ತಾಳೆ ಚಕ್ಷುಷ್ಪಥಾತ್- ಚಕ್ಷುಷಃ- ಕಣ್ಣುಗಳ, ಪಥಾತ್- ಮಾರ್ಗದ ಪಸೆಯಿಂದ, ಅತಿರಿಚ್ಯತೇ- ಅತಿಕ್ರಮಿಸಿ ಹೋಗುತ್ತಾಳೆಯೋ ಆಗ ವಿಷಾದಪಿ- ಕಾಲಕೂಟವಿಷಕ್ಕಿಂತಲೂ, ಅತಿರಿಚ್ಯತೇ- ಅತಿಶಯವಾಗುತ್ತಾಳೆ. ||೪೩||

ಅತ್ರ ನಧ್ಯಾವಮೃತಮಯತ್ವ ವಿಷಾತಿರಿಚ್ಯಮಾನತ್ವ ಸಂಬಂಧೇಪಿ ತತ್ಸಂಬಂಧಾಭಿಧಾನಾದ ಸಂಬಂಧೇಪಿ ಸಂಬಂಧ ರೂಪಾತಿಶಯೋಕ್ತಿರಲಂಕಾರಃ. ವೃತ್ತಂ ಅನುಷ್ಟುಪ್.

ತಾತ್ಪರ್ಯ—ಸ್ತ್ರೀಯು ಕಣ್ಣೆದುರಿಗೆ ಇರುವವರೆಗೂ ಪುರುಷನಿಗೆ ಅಮೃತಪಾನ ಮಾಡಿದಷ್ಟು ಸಂತೋಷವಾಗಿರುತ್ತದೆ. ಆ ಸ್ತ್ರೀಯು ಕ

ಸ್ತ್ರೀಯರಾದರೆ ವಿಷಪಾನ ಮಾಡಿದ್ದಕ್ಕಿಂತಲೂ ಅತಿಶಯವಾದ ಸಂಕಟವುಂಟಾಗುತ್ತದೆಂದು ಭಾವವು. ||೮೩||

ಶ್ಲೋ || ನಾಮೃತಂನವಿಷಂಕಿಂಚಿದೇಕಾಂಮುಕ್ತ್ವಾನಿತಂಬಿನೀಂ || ಸೇವಾಮೃತಲತಾರಕ್ತಾವಿರಕ್ತಾವಿಷವಲ್ಲರೀ ||

ಟೀಕು|| ಏಕಾಂ- ಒಬ್ಬಳಾದ, ನಿತಂಬಿನೀಂ- ಸ್ತ್ರೀಯನ್ನು, ಮುಕ್ತ್ವಾ- ಬಿಟ್ಟು, ಕಿಂಚಿತ್- ಸ್ವಲ್ಪವಾದರೂ, ಅಮೃತಂ- ಅಮೃತವು, ನ- ಇಲ್ಲ, ವಿಷಂ- ವಿಷವೂ, ನ- ಇಲ್ಲ, (ಹೇಗೆಂದರೆ) ಸೈವ- ಆ ನಿತಂಬಿನಿಯೇ, ರಕ್ತಾಸತೀ- ಅನುರಕ್ತಳಾಗಿದ್ದರೆ, ಅಮೃತಲತಾ- ಅಮೃತಸಂಜೀವಿನೀಲತೆಗೆ ಸಮಾನಳು. (ಹಾಗಲ್ಲವೆ) ವಿರಕ್ತಾಸತೀ- ಅನುರಾಗರಹಿತಳಾದರೆ, ಸೈವ- ಆ ಕಾಮಿನಿಯು, ವಿಷವಲ್ಲರೀ- ವಿಷದ ಬಳ್ಳಿಯಾಗುತ್ತಾಳೆ ||೮೪||

ಇಲ್ಲಿ ಕಾಮಿನೀ ವ್ಯತಿರಿಕ್ತವಾದ ಅಮೃತವಿಷಗಳಿದ್ದಾಗ್ಯೂ ತದ್ವ್ಯತಿರಿಕ್ತಾಸ್ತ್ವಂತರ ಸಂಬಂಧವಿಲ್ಲವೆಂದು ಹೇಳಿದ್ದರಿಂದ ಸಂಬಂಧೇಪ್ಯ ಸಂಬಂಧೋಕ್ತೇರತಿಶಯೋಕ್ತಿರಲಂಕಾರಃ ವೃತ್ತಂ ಅನುಷ್ಟುಪ್.

ತಾತ್ಪರ್ಯ —ಈ ಶ್ಲೋಕದಲ್ಲಿಯೂ ಹಿಂದಿನ ಶ್ಲೋಕಗಳ ತಾತ್ಪರ್ಯವನ್ನೇ ಬೇರೆವಿಧದಲ್ಲಿ ಹೇಳುತ್ತಾನೆ. ಹೇಗೆಂದರೆ:—ಸ್ತ್ರೀಯು ಪುರುಷನನ್ನು ಒಲಿದು ಅನುರಾಗದಿಂದ ಕೂಡಿದವಳಾಗಿದ್ದರೆ ಅಮೃತದಂತೆ ವಿಶ್ವಾಸದಿಂದ ಕೂಡಿರುತ್ತಾಳೆ. ಇದೇ ಸ್ತ್ರೀಯೇ ಅನುರಾಗ ರಹಿತಳಾದರೆ ವಿಷಪ್ರಾಯಳಾಗುತ್ತಾಳೆ. ಅಂದರೆ ಲೋಕದಲ್ಲಿ ಸ್ತ್ರೀಯೇ ಅಮೃತ ವಿಷಗಳಿಗೆ ಸಮಾನಳಾದವಳೆಂದು ಅಭಿಪ್ರಾಯವು ||೮೪||

ಶ್ಲೋ|| ಆವರ್ತಸ್ಸಂಶಯಾನಾಮವಿನಯಭುವನಂಪಟ್ಟಣಂ ಸಾಹಸಾನಾಂದೋಷಾಣಾಂ ಸನ್ನಿಧಾನಂಕಪಟಶತಮಯಂಕ್ಷೇತ್ರಮಪ್ರತ್ಯಯಾನಾಂ || ಸ್ವರ್ಗದ್ವಾರಸ್ಯವಿಘ್ನೋನರಕಪುರಮುಖಂಸರ್ವಮಾಯಾಕರಂಡಂ ಸ್ತ್ರೀಯಂತ್ರಂಕೇನಸೃಷ್ಟಂವಿಷಮಮೃತಮಯಂ ಪ್ರಾಣಿಲೋಕಸ್ಯಪಾಶಃ ||೮೫||

ಟೀಕು|| ಸಂಶಯಾನಾಂ- ಸಂದೇಹಗಳಿಗೆ, ಆವರ್ತಃ- ಸುಳಿಯಾಗಿರುವ (ಸಂದೇಹಪರಿಪಾಕರೂಪವಾದ) ಅವಿನಯ- ದುರ್ವಿನಯಗಳಿಗೆ, ಭುವನಂ-

ಪ್ರಪಂಚಸ್ವರೂಪವಾದ, ಸಾಹಸಾನಾಂ-ಸಾಮರ್ಥ್ಯಕ್ಕೆ, ಪಟ್ಟಣಂ-ರಾಜಧಾನಿಯಾದ, ದೋಷಾಣಾಂ-ರಾಗದ್ವೇಷಾದಿಗಳಿಗೆ, ಸನ್ನಿಧಾನಂ- ಒಳ್ಳೆ ಆಧಾರವಾದ, ಕಪಟಶತಯುತಂ-ಕಪಟ ವೇಷಗಳ, ಶತ ನೂರರಿಂದ ಯುತಂ-ಕೂಡಿಕೊಂಡಿರುವ, ಅಪ್ರತ್ಯಯಾನಾಂ-ಅನೃತಗಳಿಗೆ ಕ್ಷೇತ್ರಂ-ಜನ್ಮಭೂಮಿಸ್ವರೂಪವಾದ, ಸ್ವರ್ಗದ್ವಾರಸ್ಯ-ಸ್ವರ್ಗದಬಾಗಲಿಗೆ, ವಿಘ್ನಃ-ಅಂತರಾಯವಾದ. ನರಕಪುರಮುಖಂ ನರಕಪುರ ಯಮಲೋಕಕ್ಕೆ. ಮುಖಂ ದ್ವಾರವಾಗಿರುವ, ಸರ್ವಮಾಯಾಕರಂಡಂ ಸರ್ವ- ಸಮಸ್ತವಾದ, ಮಾಯಾ- ಶಾಂಬರೀವಿದ್ಯೆ ಇಂದ್ರಜಾಲಮಹೇಂದ್ರಜಾಲ ವಿದ್ಯೆಗಳಿಗೆ, ಕರಂಡಂ ಪೆಟ್ಟಿಗೆಯಾಗಿರುವ, ಅಮೃತವಿಷಮಯಂ-ಅಮೃತ ಅಮೃತರಸರೂಪವಾದ, ವಿಷಮಯಂ- ವಿಷಸ್ವರೂಪವಾದ, ಪ್ರಾಣಿಲೋಕಸ್ಯ-ಪ್ರಾಣಿ- ಜೀವಿಗಳ-ಲೋಕಸ್ಯ- ಪ್ರಪಂಚಕ್ಕೆ ಪಾಶಃ ಬಂಧನಸಾಧನವಾದ, ಸ್ತ್ರೀಯಂತ್ರಂ-ಸ್ತ್ರೀರೂಪವಾದಯಂತ್ರವು, ಕೇನ-ಯಾರಿಂದ, ಸೃಷ್ಟಂ? ನಿರ್ಮಿಸಲ್ಪಟ್ಟಿತೂ? ॥೪೫॥

ಈ ಶ್ಲೋಕದಲ್ಲಿ, ಸ್ತ್ರೀ ಎಂಬುವ ಯಂತ್ರದಲ್ಲಿ ಪಟ್ಟಣಾದಿ ರೂಪಗಳನ್ನು ವರ್ಣಿಸಿರುವದರಿಂದ:—ನಿರವಯವ ರೂಪಕಾಲಂಕಾರವು ಸ್ರ್ಗ್ಧರಾವೃತ್ತವು.

ತಾತ್ಪರ್ಯ—ಸ್ತ್ರೀಯಂತ್ರ ನಿರ್ಮಾಣಕನನ್ನು ನಿಂದಿಸುತ್ತಾನೆ. ಸ್ತ್ರೀರೂಪವಾದ ಯಂತ್ರವು ಸಂಶಯಗಳಿಗೆ ಸುಳಿಯೋಪಾದಿಯಲ್ಲಿರುವದು, ಕೆಟ್ಟಕೆಲಸಗಳಿಗೆ ದೊಡ್ಡ ಊರಾಗಿರುವದು, ಸಾಹಸಕಾರ್ಯಗಳಿಗೆ ರಾಜಧಾನಿಯಾಗಿರುವದು, ದೋಷಗಳಿಗೆ ಆಧಾರಭೂತವಾದದ್ದು, ನೂರಾರು ಸುಳ್ಳುಗಳಿಂದಲೂ, ವಂಚನೆಗಳಿಂದಲೂ ಕೂಡಿರುವದು, ಸ್ವರ್ಗಪ್ರಾಪ್ತಿಗೆ ವಿಘ್ನಕಾರಿಯಾಗಿರುವದು, ಯಮಲೋಕಕ್ಕೆ ಬಾಗಿಲಾಗಿರುವದು, ಇಂದ್ರಜಾಲ ಮಹೇಂದ್ರಜಾಲ ಮಾಯಾವಿದ್ಯೆಗಳಿಗೆ ಪೆಟ್ಟಿಗೆಯಂತಿರುವದು. ಮತ್ತು ನೋಡುವದಕ್ಕೆ ಅಮೃತಮಯವಾಗಿಯೂ, ಅಂತ್ಯದಲ್ಲಿ ವಿಷಮಯವಾಗಿಯೂ ಪ್ರಾಣಿಗಳ ಸಮೂಹಕ್ಕೆ ಬಂಧನ ಪಾಶಸ್ವರೂಪವಾಗಿಯೂ ಇರುವ ಇಂಥಾ ಸ್ತ್ರೀಯಂತ್ರವನ್ನು ಯಾವನು ಸೃಷ್ಟಿಮಾಡಿದನೋ? ಅಂದರೆ ಕೇವಲ ಮಾಯಾಮಯವಾದ ಸ್ತ್ರೀವಿಗ್ರಹವನ್ನು ನಂಬಬಾರದೆಂದೂ, ನಂಬಿದರೆ ಅಧೋಗತಿಯು ತಪ್ಪುವದಿಲ್ಲವೆಂದೂ, ಮುಖ್ಯಾಭಿಪ್ರಾಯವು. ॥೪೫॥

ಶ್ಲೋ॥ ನೈತತ್ಸತ್ಯೇನಮೃಗಾಂಕಏಷವದನೀಭೂತೋನಚೇಂ
ದೀವರ ದ್ವಂದ್ವಂಲೋಚನತಾಂಗತಂನಕನಕೈರಪ್ಯಂ
ಗಯಷ್ಟಿಃಕೃತಾ ॥ ಕಿಂತ್ವೇವಂಕವಿಭಿಃಪ್ರತಾರಿತಮ
ನಾಸ್ತತ್ತ್ವಂ ವಿಜಾನನ್ನಪಿತ್ವಙ್ಮಾಂಸಾಸ್ಥಿಮಯಂವ
ಪುರ್ಮೃಗದೃಶಾಂಮಂದೋಜನಸ್ಸೇವತೇ ॥೪೬॥

ಟೀಕು॥ ಸತ್ಯೇನ-ಯಥಾರ್ಥದಿಂದ, ಏಷಃ- ಈ ಪರಿದೃಶ್ಯಮಾನನಾದ, ಮೃಗಾಂಕಃ-ಚಂದ್ರನ , ಮೃಗದೃಶಾಂ-ಮೃಗ- ಜಿಂಕೆಗಳ, ದೃಶಾಂ- ಕಣ್ಣುಗಳಂತೆ ಕಣ್ಣುಗಳುಳ್ಳ, ಸ್ತ್ರೀಯರುಗಳ ವದನೀಭೂತಃ-ಮುಖವಾಗಿ ಮಾಡಲ್ಪಟ್ಟವನು, ನ-ಆಗಲಿಲ್ಲ, ಇಂದೀವರದ್ವಂದ್ವಂಚ-ಇಂದೀವರ ಕನ್ನೈದಿಲೆಹೂಗಳ, ದ್ವಂದ್ವಂಚ - ಯುಗ್ಮವೂಕೂಡ. ಲೋಚನತಾಂ - ನೇತ್ರಭಾವವನ್ನು, ಗತಂ- ಹೊಂದಿದಂಥಾದ್ದು, ನ- ಆಗಲಿಲ್ಲ, ಕನಕೈರಪಿ- ಸುವರ್ಣದಿಂದಲೂ, ಅಂಗಯಷ್ಟಿಃ-ದಂಡಸದೃಶವಾದ ಅವಯವಗಳು, ನಕೃತಾ- ನಿರ್ಮಿಸಲಿಲ್ಲವು, ಕಿಂತು-ಮತ್ತೇನೆಂದರೆ. ಏವಂ- ಈಪ್ರಕಾರವಾಗಿ, ಕವಿಭಿಃ- ಕವಿಗಳಿಂದ, ಪ್ರತಾರಿತಮನಾಃ- ಪ್ರತಾರಿತ- ವಂಚಿಸಲ್ಪಟ್ಟ, ಮನಾಃ- ಮನಸ್ಸುಳ್ಳವನಾಗಿ, ಸತ್ಯಂ-ಯಥಾರ್ಥವನ್ನು, ವಿಜಾನನ್ನಪಿ- ತಿಳಿದವನಾದಾಗ್ಯೂ, ತ್ವಙ್ಮಾಂಸಾಸ್ಥಿಮಯಂ-ತ್ವಕ್- ಚರ್ಮವು, ಮಾಂಸ- ಮಾಂಸವು, ಅಸ್ಥಿ- ಶಲ್ಯಗಳು, ಇವುಗಳ, ಮಯಂ ವಿಕಾರರೂಪದ, ಮೃಗದೃಶಾಂ- ಸ್ತ್ರೀಯರುಗಳ, ವಪುಃ- ಶರೀರವನ್ನು, ಮಂದಃ-ಮೂಢವಾದಂಥ, ಜನಃ ವು, ಸೇವತೇ-ಸೇವಿಸುತ್ತದೆ

ಈಶ್ಲೋಕದಲ್ಲಿ, ಜುಗುಪ್ಸಾಕರವಸ್ತು ಸೇವನೆಗೆ ಕವಿವಂಚಿತಮನಸ್ಕತ್ವವು ಹೇತುವೆಂಬ ವಿಷಯವನ್ನು ಹೇಳಿರುವದರಿಂದ; - ಪದಾರ್ಥಹೇತುಕಾವ್ಯಲಿಂಗಾಲಂಕಾರವು. ಶಾರ್ದೂಲವಿಕ್ರೀಡಿತ ವೃತ್ತವು.

ತಾತ್ಪರ್ಯ— ಸ್ತ್ರೀ ಸ್ವರೂಪವು ಮಹಾ ಅನರ್ಥಕಾರಿಯಾದಾಗ್ಯೂ ಕವಿಗಳು ಮಹಾ ಚಾತುರ್ಯದಿಂದ ವರ್ಣಿಸಿರುವದನ್ನು ನೋಡಿ ಮೂಢಜನರು ಮೋಹಿಸುತ್ತಾರೆಂಬವಿಷಯವನ್ನು ಹೇಳುತ್ತಾನೆ. ಏನೆಂದರೆ— ಸತ್ಯವಾಗಿಯೂ ಸ್ತ್ರೀಯರಮುಖವು ಚಂದ್ರನಹಾಗಿಲ್ಲ. ನೇತ್ರಗಳೂ ಸಹ ಕನ್ನೈದಿಲೆ ಹೂವುಗಳಂತೆ ಇಲ್ಲವು. ಶರೀರವೂ ಕೂಡ ಸುವರ್ಣದಿಂದ ಮಾಡಿಯಿಲ್ಲ. ಅಂದರೆ ಚಂದ್ರಾರವಿಂದ ಸುವರ್ಣಗಳಿಗಿಂತಲೂ ಸುಂದರವಾಗಿಯೂ ಮನೋಹರವಾಗಿಯೂ ಇರುತ್ತವೆಂಬ ವರ್ಣನೆಗಳೆಲ್ಲವೂ ಕವಿ

ತಾ ಚಾತುರ್ಯಗಳೇ ಹೊರತು ಎಂದಿಗೂ ಸತ್ಯವಾದದ್ದಲ್ಲವು. ಈ ಶರೀರವು ಅಸಹ್ಯಕರವಾದ, ರಕ್ತ, ಮಾಂಸ, ಮೂಳೆಗಳು, ಇವುಗಳಿಂದ ಕೂಡಿರುವ ವಿಚಾರವನ್ನು ಜನರು ತಿಳಿದರೂಕೂಡ ಮಹಾ ಮೂಢರಾಗಿ ಸ್ತ್ರೀ ವ್ಯಾಮೋಹಕ್ಕೆ ಸಿಕ್ಕಿ ನರಳುತ್ತಾರೆಂಬ ಭಾವವು. ||೪೬||

ಶ್ಲೋ|| ಲೀಲಾವತೀನಾಂ ಸಹಜಾವಿಲಾಸಾಸ್ತ ಏವ ಮೂಢಸ್ಯ ಹೃದಿ ಸ್ಫುರಂತಿ| ರಾಗೋ ನಲಿನ್ಯಾ ಹಿ ನಿಸರ್ಗಸಿದ್ಧಸ್ತತ್ರ ಭ್ರಮತ್ಯೇವ ವೃಥಾ ಷಡಂಘ್ರಿಃ || ೪೭ ||

ಟೀಕಾ || ಲೀಲಾವತೀನಾಂ- ವಿಲಾಸಗಳುಳ್ಳ ಸ್ತ್ರೀಯರಿಗೆ, ವಿಲಾಸಾಃ- ಹಾವಭಾವವಿಲಾಸಗಳು, ಸಹಜಾಃ- ಸ್ವಭಾವವಾದವುಗಳು, ತಏವ- ಆಹಾವ ಭಾವವಿಲಾಸಗಳೆಲ್ಲ, ಮೂಢಸ್ಯ-ಮೂಢನ, ಹೃದಿ- ಮನಸ್ಸಿನಲ್ಲಿ, ಸ್ಫುರಂತಿ- ನೆಲೆಗೊಳ್ಳುತ್ತವೆ, ತಥಾಹಿ ಅದುಯುಕ್ತವೇ ಸರಿ, ನಲಿನ್ಯಾಃ-ಕಮಲಕ್ಕೆ, ರಾಗಃ- ರಕ್ತಿಮವು, ನಿಸರ್ಗಸಿದ್ಧಃ ನಿಸರ್ಗ-ಸ್ವಭಾವವಾಗಿ, ಸಿದ್ಧಃ-ಸಿದ್ಧವಾದದ್ದು, ತತ್ರ-ಆಕಮಲದಲ್ಲಿ, ಷಡಂಘ್ರಿಃ ಭ್ರಮರವು, ವೃಥಾ- ವ್ಯರ್ಥವಾಗಿ, ಭ್ರಮತಿ-ಭ್ರಮಿಸುತ್ತದೆ. ||೪೭||

ವಿಶೇಷವಿಷಯ॥ ಈ ಶ್ಲೋಕದ ವಾಕ್ಯದ್ವಯದಲ್ಲಿಯೂ ಬಿಂಬ ಪ್ರತಿ ಬಿಂಬಭಾವದಿಂದ ಸಾಮ್ಯನಿರ್ದೇಶವಾಗಿರುವದರಿಂದ, ದೃಷ್ಟಾಂತಾಲಂಕಾರವು,

ಅತ್ರ, ರಾಗಯೋರ್ದ್ವಯೋರ್ಭೇದೇಪಿ ಶ್ಲೇಷಭಿತ್ತಿಕಾ ಧ್ಯವಸಾಯ ಮೂಲಾತಿಶಯೋಕ್ತಿನಿಗೂಢ ಭ್ರಾಂತಿಮದುಜ್ಜೀವಿತತಯಾ ಪ್ರಸ್ತುತ ನಳಿನೀಷಟ್ಪದವಿಶೇಷೇಣ ಸಾಮಾನ್ಯಾತ್- ಅಪ್ರಸ್ತುತ ಕಾಮಿನೀವಿಟಪ್ರತೀತಿಗೋಚರ ಸಮಾಸೋಕ್ತ್ಯಂಗೇನ ಸಂಕೀರ್ಯತೇ-- ಉಪಜಾತಿವೃತ್ತಂ

ತಾತ್ಪರ್ಯ—ಕಮಲಕ್ಕೆ ಆರುಣ್ಯವು ಸ್ವಭಾವ ಜನ್ಯವಾಗಿರುವದನ್ನು ನೋಡಿ, ಭ್ರಮರಗಳು ಹೇಗೆ ಭ್ರಾಂತಿ ಹೊಂದುತ್ತವೋ ಅದರಂತೆಯೇ ಸುಂದರ ಸ್ತ್ರೀಯರಲ್ಲಿ ಸ್ವಭಾವ ಜನ್ಯವಾಗಿರತಕ್ಕ ಹಾವಭಾವ ವಿಲಾಸಗಳಿಗೆ ಪುರುಷರು ಭ್ರಮಿಸಿ ಮೋಹಗೊಳ್ಳುತ್ತಾರೆಂಬ ಅಭಿಪ್ರಾಯವು. ||೪೭||

ಶ್ಲೋ|| ಯದೇತತ್ಪೂರ್ಣೇಂದುದ್ಯುತಿ ಹರಮುದಾರಾಕೃತಿ ವರಂ ಮುಖಾಬ್ಜಂ ತನ್ವಂಗ್ಯಾಃ ಕಿಲವಸತಿಯತ್ರಾಧರ

ಮಧು || ಇದಂತತ್ಕಿಂಪಾಕದ್ರುಮಫಲಮಿದಾನೀಮತಿರ
ಸಂವ್ಯತೀತೇಸ್ಮಿನ್ಕಾಲೇವಿಷಮಿವಭವಿಷ್ಯತ್ಯಸುಖದಂ||

ಟೀಕು|| ಯದೇತತ್- ಈ ವರ್ಣನೀಯವಾದ, ತನ್ವಂಗ್ಯಾಃ- ಸುಂದರಾಂ ಗಿಯ ಮುಖಾಬ್ಜಂ-ಮುಖಕಮಲವು, ಪೂರ್ಣೇಂದು ದ್ಯುತಿಹರಂ-ಪೂರ್ಣೇಂ ದು-ಪೂರ್ಣಚಂದ್ರನ, ದ್ಯುತಿ- ಕಾಂತಿಯನ್ನು, ಹರಂ- ಅಪಹರಿಸತಕ್ಕದ್ದು ಪರಂ-ಅತ್ಯಂತವಾಗಿ, ಉದಾರ-ಉತ್ಕೃಷ್ಟವಾದ, ಆಕೃತಿ-ಆಕಾರವುಳ್ಳದು, ಕಿಲ-ಆಗಿದೆಯಷ್ಟೆ ? ಯತ್ರವಯಸಿ- ಯಾವಯೌವನವಯಸ್ಸಿನಲ್ಲಿ ಯತ್- ಯಾವದು, ಅಧರಮಧು-ಅಧರಾಮೃತವೋ, ತದೇತತ್ -ಆ ಈ ಅಧರಾಮೃತವು, ಅತಿರಸಂ-ರುಚಿಯಾನ, ಇದಂ ಇದು, ಕಿಂಪಾಕದ್ರುಮ ಫಲ-ಕಿಂಪಾಕ ದ್ರುಮಫಲಂ- ಕಿಂಪಾಕವೆಂಬ ವೃಕ್ಷ ವಿಶೇಷದಫಲವು, ತಸ್ಮಿನ್ಕಾಲೇ- ಆಕಾಲವು, ವ್ಯತೀತೇ ಸತಿ- ಕಳೆದುಹೋಗುತ್ತಿರಲಾಗಿ, ಅಸುಖದಂ- ಸಂಕಟವನ್ನುಂಟು ಮಾಡುತ್ತಿರುವ, ವಿಷಮಿವ - ವಿಷದೋಪಾದಿಯಲ್ಲಿ, ಭವಿಷ್ಯತಿ - ಆಗುತ್ತದೆ, ||೪೮||

ಈಶ್ಲೋಕದಲ್ಲಿ, ಸ್ತ್ರೀಮುಖಾಬ್ಜಕ್ಕೆ ಪೂರ್ಣೇಂದು ದ್ಯುತಿಹರತ್ವವಿರೋಧಾತ್-ವಿರೋಧಾಭಾಸಾಲಂಕಾರವು. ಶಿಖರಿಣೀವೃತ್ತವು.

ತಾತ್ಪರ್ಯ—ಸುಂದರಿಯರ ಮುಖಾಬ್ಜವು ಪೂರ್ಣಚಂದ್ರನ ಕಾಂತಿಯನ್ನು ಸಹ ಅಪಹಾರ ಮಾಡುವಂತೆ ಇರುತ್ತದೆ. ಮತ್ತು ಅಧರೋಷ್ಠಾಸ್ವಾದರಸದಿಂದ ಇದು ಯಾವ ಪುಣ್ಯಪಾಕದ ಫಲವೋ ಅಥವಾ ಕಿಂಪಾಕ ವೃಕ್ಷದ ಫಲವೋ ಎಂಬ ಹಾಗೆ ಇರುತ್ತದೆ. ಆವರೆ ಯೌವನ ವಯಸ್ಸು ಕಳೆದನಂತರ ಆ ಮುಖ್ಯರಸವೇ ವಿಷದೋಪಾದಿಯಲ್ಲಾಗುತ್ತದೆ. ಆದ್ದರಿಂದ ಮನುಷ್ಯರು ಕಾಮಿನಿಯರ ವಿಲಾಸಕ್ಕೆ ಮೋಹಿತರಾಗಿ ಭ್ರಾಂತರಾಗಬಾರದೆಂದು ಮುಖ್ಯ ತಾತ್ಪರ್ಯವು. ||೪೮||

ಶ್ಲೋ|| ಉನ್ಮೀಲತ್ತ್ರಿವಳೀತರಂಗನಿಲಯಾ ಪ್ರೋತ್ತುಂಗ
ಪೀನಸ್ತನದ್ವಂದ್ವೇನೋದ್ಗತಚಕ್ರವಾಕಯುಗಳಾ
ವಕ್ತ್ರಾಂಬುಜೋದ್ಭಾಸಿನೀ || ಕಾಂತಾಕಾರಧರಾನ
ದೀಯಮಭಿತಃಕ್ರೂರಾತ್ರನಾಪೇಕ್ಷತೇಸಂಸಾರಾರ್ಣ
ವಮಜ್ಜನಂಯದಿತದ್ದೂರೇಣಸಂತ್ಯಜ್ಯತಾಂ ||೪೯

ಟೀಕು॥ ಉನ್ಮೀಲತ್ತ್ರಿವಳೀತರಂಗನಿಲಯಾ ಉನ್ಮೀಲತ್‌- ಪ್ರಕಾಶವಾದ ಛಾವ. ತ್ರಿವಳೀ-ವಳಿತ್ರಯಗಳೆಂಬ, ತರಂಗ-ತೆರೆಗಳಿಗೆ, ನಿಲಯಾ ಸ್ಥಾನಭೂತವಾದ, ಪ್ರೋತ್ತುಂಗಪೀನಸ್ತನದ್ವಂದ್ವೇನೋದ್ಗತ ಚಕ್ರವಾಕಯುಗಳಾ ಪ್ರೋತ್ತುಂಗ-ಉನ್ನತವಾದ, ಪೀನ-ಬಲಿತ ಸ್ತನ-ಕುಚಗಳ, ದ್ವಂದ್ವೇನ ಯುಗ್ಮದಿಂದ, ಉದ್ಗತ- ಸಂಚರಿಸುತ್ತಿರುವ, ಚಕ್ರವಾಕ- ಚಕ್ರವಾಕ ಪಕ್ಷಿಗಳ, ಯುಗಳಾ-ಯುಗ್ಮವುಳ್ಳ, ವಕ್ತ್ರಾಂಬುಜೋದ್ಭಾಸಿನೀ ವಕ್ತ್ರ-ಮುಖವೆಂಬ. ಅಂಬುಜ-ಕಮಲದಿಂದ, ಉದ್ಭಾಸಿನೀ- ಪ್ರಕಾಶಮಾನವಾದ, ಕಾಂತಾಕಾರ-ಸ್ತ್ರೀರೂಪವನ್ನು, ಧರಾ- ಧರಿಸಿಕೊಂಡಿರುವ (ಅಥವಾ, ಕಾಂತಾಕಾರ-ಸುಂದರವಾದ ಆಕಾರವನ್ನು, ಧರಾ-ಧರಿಸಿಕೊಂಡಿರುವ, ಅಭಿತಃ-ಎಲ್ಲಾ ಕಡೆಯಲ್ಲಿಯೂ, ಕ್ರೂರಾ-(ಕುಟಿಲಮನಸ್ಸುಳ್ಳ) ವಕ್ರಗತಿಯುಳ್ಳ, ಇಯಂ ನದೀ -ಈ ನದಿಯು, ಅತ್ರ-ಈ ಲೋಕದಲ್ಲಿ, ಸಂಸಾರಾರ್ಣವ ಮಜ್ಜನಂ, ಸಂಸಾರವೆಂಬ, ಅರ್ಣವ - ಸಮುದ್ರದಲ್ಲಿ, ಮಜ್ಜನಂ ಸ್ನಾನವನ್ನು) ನಾಪೇಕ್ಷತೇಯದಿ - ಅಪೇಕ್ಷಿಸದೆ ಹೋದರೆ, ದೂರೇಣ-ದೂರವಾಗಿ, ಸಂತ್ಯಜ್ಯತಾಂ-ಬಿಡಲ್ಪಡಲಿ, ॥೪೯॥

ಈ ಶ್ಲೋಕದಲ್ಲಿ ಸ್ತ್ರೀಯರತ್ರಿವಳಿಗಳನ್ನು ತರಂಗಗಳಾಗಿಯೂ, ಸ್ತನಗಳನ್ನು ಚಕ್ರವಾಕ ಪಕ್ಷಿಗಳಾಗಿಯೂ, ಮುಖವನ್ನು ಕಮಲವಾಗಿಯೂ, ಕೌಟಿಲ್ಯವನ್ನು ಕ್ರೂರ ಜಲಜಂತುಗಳಾಗಿಯೂ, ವರ್ಣಿಸಿರುವದರಿಂದ, ಸಮಸ್ತ ವಸ್ತುವರ್ತಿಸಾವಯವ ರೂಪಕಾಲಂಕಾರವು, ಶಾರ್ದೂಲವಿಕ್ರೀಡಿತ ವೃತ್ತವು.

ತಾತ್ಪರ್ಯ—ಸ್ತ್ರೀ ರೂಪವಾದ ನದಿಯು, ತ್ರಿವಳಿಗಳೆಂಬ ಅಲೆಗಳಿಂದಲೂ, ಕುಚಯುಗ್ಮವೆಂಬ ಚಕ್ರವಾಕ ಪಕ್ಷಿಗಳಿಂದಲೂ, ವಂಚನೆಯ ಮನಸ್ಸೆಂಬ ಕ್ರೂರವಾದ ಜಲಚರಗಳಿಂದಲೂ ಕೂಡಿಕೊಂಡು ಮಹಾಕುಟಿಲ ಗತಿಯಿಂದ ತುಂಬಿಹೋಗಿರುವ ಇಂಥಾ ಮಹಾಕ್ರೂರವಾದ ಸ್ತ್ರೀನದಿಯು ಈ ಪ್ರಪಂಚದಲ್ಲಿ ಸಂಸಾರ ಸಮುದ್ರದಲ್ಲಿ ಮಜ್ಜನ ಮಾಡಬಾರದೆಂಬುವ ಜನಗಳಿಂದ,ಬಿಡಲ್ಪಡಲಿ, ಅಂದರೆ:—ಪುರುಷರು ಕಾಮಮೋಹಿತರಾಗಿ ಸಂಸಾರವೆಂಬ ಮಹಾ ಸಾಗರದಲ್ಲಿ ಬಿದ್ದು ಮುಳುಗಿ ಹೋಗದೆ, ಮಹಾ ಅನರ್ಥಗಳಿಗೆ ಕಾರಣ ಭೂತರಾದ ಸ್ತ್ರೀಯರನ್ನು ವರ್ಜಿಸಬೇಕೆಂಬ ಮುಖ್ಯಾಭಿಪ್ರಾಯವು. ॥೪೯॥

ಶ್ಲೋ|| ಜಲ್ಪಂತಿಸಾರ್ಧಮನ್ಯೇನಪಶ್ಯಂತ್ಯನ್ಯಂಸವಿಭ್ರಮಾಃ || ಹೃದಯೇಚಿಂತಯಂತ್ಯನ್ಯಂಪ್ರಿಯಃಕೋ
ನಾಮಯೋಷಿತಾಂ ||೫೦||

ಟೀಕು || ಸ್ತ್ರಿಯಃ- ಸ್ತ್ರೀಯರುಗಳು, ಅನ್ಯೇನಸಾರ್ಧಂ - ಮತ್ತೊಬ್ಬನೊಡನೆ, ಜಲ್ಪಂತಿ- ಮಾತನಾಡುತ್ತಾರೆ. ಅನ್ಯಂ - ಮತ್ತೊಬ್ಬನನ್ನು ಕುರಿತು, ಸವಿಭ್ರಮಾಃ-ವಿಲಾಸದೊಡನೆ ಕೂಡಿದವರಾಗಿ, ಪಶ್ಯಂತಿ-ನೋಡುತ್ತಾರೆ, ಅನ್ಯಂ-ಮತ್ತೊಬ್ಬ ಪುರುಷನನ್ನು ಕುರಿತು, ಹೃದಯೇ-ಮನಸ್ಸಿನಲ್ಲಿ, ಚಿಂತಯಂತಿ-ಯೋಚಿಸುತ್ತಾರೆ, ಯೋಷಿತಾಂ- ಸ್ತ್ರೀಯರುಗಳಿಗೆ, ಕೋನಾಮ-ಯಾವ ಪುರುಷನುತಾನೆ, ಪ್ರಿಯಃ-ಪ್ರೀಮಪಾತ್ರನು, ಭವತಿ- ಆಗುತ್ತಾನೆ ? ವೃತ್ತಂ ಅನುಷ್ಟುಭಂ. ||೫೦||

ತಾತ್ಪರ್ಯ— ಸ್ತ್ರೀಸ್ವಭಾವವನ್ನು ಅರಿಯುವದಕ್ಕೆ ಆಗುವದಿಲ್ಲವೆಂಬ ವಿಷಯವನ್ನು ಹೇಳುತ್ತಾನೆ. ಹೇಗೆಂದರೆ;—ಕಾಮಿನಿಯರು ಒಬ್ಬ ಪುರುಷನೊಡನೆ ಮಾತನಾಡುತ್ತಾ, ಹಾವಭಾವ ವಿಲಾಸಾದಿಗಳಿಂದ ಇನ್ನೊಬ್ಬ ಪುರುಷನನ್ನು ನೋಡುತ್ತಾ, ಹೃದಯದಲ್ಲಿ ಮತ್ತೊಬ್ಬ ಪುರುಷನನ್ನು ಧ್ಯಾನಿಸುತ್ತಾ ಇರುತ್ತಾರೆ. ಇಂಥಾ ಮಹಾ ಕೃತ್ರಿಮ ಸ್ವಭಾವವುಳ್ಳ ಸ್ತ್ರೀಯರಿಗೆ ಯಾರನ್ನು ಪ್ರಿಯನೆಂದು ಹೇಳುವದಕಾಗುದೀತು? ಅಂದರೆ;- ಮಹಾ ಕೃತ್ರಿಮ ಸ್ವಭಾವವುಳ್ಳ ಇಂಥಾ ಸ್ತ್ರೀಯರನ್ನು ಎಂದಿಗೂ ನಂಬಬಾರದೆಂದು ತಾತ್ಪರ್ಯವು. ||೫೦||

ಶ್ಲೋ|| ಅಪಸರಸಖೇದೂರಾದಸ್ಮಾತ್ಕಟಾಕ್ಷವಿಷಾನಲಾತ್ಪ್ರಕೃತಿವಿಷಮಾದ್ಯೋಷಿತ್ಸರ್ಪಾದ್ವಿಲಾಸಫಣಾಭೃತಃ ||
ಇತರಫಣಿನಾದಷ್ಟಃಶಕ್ಯಶ್ಚಿಕಿತ್ಸಿತುಮೌಷಧೈಶ್ಚತುರ
ವನಿತಾಭೋಗಿಗ್ರಸ್ತಂತ್ಯಜಂತಿಹಿಮಂತ್ರಿಣಃ ||೫೧||

ಟೀಕು|| ಹೇಸಖೇ-ಎಲೈ ಸ್ನೇಹಿತನೆ, ಕಟಾಕ್ಷವಿಷಾನಲಾತ್; ಕಟಾಕ್ಷ- ಕಡೆಗಣ್ಣೋಟವೆಂಬ, ವಿಷಾನಲಾತ್ ವಿಷಾಗ್ನಿಯುಳ್ಳ, ಪ್ರಕೃತಿ- ಸ್ವಭಾವದಿಂದ, ವಿಷಮಾತ್- ವಕ್ರಗಳಾದ, ವಿಲಾಸ ಫಣಾಭೃತಃ ; ವಿಲಾಸ-ವಿಭ್ರಮಗಳೆಂಬ, ಫಣಾ-ಹೆಡೆಗಳನ್ನು, ಭೃತಃ-ಧರಿಸಿಕೊಂಡಿರುವ, ಯೋಷಿತ್ಸರ್ಪಾತ್ ಯೋಷಿತ್-ಸ್ತ್ರೀ ಎಂಬ, ಸರ್ಪಾತ್-ಸರ್ಪದ ಪಸೆಯಿಂದ, ದೂ

ರಾತ್-ದೂರವಾಗಿ, ಅಪಸರ-ಹೊರಟು ಹೋಗುವವನಾಗು, ಇತರ-ಫಣಿನಃ-ಇತರ-ಬೇರೆ ವಿಧವಾದ (ಲೋಕವಾಡಿಕೆಯಾದ) ಫಣಿನಾ-ಸರ್ಪದಿಂದ, ದಷ್ಟಃ-ಕಚ್ಚಲ್ಪಟ್ಟ ಮನುಷ್ಯನು, ಔಷಧೈಃ-ಔಷಧಗಳಿಂದ, ಚಿಕಿತ್ಸಿತುಂ-ವಾಸಿಮಾಡುವದಕ್ಕೋಸ್ಕರ, ಶಕ್ಯಃ-ಸಮರ್ಥನಾಗುತ್ತಾನೆ, ಚತುರ-ವನಿತಾಭೋಗಿಗ್ರಸ್ತಂ; ಚತುರ-ಚಾತುರ್ಯವುಳ್ಳ ವನಿತಾ-ಸ್ತ್ರೀಯೆಂಬುವ, ಭೋಗಿ ಸರ್ಪದಿಂದ, ಗ್ರಸ್ತಂ ಕಡಿಯಲ್ಪಟ್ಟವನನ್ನು, ಮಂತ್ರಿಣಃ-ಮಂತ್ರವಾದಿಗಳೂ ಸಹ, ತ್ಯಜಂತಿಹಿ ಬಿಟ್ಟುಬಿಡುತ್ತಾರಷ್ಟೆ; ||೫೧||

ವಿಶೇಷ ವಿಷಯ! ಇದು ವಿಶಿಷ್ಟ ವಸ್ತುಸಾಮ್ಯವುಳ್ಳ ರೂಪಕಾಲಂಕಾರವು.

ಈ ಶ್ಲೋಕದಲ್ಲಿ, ಉಪಮಾನ ಭೂತವಾದ ಸರ್ಪಾದಿಗಳಿಗಿಂತಲೂ ಉಪಮೇಯ ಭೂತವಾದ ಸ್ತ್ರೀಯಲ್ಲಿ; ವಿಷಯಾಧಿಕ್ಯ ವರ್ಣನೆಯನ್ನು ಮಾಡಿರುವದರಿಂದ; = ವ್ಯತಿರೇಕಾಲಂಕಾರಃ ವ್ಯಜ್ಯತೇ ||

ತಾತ್ಪರ್ಯ — ಎಲೈ ಸ್ನೇಹಿತನೆ! ಕಡೆಗಣ್ಣನೋಟವೆಂಬ ವಿಷಾಗ್ನಿ ಜ್ವಾಲೆಯಿಂದ ಕೂಡಿ, ವಿಲಾಸಗಳೆಂಬ ಹೆಡೆಗಳನ್ನುಳ್ಳದ್ದಾಗಿ ಸ್ವಭಾವದಿಂದಲೆ ವಕ್ರಾಕಾರವಾದ ಸ್ತ್ರೀ ಸರ್ಪದ ದೆಸೆಯಿಂದ ದೂರವಾಗಿ ಹೊರಟುಹೋಗು; ಏತಕ್ಕೆಂದರೆ ಲೋಕವಾಡಿಕೆಯಾದ ಸರ್ಪದಿಂದ ಕಡಿಯಲ್ಪಟ್ಟವನನ್ನು ಮಂತ್ರೌಷಧಾದಿಗಳಿಂದ ಹೇಗಾದರೂ ಬದುಕಿಸಿಕೊಳ್ಳಬಹುದು, ಸ್ತ್ರೀಸರ್ಪವು ಕಡದರೆ ಯಾವ ವೈದ್ಯನೂ, ಮಂತ್ರವಾದಿಯೂ ಸಹ ಆ ವಿಷವನ್ನು ಇಳಿಸಿ ಬದುಕಿಸಲಾರರು ಅಂದರೆ ಸರ್ಪ ವಿಷಕ್ಕಿಂತಲೂ ಹೆಚ್ಚಾದ ವಿಷಸ್ವಭಾವವುಳ್ಳ ಸ್ತ್ರೀಯನ್ನು ಪುರುಷನು ವರ್ಜಮಾಡಬೇಕೆಂಬ ಮುಖ್ಯಾಶಯವು. ||೫೧||

ಶ್ಲೋ|| ವಿಸ್ತಾರಿತಂ ಮಕರಕೇತನಧೀವರೇಣ ಸ್ತ್ರೀಸಂಜ್ಞಿತಂ
ಬಡಿಶಮತ್ರ ಭವಾಂಬುರಾಶೌ || ಯೇನಾಚಿರಾತ್ತದಧ
ರಾಮಿಷಲೋಲಮರ್ತ್ಯಮತ್ಸ್ಯಾನ್ವಿಕೃಷ್ಯ ವಿಪಚತ್ಯ
ನುರಾಗವಹ್ನೌ ||೫೨||

ಟೀಕು || ಮಕರಕೇತನಧೀವರೇಣ; ಮಕರ-ಮೊಸಳೆಯೇ, ಕೇತನ-ಧ್ವಜವಾಗಿಉಳ್ಳ ಮನ್ಮಥನೆಂಬ, ಧೀವರೇಣ ಬೆಸ್ತರವನಿಂದ, ಅತ್ರ-ಈ, ಭವಾಂಬುರಾಶೌ; ಭವ-ಸಂಸಾರವೆಂಬ, ಅಂಬುರಾಶೌ-ಸಮುದ್ರದಲ್ಲಿ,

ಸ್ತ್ರೀಸಂಜ್ಞಿತಂ - ಸ್ತ್ರೀಎಂಬ ಹೆಸರುಳ್ಳ, ಬಡಿಶಯಂತ್ರಂ - ಮತ್ಸ್ಯಗ್ರಹಣ ಯಂತ್ರವು, ವಿಸಾರಿತಂ-ಬೀಸಲ್ಪಟ್ಟ ಯೇನ-ಯಾವಸ್ತ್ರೀರೂಪವಾದ ಮತ್ಸ್ಯಯಂತ್ರದಿಂದ, ಆಚಿರಾತ್-ಜಾಗ್ರತೆಯಾಗಿ, ತದಧರಾಮಿಷ ಮತ್ಯ್ಯ ಮತ್ಸ್ಯಾನ್; ತತ್-ಆಸ್ತ್ರೀಯ, ಅಧರ- ತುಟಿಯೆಂಬುವ, ಆಮಿಷ ಮಾಂಸದಲ್ಲಿ, ಲೋಲ ಆಸಕ್ತವಾದ, ಮರ್ತ್ಯ-ಮನುಷ್ಯರೆಂಬ ಮತ್ಸ್ಯಾನ್-ಮೀನುಗಳನ್ನು, ವಿಕೃಷ್ಯ - ಎಳೆದು, ರಾಗವಹ್ನೌ ; ನುರಾಗ - ಮೋಹವೆಂಬ, ವಹ್ನೌ-ಅಗ್ನಿಯಲ್ಲಿ, ವಿಪಚತಿ- ವಿಶೇಷವಾಗಿ ಬೇಯಿಸುತ್ತಾನೆ. ಅತ್ರಾಪಿ, ಪೂರ್ವವದ್ರೂಪಕಾಲಂಕಾರಃ. ||೫೨||

ತಾತ್ಪರ್ಯ—ಮನ್ಮಥನೆಂಬ ಬೆಸ್ತನು ಈ ಸಂಸಾರವೆಂಬ ಮಹಾಸಾಗರದಲ್ಲಿ ಸ್ತ್ರೀಎಂಬ ಮತ್ಸ್ಯಗ್ರಹಣ ಯಂತ್ರವನ್ನು ನಿರ್ಮಿಸಿ ಅವರ ಅಧರೋಷ್ಠವೆಂಬ ಮಾಂಸಖಂಡದಲ್ಲಿ ಆಸಕ್ತರಾದ ಮನುಷ್ಯರೆಂಬ ಮೀನುಗಳನ್ನು ಹಿಡಿದು, ಸ್ತ್ರೀಮೋಹವೆಂಬ ಅಗ್ನಿಯಲ್ಲಿ ಚೆನ್ನಾಗಿ ಬೇಯಿಸುತ್ತಾನೆ. ಅಂದರೆ ಸ್ತ್ರೀವ್ಯಾಮೋಹಕ್ಕೆ ಸಿಕ್ಕಿದ ಪುರುಷನು ಅಗ್ನಿಯಲ್ಲಿ ಬೆಂದವನಿಗಿಂತಲೂ ಹೆಚ್ಚಾಗಿ ನಾನಾ ವಿಧವಾದ ತೊಂದರೆಗಳನ್ನು ಅನುಭವಿಸುತ್ತಾನೆ. ಎಂದು ತಾತ್ಪರ್ಯವು. ||೫೨||

ಶ್ಲೋ|| ಕಾಮಿನೀಕಾಯಕಾಂತಾರೇಕುಚಪರ್ವತದುರ್ಗಮೇ ||
ಮಾ ಸಂಚರಮನಃಪಾಂಥತತ್ರಾಸ್ತೇಸ್ಮರತಸ್ಕರಃ ||

ಟೀಕಾ || ಹೇಮನಃಪಾಂಥ ಎಲೈ ಮನಸ್ಸೆಂಬ ಮಾರ್ಗಸ್ಥನೇ, ಕುಚಪರ್ವತದುರ್ಗಮೇ ; ಕುಚ-ಕುಚಗಳೆಂಬ, ಪರ್ವತ- ಬೆಟ್ಟಗಳಿಂದ, ದುರ್ಗಮೇ - ಸಂಚರಿಸಲಸಾಧ್ಯವಾದ, ಕಾಮಿನೀಕಾಯಕಾಂತಾರೇ ; ಕಾಮಿನೀ-ಸ್ತ್ರೀಯ, ಕಾಯ-ಶರೀರವೆಂಬ ಕಾಂತಾರೇ- ಅರಣ್ಯದಲ್ಲಿ, ಮಾಸಂಚರ-ಸಂಚಾರ ಮಾಡಬೇಡ, ತತ್ರ ಆ ಅರಣ್ಯದಲ್ಲಿ, ಸ್ಮರ- ಮನ್ಮಥನೆಂಬ, ತಸ್ಕರಃ-ಕಳ್ಳನು, ಆಸ್ತೇ-ಇದ್ದಾನೆ, ಪೂರ್ವವತ್ ರೂಪಕಾಲಂಕಾರಃ ಅನುಷ್ಟುಪ್ ವೃತ್ತಂ ||೫೩||

ತಾತ್ಪರ್ಯ—ಈ ಶ್ಲೋಕದಲ್ಲಿ ಮನಸ್ಸನ್ನು ಭಯಪಡಿಸುತ್ತಾನೆ. ಎಲೈ ಮನಸ್ಸೆಂಬ ಮಾರ್ಗಸ್ಥನೆ ಕುಚಗಳೆಂಬ ಪರ್ವತಗಳಿಂದ ಸಂಚಾರ ಮಾಡುವದಕ್ಕೆ ಅಸಾಧ್ಯವಾಗಿ, ಸ್ತ್ರೀಕಾಯವೆಂಬ ಮಹಾರಣ್ಯದಲ್ಲಿ ಮನ್ಮಥನೆಂಬ ಕಳ್ಳನು ಸೇರಿಕೊಂಡಿರುವನಾದಕಾರಣ ಅಲ್ಲಿ ಸಂಚಾರ ಮಾಡಬೇ

ಡ. ಅಂದರೆ:—ಸ್ತ್ರೀವ್ಯಾಮೋಹಕ್ಕೆ ಸಿಕ್ಕಿ ಕಾಮೋಚಿತ ನಾಗಬೇಡವೆಂದು ಭಾವವು. ||೫೩||

ಶ್ಲೋ|| ವ್ಯಾದೀರ್ಘೇಣಚಲೇನವಕ್ರಗತಿನಾ ತೇಜಸ್ವಿನಾಭೋಗಿನಾ ನೀಲಾಬ್ಜದ್ಯುತಿನಾಹಿನಾಪರಮಹಂದಷ್ಟೋನ ತಚ್ಚಕ್ಷುಷಾ || ದಷ್ಟೇಸ್ಸಂತಿಚಿಕಿತ್ಸಕಾದಿಶಿದಿಶಿ ಪ್ರಾಯೇಣಧರ್ಮಾರ್ಥಿನೋ ಮುಗ್ಧಾಕ್ಷೀಕ್ಷಣವೀಕ್ಷಿತಸ್ಯ ನಹಿಮೇವೈದ್ಯೋನಚಾಪ್ಯೌಷಧಂ ||೫೪||

ಟೀಕು || ವ್ಯಾದೀರ್ಘೇಣ-ಅತಿದೀರ್ಘವಾದ, ಕರ್ಣಾಂತ - ವಿಶ್ರಾಂತವಾದ, ಚಲೇನ ಚಂಚಲವಾದ, (ಚಲಿಸುತ್ತಲಿರುವ) ವಕ್ರಗತಿನಾ-ಸ್ವಭಾವದಿಂದ ಕುಟಿಲಸಂಚಾರವುಳ್ಳ, ತೇಜಸ್ವಿನಾ-ಪ್ರಕಾಶವಾನವಾದ, (ಬಲವಂತವಾದ) ಭೋಗಿನಾ-ಹೆಡೆಯುಳ್ಳ, (ಮತ್ತು ಸುಖವುಳ್ಳ) ವಿಸ್ತಾರವಾದ; ನೀಲಾಬ್ಜದ್ಯುತಿನಾ ನೀಲಾಬ್ಜ-ಕನ್ನೈದಿಲೆ ಹೂವಿನ, ದ್ಯುತಿನಾ- ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಅಹಿನಾ-ಸರ್ಪದಿಂದ, ಅಹಂ-ನಾನು ದೃಷ್ಟಃ-ಕಡಿಯಲ್ಪಟ್ಟವನಾದೆ, ಕಿಂತು - ಮತ್ತೇನಂದರೋ, ತಚ್ಚಕ್ಷುಷಾ ; ತತ್-ಆ ಸ್ತ್ರೀಯ, ಚಕ್ಷುಷಾ-ದೃಷ್ಟಿಯಿಂದ, ನದಷ್ಟಃ ಕಡಿಯಲ್ಪಡಲಿಲ್ಲ. ಪ್ರಾಯೇಣ-ಬಹುಪ್ರಕಾರವಾಗಿ, ದಿಶಿದಿಶಿ ದಿಕ್ಕುದಿಕ್ಕುಗಳಲ್ಲಿಯೂ ಧರ್ಮಾರ್ಥಿನಃ ಧರ್ಮಾರ್ಥರಾದ, ಚಿಕಿತ್ಸಕಾಃ-ವೈದ್ಯರು, ಸಂತಿ-ಇದ್ದಾರೆ, ಮುಗ್ಧಾಕ್ಷೀಕ್ಷಣವೀಕ್ಷಿತಸ್ಯ ; ಮುಗ್ಧ-ಸುಂದರಸ್ತ್ರೀಯ, ಅಕ್ಷಿ-ನೇತ್ರಗಳಿಂದ, ಕ್ಷಣ-ಕ್ಷಣಕಾಲ, ವೀಕ್ಷಿತಸ್ಯ ನೋಡಲ್ಪಟ್ಟ, ಮೇ-ನನಗೆ, ವೈದ್ಯಃ- ವೈದ್ಯನೂ, ಔಷಧಮಪಿಚ ಔಷಧವೂ ಕೂಡ. ನಹಿ-ಇಲ್ಲ. ||೫೪||

ತಾತ್ಪರ್ಯ—ಸ್ತ್ರೀಕಡೆಗಣ್ಣೋಟವು ಸರ್ಪವಿಷಕ್ಕಿಂತಲೂ ತೀವ್ರವಾದ ವಿಷವೆಂತಲೂ, ಮಹತ್ತರವಾದ ವಿಷವುಳ್ಳ ಕೃಷ್ಣಸರ್ಪದಿಂದ ಕಡಿಯಲ್ಪಟ್ಟವಗೂ ಕೂಡ ಔಷಧಉಂಟು, ಆದರೆ ಸ್ತ್ರೀಕಟಾಕ್ಷ ಸರ್ಪದಿಂದ ಕಡಿಯಲ್ಪಟ್ಟವನಿಗೆ ಔಷಧವೇ ಇಲ್ಲವೆಂಬ ವಿಷಯವನ್ನು ಈ ಶ್ಲೋಕದಲ್ಲಿಯೂ ಹೇಳುತ್ತಾನೆ. ಹೇಗಂದರೆ:—ಸರ್ಪವು ಉದ್ದವಾಗಿರುತ್ತೆ, ಸ್ತ್ರೀಯನೇತ್ರಗಳು ಆಕರ್ಣಾಂತವಾಗಿರುತ್ತವೆ ಸರ್ಪದಚಲನೆಯಂತೆ ಸ್ತ್ರೀಯರ ದೃಷ್ಟಿಯೂ ಸಹ ಬಹಳ ಚಪಲವಾದದ್ದು, ಸರ್ಪವು ಕರಿಯನೈದಿಲೆ

ಯ ಬಣ್ಣದಂತೆ ಕಪ್ಪುಬಣ್ಣವುಳ್ಳದ್ದು, ಇಂಥಾ ಮಹತ್ತಾದ ವಿಷವುಳ್ಳ
ಕೃಷ್ಣಸರ್ಪದಿಂದ ನಾನು ಕಡಿಯಲ್ಪಟ್ಟೆ. ಆದರೆ ಸ್ತ್ರೀಕಟಾಕ್ಷ ಸರ್ಪದಿಂ
ದ ಮಾತ್ರ ನಾನು ಕಡಿಯಲ್ಪಡಲಿಲ್ಲ, ಮಹಾ ವಿಷಸರ್ಪದಿಂದ ಕಡಿಯಲ್ಪ
ಟ್ಟ ನನಗೆ ವಿಷಹರವನ್ನು ಮಾಡುವ ಪುಣ್ಯಾತ್ಮರಾದ ವೈದ್ಯರು ದಿಕ್ಕುದಿ
ಕ್ಕಿನಲ್ಲಿಯೂ ಇದ್ದಾರೆ. ಸುಂದರ ಸ್ತ್ರೀಕಟಾಕ್ಷ ಸರ್ಪದಿಂದ ಕ್ಷಣಮಾತ್ರ
ಕಡಿಯಲ್ಪಟ್ಟವನಿಗೆ, ವಿಷಹಾರಕರಾದ ವೈದ್ಯರು ಎಲ್ಲಿಯೂ ಸಿಕ್ಕುವದಿಲ್ಲ.
ಅಂದರೆ ಸ್ತ್ರೀಕಟಾಕ್ಷವೆಂಬ ವಿಷಪಾಶವು ಸರ್ಪದ ಕಷ್ಟಕ್ಕಿಂತಲೂ
ಮಹಾ ಕಟುವಾದದ್ದೆಂದು ಭಾವವು. ॥೫೪॥

ಈ ಶ್ಲೋಕದಲ್ಲಿ ಸ್ತ್ರೀಕಟಾಕ್ಷದಲ್ಲಿ ಸರ್ಪತ್ವವನ್ನು ಆರೋಪಣೆ
ಮಾಡಿದ್ದರಿಂದ:—ಸಾವಯವ ರೂಪಕಾಲಂಕಾರವು. ಉಪಮಾನಕ್ಕಿಂ
ತಲೂ ಉಪಮೇಯದಲ್ಲಿ ಆಧಿಕ್ಯವರ್ಣನೆಯನ್ನು ಮಾಡಿರುವದರಿಂದ, ವ್ಯತಿ
ರೇಕಾಲಂಕಾರವೂ ತೋರುತ್ತೆ. ಹರಿಣೀವೃತ್ತವು.

ಶ್ಲೋ॥ ಇಹಹಿಮಧುರಗೀತಂನೃತ್ತಮೇತದ್ರಸೋಽಯಂ ಸ್ಫು
ರತಿಪರಿಮಳೋಽಸೌಸ್ಪರ್ಶಏಷಸ್ತನಾನಾಂ ॥ ಇತಿಹತ
ಪರಮಾರ್ಥೈರಿಂದ್ರಿಯೈರ್ಭ್ರಾಮ್ಯಮಾಣಸ್ಸ್ವಹಿತ
ಕರಣಧೂರ್ತೈಃಪಂಚಭಿರ್ವಂಚಿತೋಽಸ್ಮಿ ॥ ೫೫ ॥

ಟೀಕಾ॥ ಇಹಹಿ ಈ ಸ್ತ್ರೀಯರುಗಳಲ್ಲಿ ತಾನೆ, ಮಧುರ-ಮನೋಹರ
ವಾದ, ಗೀತಂ-ಗಾನವು, ಸ್ಫುರತಿ- ಪ್ರಕಾಶಿಸುತ್ತದೆ ? ಏತತ್-ಈ ನಯನಾ
ನಂದಕರವಾದ, ನೃತ್ಯಂ-ನಾಟ್ಯವು, ಸ್ಫುರತಿ-ಪ್ರಕಾಶಿಸುತ್ತದೆ,ಅಯಂ ಇದು
(ರಸನೇಂದ್ರಿಯ ಸ್ವಾದುಕರವಾದ ರಸವು) ಸ್ಫುರತಿ - ಪ್ರಕಾಶಿಸುತ್ತದೆ,
ಅಸೌ-ಈ ಘ್ರಾಣತರ್ಪಣದ, ಪರಿಮಳಃ ಸುಗಂಧವು, ಸ್ಫುರತಿ-ಪ್ರಕಾಶಿ
ಸುತ್ತದೆ, ಏಷಃ-ತ್ವಗಿಂದ್ರಿಯ ಸುಖಕರವಾದ, ಕುಚಾನಾಂ ಸ್ತನಗಳ, ಸ್ಪ
ರ್ಶಃ-ಮುಟ್ಟೋಣವು, ಸ್ಫುರತಿ-ಪ್ರಕಾಶಿಸುತ್ತದೆ, ಇತಿ- ಈ ಪ್ರಕಾರವಾಗಿ,
ಹತಪರಮಾರ್ಥೈಃ- ; ಹತ-ಹೊಡೆಯಲ್ಪಟ್ಟ, ಪರಮಾರ್ಥಾಃ ತತ್ತ್ವಾರ್ಥ
ಗಳುಳ್ಳವುಗಳಾದ ಕಾರಣದೇ, ಸ್ವಹಿತಕರಣಧೂರ್ತೈಃ-ಸ್ವ-ತನಗೆ, ಹಿತ-
ಇಷ್ಟವನ್ನು, ಕರಣ ಮಾಡುವದರಲ್ಲಿ, ಧೂರ್ತೈಃ- ವಂಚಿತಗಳಾದ, ಪಂಚ
ಭಿಃ ಐದಾದ-ಘಾ, ಇಂದ್ರಿಯೈಃ ಶಬ್ದಸ್ಪರ್ಶ, ರೂಪ, ರಸ. ಗಂಧಾದಿ ಇಂದ್ರಿ

ಯಗಳಿಂದ, ಭ್ರಾಮ್ಯಮಾಣಃ ತದ್ವಿಷಯಾಸಕ್ತಿಯುಳ್ಳವನಾಗಿ, ವಂಚಿತಃ-ಮೋಸವಮಾಡಲ್ಪಟ್ಟವನು, ಅಸ್ಮಿ-ಆಗಿದ್ದೇನೆ, ಮಾಲಿನೀ ವೃತ್ತವು. ವೃತ್ತ ಲಕ್ಷಣಂತು ನನಮಯಯ ಯುತೇಯಂ ಮಾಲಿನೀ ಭೋಗಿಲೋಕೈಃ ॥೫೫॥

ತಾತ್ಪರ್ಯ—ಪಂಚೇಂದ್ರಿಯಗಳು ಸ್ತ್ರೀಯರಲ್ಲಿ ಮೋಹಿತವಾಗಿ ತನಗೆ ಪರಗತಿಗೆ ತೊಂದರೆಮಾಡುತ್ತಾದ್ದರಿಂದ ಕಾಮಿನಿಯರನ್ನು ನೋಡಿ ಭ್ರಮಿಸಬಾರದೆಂಬ ವಿಷಯವನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಹೇಗಂದರೆ;—ಸ್ತ್ರೀಯರು ಮಾಡುವ ಗಾನದಿಂದ ಶ್ರೋತ್ರೇಂದ್ರಿಯವು ಭ್ರಮಿಸುತ್ತದೆ. ಅಂದರೆ ಸ್ತ್ರೀಯು ಎಲ್ಲಿ ಇಂಪಾಗಿ ಗಾನಮಾಡುತ್ತಾಳೆಯೋ ಅಲ್ಲಿಗೆ ಹೋಗಿ ಕೇಳೋಣವೆಂಬ ಅಭಿಲಾಷೆಯುಳ್ಳದ್ದಾಗಿ ಶಬ್ದೇಂದ್ರಿಯವು, ಅವರ ನಾಟ್ಯವನ್ನು ನೋಡಿ ಚಕ್ಷುರಿಂದ್ರಿಯವು, ಅವರು ತೋರಿಸುವ ತೊಂಡೇಹಣ್ಣಿಗೆ ಸಮಾನವಾದ ಅಧರ ಬಿಂಬಪಾನದಿಂದ ರಸನೇಂದ್ರಿಯವು, ಅಂದರೆ ನಾಲಗೆಯೂ, ಅವರ ಮುಖವಾಸನೆಯಿಂದ ಘ್ರಾಣೇಂದ್ರಿಯವು, ಅವರ ಕುಚಮರ್ದನದಿಂದ ತ್ವಗಿಂದ್ರಿಯವು, ಮೋಹಿತಗಳಾಗಿ ಪರಮಾರ್ಥವನ್ನು ಯೋಚಿಸದೆ ಈಪ್ರಕಾರ ಶಬ್ದಸ್ಪರ್ಶಾದಿ ಪಂಚೇಂದ್ರಿಯ ವಾಪಾರಗಳಲ್ಲಿ ಬಳಲಿ ಮತ್ತು ವಂಚಿಸಲ್ಪಡುವವನಾದೆನು ಆದ್ದರಿಂದ ಎಲೈ ಸ್ನೇಹಿತನೆ! ನೀನು ಇಂದ್ರಿಯ ಕರಣಗಳಿಗೆ ಪರವಶನಾಗಿ ಮೋಸ ಹೋಗಬೇಡವೆಂದು ಬುದ್ಧಿವಾದಾಭಿಪ್ರಾಯವು. ॥೫೫॥

ಶ್ಲೋ ॥ ನಗಮ್ಯೋಮಂತ್ರಾಣಾಂನಚಭವತಿ ಭೈಷಜ್ಯವಿಷಯೋನಚಾಪಿಪ್ರಧ್ವಂಸಂವ್ರಜತಿವಿವಿಧೈಃಶಾಂತಿಕಶತೈಃ ॥ ಭ್ರಮಾವೇಶಾದಂಗೇಕಮಪಿವಿದಧದ್ಭಂಗಮಸಕೃತ್ಸ್ಮರಾಪಸ್ಮಾರೋಯಂಭ್ರಮಯತಿದೃಶಂಘೂರ್ಣಯತಿಚ ॥೫೬॥

ಟೀಕಾ ॥ ಮಂತ್ರಾಣಾಂ-ಮಂತ್ರಗಳಿಗೆ, ನಗಮ್ಯಃ-ಸಾಧ್ಯವಾದಂಥಾದ್ದಾಗುವದಿಲ್ಲವು, ಭೈಷಜ್ಯ ವಿಷಯಃ ; ಭೈಷಜ್ಯ-ಔಷಧಗಳಿಗೆ, ವಿಷಯಃ-ಸಾಧ್ಯವಾಗುವಂಥಾದ್ದು, ನಚಭವತಿ-ಆಗುವದೇ ಇಲ್ಲವು. ವಿವಿಧೈಃ-ನಾನಾವಿಧಗಳಾದ, ಶಾಂತಿಶತಕೈಃ-ನೂರಾರು ಶಾಂತಿಗಳಿಂದಲೂ, ಪ್ರಧ್ವಂಸಂ-

ನಾಶವನ್ನು, ನಪ್ರಜತಿ-ಹೊಂದುವದಿಲ್ಲವು, ಭ್ರಮಾವೇಶಾತ್ ಮೋಹಾವೇಶದ ಧೆಸೆಯಿಂದ, ಅಂಗೇಷು ಅವಯವಗಳಲ್ಲಿ, ಭಂಗಂ-ವೈಕಲ್ಯವನ್ನು, ಅಪಕೃತ್-ಅತ್ಯಂತವಾಗಿ ವಿದಧತ್-ಉಂಟುಮಾಡುತ್ತಲಿರುವ, ಸ್ಮರಾಪಸ್ಮಾರಃ ಸ್ಮರ-ಮನ್ಮಥನೆಂಬ, ಅಪಸ್ಮಾರಃ- ಅಪಸ್ಮಾರ ಜಾಡ್ಯವು, ದೃಶಂ ದೃಷ್ಟಿಯನ್ನು, ಭ್ರಮಯತಿ-ಭ್ರಾಂತಿಗೊಳಿಸುತ್ತದೆ, ಘೂರ್ಣಯತಿಚ-ಮತ್ತು ತಿರುಗಿಸುತ್ತದೆ, ಪೂರ್ವವದ್ವ್ಯತಿರೇಕಾಲಂಕಾರಃ ಶಿಖರಿಣೀ ವೃತ್ತವು. ॥೫೬॥

ತಾತ್ಪರ್ಯ—ಈ ಶ್ಲೋಕದಲ್ಲಿ, ಕಾಮುಕರಿಗೆ ಉಂಟಾಗತಕ್ಕ ಕಾಮಜ್ವರಕ್ಕೆ ಯಾವವಿಧವಾದ ಚಿಕಿತ್ಸೆಗಳೂ ಇಲ್ಲವೆಂಬ ವಿಷಯವನ್ನು ಹೇಳುತ್ತಾನೆ. ಹೇಗೆಂದರೆ:—ಪುರುಷರಿಗೆ ಉಂಟಾಗತಕ್ಕ ಕಾಮಜ್ವರವು ಮಂತ್ರಗಳಿಂದ ಹೋಗುವದಿಲ್ಲ, ಔಷಧಗಳಿಂದ ನಾಶವಾಗುವದಿಲ್ಲ, ನಾನಾ ರೀತಿ ಶಾಂತಿಕರ್ಮಗಳಿಂದ, ಅಂದರೆ ದೇವತಾರ್ಚನೆ ಜಪತಪಹೋಮಾದಿಗಳಿಂದಲೂ ನಾಶವಾಗುವದಿಲ್ಲ, ಈರೀತಿಯಾದ ಕಾಮಜ್ವರವೆಂಬ ಅಪಸ್ಮಾರ ಜಾಡ್ಯವು ಶರೀರದಲ್ಲಿ ಆವರಿಸಿಕೊಂಡು ಅವಯವಗಳನ್ನು ಶಿಥಿಲವಾಗಿಮಾಡಿ, ಕಣ್ಣುಗಳನ್ನು ಸಹ ಕೆಂಪಗೆ ಮಾಡಿರುತ್ತದೆ. ಅಂದರೆ ಕಾಮಿನಿಯರ ಸಹವಾಸವು ಬಹಳ ಕೆಟ್ಟದೆಂದು ಅಭಿಪ್ರಾಯವು. ॥೫೬॥

ವಿಶೇಷವಿಷಯ ಈ ಶ್ಲೋಕದಲ್ಲಿ ಮನುಷ್ಯನಿಗೆ ಕಾಮವಿಕಾರದಿಂದ ಬುದ್ಧಿ ಶೂನ್ಯವಾಗಿ ಶರೀರ ಕಾರ್ಶ್ಯಾದಿ ದಶಾವಸ್ಥೆಗಳುಂಟಾಗುವದೆಂಬ ವಿಷಯವನ್ನು ಹೇಳಿದ್ದಾನೆ. ದಶಾವಸ್ಥೆಗಳೆಂದರೆ;—ರತಿರಹಸ್ಯದಲ್ಲಿ.

ಶ್ಲೋ॥ ಚಕ್ಷುಃಪ್ರೀತಿರ್ಮನಸ್ಸಂಗಸ್ಸಂಕಲ್ಪೋಥಪ್ರಳಾಪಿತಾ ॥
ಜಾಗರಃಕಾರ್ಶ್ಯಮರತಿಃಲಜ್ಜಾತ್ಯಾಗೋಥಸಂಜ್ವರಃ। ಉನ್ಮಾದೋಽಮೂರ್ಛನಂ ಚೈವಚರಮಂ ಮರಣಂ ವಿದುಃ ॥
ಎಂಬರೀತ್ಯಾ ದಶಾವಸ್ಥೆಗಳನ್ನು ಹೇಳಿದ್ದಾನೆ.

ಶ್ಲೋ॥ ಜಾತ್ಯಂಧಾಯಚದುರ್ಮುಖಾಯಚಜರಾಜೀರ್ಣಾಖಿಲಾಂಗಾಯಚಗ್ರಾಮೀಣಾಯಚದುಷ್ಕುಲಾಯಚಗಳತ್ಕುಷ್ಠಾಭಿಭೂತಾಯಚ ॥ ಯಚ್ಛಂತೀಷುಮನೋಹರಂ ನಿಜವಪುರ್ಲಕ್ಷ್ಮೀಲವಶ್ರದ್ಧಯಾಪಣ್ಯಸ್ತ್ರೀಷುವಿವೇಕಕಲ್ಪಲತಿಕಾಶಸ್ತ್ರೀಷುರಜ್ಯೇತಕಃ ॥೫೭॥

ಟೀಕಾ॥ ಜಾತ್ಯಂಧಾಯಚ-ಹುಟ್ಟುಕುರುಡನಿಗೋಸ್ಕರವೂ, ದುರ್ಮುಖಾಯಚ-ರೋಗಾದಿಗಳಿಂದ ದುರ್ಗಂಧವಾದ ಮುಖವುಳ್ಳ ಮನುಷ್ಯನಿಗೋಸ್ಕರವು, ಜರಾಜೀರ್ಣಾಖಿಲಾಂಗಾಯಚ; ಜರಾ ಮುಪ್ಪಿನಿಂದ, ಜೀರ್ಣ-ಶಿಥಿಲವಾದ, ಅಖಿಲಾಂಗಾಯಚ- ಅವಯವಗಳುಳ್ಳವನಿಗೋಸ್ಕರವು, ಗಳತ್ಕುಷ್ಠಾಭಿ ಭೂತಾಯಚ, ಗಳತ್-ಸುರಿಯುತ್ತಿರುವ, ಕುಷ್ಠ-ಕುಷ್ಠರೋಗದವನಾದ್ದರಿಂದ, ಅಭಿಭೂತಾಯಚ-ತಿರಸ್ಕೃತನಾದವನಿಗೋಸ್ಕರವು, ಗ್ರಾಮೀಣಾಯಚ ಮೂಢನಿಗೋಸ್ಕರವು, ದುಷ್ಕುಲಾಯಚ-ನೀಚಕುಲದಲ್ಲಿ ಹುಟ್ಟಿದವನಿಗೋಸ್ಕರವು, ಮನೋಹರಂ- ಸುಂದರವಾದ, ನಿಜವಪುಃ-ತಮ್ಮ ಶರೀರವನ್ನು, ಲಕ್ಷ್ಮೀಲವ ಶ್ರದ್ಧಯಾ ; ಲಕ್ಷ್ಮೀ-ಐಶ್ವರ್ಯದ, ಲವ-ಲೇಶವೆಂಬ, ಶ್ರದ್ಧಯಾ-ಆಸೆಯಿಂದ, ಯಚ್ಛಂತೀಷು-ಕೊಡುತ್ತಿರುವ, ವಿವೇಕಕಲ್ಪಲತಿಕಾ, ಶಸ್ತ್ರೀಷು ; ವಿವೇಕ - ಬುದ್ಧಿವಿಶೇಷವೆಂಬ, ಕಲ್ಪಲತಿಕಾ-ಕಲ್ಪವೃಕ್ಷದ ಬಳ್ಳಿಗೆ, ಶಸ್ತ್ರೀಷು-ಕತ್ತಿಯ ಪ್ರಾಯವಾದ, ಪಣ್ಯಸ್ತ್ರೀಷು-ವೇಶ್ಯಾಂಗನೆಯರಲ್ಲಿ, ಕಃ-ಯಾವ ಮನುಷ್ಯನುತಾನೆ, ರಜ್ಯೇತ-ಆಸಕ್ತನಾದಾನು ? ಸ್ವಭಾವೋಕ್ತಿರಲಂಕಾರಃ ಶಾರ್ದೂಲ ವಿಕ್ರೀಡಿತ ವೃತ್ತವು ॥೫೭॥

ತಾತ್ಪರ್ಯ—ಈ ಶ್ಲೋಕದಲ್ಲಿ ವೇಶ್ಯಾಂಗನೆಯರ ದೂಷಣವನ್ನು ಮಾಡುತ್ತಾನೆ. ಹೇಗೆಂದರೆ; —ವೇಶ್ಯಾಸ್ತ್ರೀಯರು, ಹುಟ್ಟುಕುರುಡನಾಗಲಿ, ರೋಗದಿಂದ ಮುಖವೆಲ್ಲಾ ದುರ್ವಾಸನೆಯಿಂದ ಕೂಡಿದವನಾಗಲಿ, ಮುಪ್ಪಿನಿಂದ ಅಂಗಾಂಗಗಳೆಲ್ಲವೂ ಜೋಲುತ್ತಿರುವನಾಗಲಿ, ಅಸಹ್ಯಕರವಾದ ಕುಷ್ಠರೋಗ ಪೀಡಿತನಾದವನೇ ಆಗಲಿ, ಗ್ರಾಮಾಂತರದಿಂದಬಂದ ಮೂಢನಿಗಾಗಲಿ, ದ್ರವ್ಯಾಕಾಂಕ್ಷೆಯಿಂದ ತಮ್ಮ ಮನೋಹರವಾದ ಈ ಶರೀರವನ್ನು ನಖಕ್ಷತ, ದಂತಕ್ಷತಾದಿ ಕಾಮೋಪ ಭೋಗಗಳಿಗೆ ಒಪ್ಪಿಸಿ ಬಿಡುತ್ತಾರೆ, ಈರೀತಿಯಾಗಿ ವಿವೇಕವೆಂಬ ಕಲ್ಪವೃಕ್ಷಕ್ಕೆ ಶಸ್ತ್ರಪ್ರಾಯರಾದ ಇಂಥಾ ವೇಶ್ಯಾಂಗನೆಯರಲ್ಲಿ, ಯಾವ ಮನುಷ್ಯನು ತಾನೆ ವಿಶ್ವಾಸ ಮಾಡುತ್ತಾನೆ. ಅಂದರೆ ಯಾವನೂ ಮಾಡಲಾರನು ಎಂದು ಭಾವವು. ವೇಶ್ಯಾಂಗನೆಯರು ದ್ರವ್ಯದ ಆಸೆಗೋಸ್ಕರ ಎಂತಹ ಅಸಹ್ಯಕರವಾದ ಕೆಲಸವನ್ನಾದರೂ ಮಾಡಿ ಬಿಡುತ್ತಾರೆಂದು ತಾತ್ಪರ್ಯವು. ॥೫೭॥

ಶ್ಲೋ॥ ವೇಶ್ಯಾಸೌಮದನಜ್ವಾಲಾ ರೂಪೇಂಧನವಿವರ್ಧಿತಾ ॥

ಕಾಮಿಭಿರ್ಯತ್ರಹೂಯಂತೇ ಯೌವನಾನಿ ಧನಾನಿಚ ॥

ಟೀಕು ॥ ಅಸೌ-ಈ, ವೇಶ್ಯಾಂಗನೆಯೆಂಬುವ. ಮದನಜ್ವಾಲಾ-ಮನ್ಮಥಾಗ್ನಿಜ್ವಾಲೆಯು, ರೂಪೇಂಧನವಿವರ್ಧಿತಾ; ರೂಪ-ಸೌಂದರ್ಯವೆಂಬುವ, ಇಂಧನ-ಸಮಿತ್ತಿನಿಂದ, ವಿವರ್ಧಿತಾ ವೃದ್ಧಿಹೊಂದಲ್ಪಟ್ಟದ್ದು, ಕಾಮಿಭಿಃ-ಜಾರಪುರುಷರಿಂದ, ಯತ್ರ-ಯಾವವೇಶ್ಯಾಂಗನೆಯಂಬ ಮನ್ಮಥಾಗ್ನಿಜ್ವಾಲೆಯಲ್ಲಿ, ಯೌವನಾನಿ-ಪ್ರಾಯಗಳೂ, ಧನಾನಿಚ-ದ್ರವ್ಯಗಳೂ ಸಹ, ಹೂಯಂತೇ-ಹೋಮಮಾಡಲ್ಪಡುತ್ತವೆ. ॥೫೮॥

ಅತ್ರ ವೇಶ್ಯಾಯಾಂ ಆರೋಪ್ಯಮಾಣಸ್ಯ ಜ್ವಾಲಾತ್ವಸ್ಯ ಪ್ರಕೃತಹವನೋಪಯೋಗಿತ್ವಾತ್ಪರಿಣಾಮಾಲಂಕಾರಃ ಲಕ್ಷಣಂತು ಆರೋಪ್ಯಮಾಣಸ್ಯ ಪ್ರಕೃತೋಪಯೋಗಿತ್ವೇ ಪರಿಣಾಮ ಇತಿ ಲಕ್ಷಣಾತ್ ವೃತ್ತಂ ಅನುಷ್ಟುಭಂ

ತಾತ್ಪರ್ಯ—ಈ ಶ್ಲೋಕದಲ್ಲಿ ವೇಶ್ಯಾಂಗನೆಯನ್ನು ದೂಷಿಸುತ್ತಾನೆ ಹೇಗೆಂದರೆ;... ಸೌಂದರ್ಯವೆಂಬ ಸಮಿತ್ತಿನಿಂದ ಪ್ರಜ್ವಲಿಸುತ್ತಿರುವ ವೇಶ್ಯಾಂಗನೆಯೆಂಬ ಮದನಜ್ವಾಲೆಯಲ್ಲಿ ಜಾರಪುರುಷರು ತಮ್ಮ ಪ್ರಾಯಗಳನ್ನೂ ಮತ್ತು ಐಶ್ವರ್ಯಗಳನ್ನೂ ಹೋಮಮಾಡುತ್ತಾರೆ. ಅಂದರೆ ಕಾಮುಕರು ವೇಶ್ಯಾಂಗನೆಯರ ಸೌಂದರ್ಯಕ್ಕೆ ಬೆರಗಾಗಿ, ಧನ, ಯೌವನಗಳನ್ನು ಆವರ ಅಧೀನಮಾಡಿ ಕಡೆಗೆ ತಾವೂ ಕೆಡುತ್ತಾರೆ, ಆದ್ದರಿಂದ ವಿವೇಕಿಗಳು ವೇಶ್ಯಾಸ್ತ್ರೀಯರನ್ನು ವರ್ಜಿಸಬೇಕೆಂದು ಭಾವವು.

ಶ್ಲೋ॥ ಕಶ್ಚುಂಬತಿಕುಲಪುರುಷೋವೇಶ್ಯಾಧರಪಲ್ಲವಂಮನೋಜ್ಞಮಪಿ ॥ ಚಾರಭಟಚೋರಚೇಟಕವಿಟನಟನಿಷ್ಠೀವನಶರಾವಂ ॥೫೯॥

ಟೀಕು ॥ ಮನೋಜ್ಞಮಪಿ-ಮನೋಹರವಾದದ್ದಾದಾಗ್ಯೂ ದರೂ ಕೂಡ, ವೇಶ್ಯಾ-ಗಣಿಕಾಂಗನೆಯರ, ಅಧರ ಪಲ್ಲವಂ ಚಿಗುರುಗಳಿಗೆ ಸಮಾನವಾದ ತುಟಿಯನ್ನು, ಕಃ ಯಾವ ಕುಲಪುರುಷನು, ಚುಂಬತಿ, ಚುಂಬಿಸುತ್ತಾನೆ, (ಚುಂಬಿಸಲಾರನು) ತತ್-ಆ ಅಧರ ಪಲ್ಲವವು, ಚಾರ ಗೂಢ ಪುರುಷರಿಗೂ, ಭಟ-ಯೋಧರಿಗೂ, ಚೋರ ಕಳ್ಳರಿಗೂ, ಚೇಟಕ-ದೂತಕೃತ್ಯವನ್ನು ಮಾಡುವರಿಗೂ. ವಿಟ-ಜಾರಪುರುಷರಿಗೂ, ನಿಷ್ಠೀವನ ಉಗುಳುವದಕ್ಕೆ ಮಾ

ದಿರುವ, ಶರಾವಃ-ಶಾಸ್ತ್ರವೆಯಾಗಿರುವದು, ಅತ್ರರೂಪಕ ಉಪಮಾವೃತ್ತ್ಯನು ಪ್ರಸಾನಾಂ ಸಂಸೃಷ್ಟಿಃ. ||೫೯||

ತಾತ್ಪರ್ಯ—ಈ ಶ್ಲೋಕದಲ್ಲಿ ವೇಶ್ಯಾಂಗನೆಯನ್ನು ಬಹಳವಾಗಿ ನಿಂದಿಸುತ್ತಾನೆ;—ಸತ್ಕುಲ ಪ್ರಸೂತರಾದ ಪುರುಷರು, ಯಾರುತಾನೆ ನೋಟಕ್ಕೆ ಮಾತ್ರ ಲಕ್ಷಣನಾಗಿರುವ ವೇಶ್ಯಾಂಗನೆಯರ ಅಧರ ಪಲ್ಲವವನ್ನು ಚುಂಬನೆ ಮಾಡಿಯಾರು? ಅಂದರೆ ಎಂದಿಗೂ ಮಾಡಲಾರರು. ಆತುಟಿಯು ಗೂಢಪುರುಷರು, ಯೋಧರು, ಕಳ್ಳರು, ತಲೆಹಿಡುಕರು, ಮತ್ತು ಜಾರಶಿಖಾಮಣಿಗಳು ಇವರುಗಳ ಎಂಜಲಿಗಾಗಿ ಮಾಡಿರುವ ಶರಾವಿಗೆ ಸಮಾನವು. ಆದ್ದರಿಂದ ಗಣಿಕಾಂಗನೆಯರ ಸಹವಾಸವು ಕೇವಲ ದೂಷ್ಯವಾದುದೆಂದು ಭಾವವು. ||೫೯||

ಶ್ಲೋ|| ಮಧುತಿಷ್ಠತಿವಾಚಿಯೋಷಿತಾಂಹೃದಿಹಾಲಾಹಲಮೇವಕೇವಲಂ || ಅತಏವನಿಪೀಯತೇಧರೋಹೃದಯಂಮುಷ್ಟಿಭಿರೇವತಾಡ್ಯತೇ ||೬೦||

ಟೀಕು || ಯೋಷಿತಾಂ-ಸ್ತ್ರೀಯರುಗಳ, ವಾಚಿ - ಮಾತಿನಲ್ಲಿ, ಮಧು-ಜೇನುತುಪ್ಪವು, ತಿಷ್ಠತಿ-ಇರುತ್ತದೆ, ಹೃದಿ-ಹೃದಯದಲ್ಲಿ, ಕೇವಲಾ ಅತ್ಯಂತವಾಗಿ, ಹಾಲಾಹಲಮೇವ- ಮಹಾಕಾಲಕೂಟವೇ, ತಿಷ್ಠತಿ- ಇರುತ್ತದೆ. ಅತಏವ-ಈ ಕಾರಣದಿಂದ, ಅಧರಂ ತುಟಿಯನ್ನು, ನಿಪೀಯತೆ ಪಾನಮಾಡಲ್ಪಡುತ್ತದೆ, ಹೃದಯಂ-ವಕ್ಷಸ್ಥಲವು. (ಕುಚಗಳು) ಮುಷ್ಟಿಭಿರೇವ-ಮುಷ್ಟಿಗಳಿಂದಲೆ, ತಾಡ್ಯತೇ ಹೊಡೆಯಲ್ಪಡುತ್ತದೆ. ||೬೦||

ಈ ಶ್ಲೋಕದಲ್ಲಿ ಅಮೃತಪಾನಕ್ಕೋಸ್ಕರ ಅಧರ ಚುಂಬನೆಯನ್ನೂ, ವಿಷನಿವಾರಣೆಗೋಸ್ಕರ, ಕುಚಮರ್ದನವನ್ನೂ ಉತ್ಪ್ರೇಕ್ಷಿಸಿ ಇರುವದರಿಂದ:—ಉತ್ಪ್ರೇಕ್ಷಾಲಂಕಾರಃ ರೂಪಕಾಲಂಕಾರಶ್ಚ ಅತಿಶಯೋಕ್ತಿರ್ವ್ಯಂಗ್ಯಂತಯಾಸ್ಸಂಸೃಷ್ಟಿಃ.

ತಾತ್ಪರ್ಯ—ಸ್ತ್ರೀಯರುಗಳ ಅಧರ ಪಾನವನ್ನು ಕುಚಮರ್ದನಾದಿ ವಿಷಯುಗಳನ್ನು ಉತ್ಪ್ರೇಕ್ಷಿಸುತ್ತಾನೆ. ಹೇಗಂದರೆ:—ಸ್ತ್ರೀಯರುಗಳ ಮಾತಿನಲ್ಲಿ ಬಹಳ ಮಧುರವಿರುವದು ಹೃದಯದಲ್ಲಿ ವಿಷವೇ ತುಂಬಿರುತ್ತದೆ ಆದಕಾರಣ ಪುರುಷರು ಸ್ತ್ರೀಯರ ಅಮೃತವಿರುವ ತುಟಿಗಳನ್ನು ನೋಡಿ

ಅಮೃತ ಪಾನಕ್ಕೋಸ್ಕರ ಅಧರಾಮೃತವಪಾನವನ್ನು ಮಾಡುತ್ತಾರೆ. ಎದೆಯಲ್ಲಿ ವಿಷವಿರುವದರಿಂದ ಕುಚಗಳನ್ನು ಹಿಡಿದು ಹಿಂಡಿ ವಿಷವನ್ನು ಹೊರಡಿಸುತ್ತಾರೆಂದು ಭಾವವು. ||೬೦||

ಇತಿ ಶ್ರೀ ಸಂಜೀವನೀ ಟೀಕಾ ಸಹಿತ ಭರ್ತೃಹರಿ ಸುಭಾಷಿತೇ ಶೃಂಗಾರ ಶತಕೇ ಕಾಮಿನೀ ಗರ್ಹಣ ಪದ್ಧತಿ

ಸ್ಸಮಾಪ್ತಾ.

---

ಶ್ಲೋ|| ಧನ್ಯಾಸ್ತ ಏವ ಧವಳಾಯತಲೋಚನಾನಾಂ ತಾರುಣ್ಯದರ್ಪಘನಪೀನಪಯೋಧರಾಣಾಂ || ಕ್ಷಾಮೋದರೋಪರಿಲಸತ್ತ್ರಿವಳೀಲತಾನಾಂ ದೃಷ್ಟ್ವಾಕೃತಿಂ ವಿಕೃತಿ ಮೇತಿ ಮನೋ ನಯೇಷಾಂ ||೬೧||

ಟೀಕು || ಧವಳಾಯತಲೋಚನಾನಾಂ ! ಧವಳಾಯತ- ಬಿಳೀಕಮಲಕ್ಕೆ ಸದೃಶವಾದ, ಲೋಚನಾನಾಂ- ನೇತ್ರಗಳುಳ್ಳ, ತಾರುಣ್ಯದರ್ಪಘನಪೀನಪಯೋಧರಾಣಾಂ; ತಾರುಣ್ಯ- ಯೌವನದ, ದರ್ಪ- ಉದ್ರೇಕದಿಂದ, ಘನ- ದೊಡ್ಡದಾದ, ಪೀನ- ಬಲಿತಿರುವ, ಪಯೋಧರಾಣಾಂ- ಸ್ತನಗಳುಳ್ಳ, ಕ್ಷಾಮೋದರೋಪರಿ ಲಸತ್ತ್ರೀವಳೀಲತಾನಾಂ ; ಕ್ಷಾಮ-ಕೃಶವಾಗಿರುವ, ಉದರ-ಹೊಟ್ಟೆಯಮೇಲೆ, ಲಸತ್-ಪ್ರಕಾಶಿಸುತ್ತಿರುವ, ತ್ರಿವಳೀಲತಾನಾಂ- ಲತೆಯೋಪಾದಿಯಲ್ಲಿರುವ ತ್ರಿವಳಿಗಳುಳ್ಳ- ಸ್ತ್ರೀಯರುಗಳ, ಆಕಾರಂ ರೂಪವನ್ನು, ದೃಷ್ಟ್ವಾ-ನೋಡಿ, ಏಷಾಂ-ಯಾರುಗಳ, ಮನಃ ಮನಸ್ಸು, ವಿಕಾರಂ-ಚಂಚಲವನ್ನು, ನೈತಿ-ಹೊಂದುವದಿಲ್ಲವೊ, ತಏವ-ಅವರೇ ಧನ್ಯಾಃ-ಸುಕೃತಿಗಳು, ಭವಂತಿ-ಆಗುತ್ತಾರೆ. ||೬೧||

(ಉಪಮಾನರೂಪಕಯೋಸ್ಸಂಸೃಷ್ಟಿಃ ವಸಂತತಿಲಕಾವೃತ್ತಂ, ಉಕ್ತಾ ವಸಂತತಿಲಕಾತಭಜಾಜಗೌಗಃ ಇತಿಲಕ್ಷಣಾತ್.

ತಾತ್ಪರ್ಯ—ಮೇಲೆ ಹೇಳಿದ ರೀತಿಯಾಗಿ ಕಾಮಿನೀಗರ್ಹಣವನ್ನು ಹೇಳಿ ಸುವಿರಕ್ತದುರ್ವಿರಕ್ತ ವಿಷಯವನ್ನು ಹೇಳುತ್ತಾನೆ. ಅದು ಹೇಗಂದರೆ;—ಯಾವ ಪುರುಷರ ಮನಸ್ಸಾದಾಗ್ಯೂ ಬಿಳೀ ಕಮಲದೋಪಾದಿ

ಯಲ್ಲಿ ಕಂಕಣಗಳುಳ್ಳ, ಯೌವನ ಪ್ರಾದುರ್ಭಾವದಿಂದ ಬಲಿತು ದಪ್ಪವಾಗಿ ಇರುವ ಸ್ತನಗಳುಳ್ಳ, ಕೃಶವಾದ ಉದರದಮೇಲೆ ತ್ರಿವಳಿಗಳೆಂಬುವ ಲತೆಗಳುಳ್ಳ ಕಾಮಿನಿಯರ ಆಕಾರವನ್ನು ನೋಡಿ ಭ್ರಮಿಸದೆ ಇರುತ್ತಾರೋ ಅವರೇ ಧನ್ಯರು, ಇಂಥಾ ರೀತಿಯಲ್ಲಿರುವ ಸ್ತ್ರೀಯರನ್ನು ನೋಡಿದ ಮಾತ್ರದಲ್ಲೇ ಎಂಥವರ ಮನಸ್ಸು ಚಲಿಸದೆ ಇರಲಾರದು, ಈರೀತಿ ಸೌಂದರ್ಯವುಳ್ಳ ಸ್ತ್ರೀಯರುಗಳ ಮನಸ್ಸು ಚಲಿಸದೆ ಯಾರಿಗೆ ಇರುತ್ತದೆಯೋ, ಅವರೆ ಧನ್ಯರು ಎಂದು ಭಾವವು. ||೬೧||

ಶ್ಲೋ || ಬಾಲೇಲೀಲಾಮುಕುಳಿತಮಮೀಮಂಥರಾದೃಷ್ಟಿಪಾ
ತಾಃಕಿಂಕ್ಷಿಪ್ಯಂತೇವಿರಮವಿರಮವ್ಯರ್ಥವಿಷಶ್ರಮ
ಸ್ತೇ||ಸಂಪ್ರತ್ಯನ್ಯೇವಯಮುಪರತಂಬಾಲ್ಯಮಾಸ್ಥಾ
ವನಾಂತೇ ಕ್ಷೀಣೋಮೋಹಸ್ತೃಣಮಿವಜಗಜ್ಜಾಲ
ಮಾಲೋಕಯಾಮಃ ||೬೨||

ಟೀಕು || ಹೇಬಾಲೇ-ಎಲೆ ಸ್ತ್ರೀಯೆ, ಲೀಲಾಮುಕಳಿತಂ-ಲೀಲಾವಿಲಾಸದಿಂದ, ಮುಕುಳಿತಂ ಯಥಾತಥಾ-ಅರೆಗಣ್ಣು ಮುಚ್ಚೋಣ, ಹೇಗೊ ಹಾಗೆ, ಅಮೀ-ಈ ಮಂಥರಾಃ-ಅಲಸವಾದ, ದೃಷ್ಟಿಪಾತಾಃ- ನೇತ್ರಪ್ರಸರಣೆಯೂ, ಕಿಂ-ಯಾತಕ್ಕೋಸ್ಕರ, ಕ್ಷಿಪ್ಯಂತೇ- ಪ್ರಸರಿಸೋಣವಾಗುತ್ತೆ, ಕಿಂತು ಮತ್ತೇನೆಂದರೋ, ವಿರಮವಿರಮ-ಸುಮ್ಮನೆ ಇರು ಸುಮ್ಮನೆ ಇರು, ತೇ - ನಿನ, ಏಷಃ-ಈರೀತಿಯಾದ ದೃಷ್ಟಿಪ್ರಸರಣೆಯು, ಶ್ರಮಃ ಪ್ರಯಾಸಕರವಾದದ್ದು, ಆಗುತ್ತೆ, ಸಂಪ್ರತಿ-ಈಗ ವಯಂ-ನಾವುಗಳು, ಅನ್ಯೇ-ಬೇರೆ, ಆಗಿ ಇದ್ದೇವೆ, ಬಾಲ್ಯಂ-ಹುಡುಗರ ವ್ಯಾಪಾರವು, ಉಪರತಂ - ನಷ್ಟವಾದದ್ದಾಯಿತು, (ಶಾಂತವಾದದ್ದಾಯಿತು,) ಆಸ್ಥಾ-ಬಾಲಚೇಷ್ಟೆಯು, ವನಾಂತೇ-ವನಮಧ್ಯದಲ್ಲಿ, ಅಸ್ತಿ-ಇದೆ, ಮೋಹಃ-ಭ್ರಾಂತಿಯು, ಕ್ಷೀಣಃ-ನಷ್ಟವಾದದ್ದಾಯಿತು, ಜಗಜ್ಜಾಲಂ: ಜಗತ್-ಲೋಕದ, ಜಾಲಂ-ಸಮೂಹವನ್ನು. ತೃಣಮಿವ - ಹುಲ್ಲುಕಡ್ಡಿಯನ್ನೋಪಾದಿಯಲ್ಲಿ, ಆಲೋಕಯಾಮಃ - ನೋಡುತ್ತೇವೆ. ||೬೨||

ತಾತ್ಪರ್ಯ— ಈ ಶ್ಲೋಕದಲ್ಲಿ ಪೂರ್ವದ ಬಾಲ್ಯದ ವಯಸ್ಸಿನಲ್ಲಿ ಶೃಂಗಾರವನ್ನು ಅನುಭವಿಸಿದ ಕಾಮಿನಿ ಶೃಂಗಾರ ಚೇಷ್ಟೆಗಳನ್ನು ನೋಡಿ

ಸುವಿರಕ್ತ ಭಾವವನ್ನು ತೋರಿಸುತ್ತಾನೆಂದು ಹೇಳುತ್ತಾನೆ. ಪೂರ್ವ ವಯಸ್ಸಿನಲ್ಲಿ ಸುರತ ಸುಖವನ್ನು ಅನುಭವಿಸುತ್ತಿದ್ದ ಒಬ್ಬಳು ಮುಗ್ಧಾಂಗನೆಯು ಎದುರಿಗೆ ಬಂದು ನೇತ್ರವಿಲಾಸದಿಂದ ಶೃಂಗಾರ ಭಾವವನ್ನು ತೋರಿಸುತ್ತಲಿದ್ದರೆ ಎಲೈ ಬಾಲೆಯೇ ನೀನು ಯಾತಕ್ಕೆ ನೇತ್ರವಿಲಾಸದಿಂದ ಶೃಂಗಾರವಿಲಾಸವನ್ನು ತೋರಿಸುತ್ತಿ? ಸಾಕುಬಿಡು. ನಿನಗೆ ಶ್ರಮವೆ ಹೊರತು ಪ್ರಯೋಜನವಿಲ್ಲ. ಬಾಲ್ಯದಲ್ಲಿ ಮಾಡಿದ ಸುರತ ಮೊದಲಾದದ್ದು ಅರಣ್ಯದಲ್ಲೇ ಹೋಯಿತು, ಮೊದಲಿದ್ದ ವಿಷಯಾನುರಾಗಗಳು ಬಿಟ್ಟು ಹೋದವು ಈಗ ಈ ಜಗತ್ತ್ರಯವನ್ನು ಹುಲ್ಲುಕಡ್ಡಿಗೆ ಸಮಾನವಾಗಿ ಕಾಣುತ್ತಲಿದ್ದೇನೆ. ಆದುದರಿಂದ ನೀನು ನನ್ನಲ್ಲಿ ದೃಷ್ಟಿಪಾತಾದಿ ಶೃಂಗಾರವನ್ನು ತೋರಿಸಬೇಡವೆಂದು ಭಾವವು. ||೬೦||

ಮಂದಾಕ್ರಾಂತಾ ವೃತ್ತಂ ಲಕ್ಷಣಂತು ಮಂದಾಕ್ರಾಂತಾಜಲಧಿ ಷಡಗೈರ್ಮ್ಭೌನ ತೌತಾದ್ಗುರೂಚೇತ್,

ಶ್ಲೋ|| ಇಯಂಬಾಲಾಮಾಂ ಪ್ರತ್ಯನವರತಮಿಂದೀವರದಳಪ್ರ
ಭಾಚೋರಂಚಕ್ಷುಃಕ್ಷಿಪತಿಕಿಮಭಿಪ್ರೇತಮನಯಾ ||
ಗತೋಮೋಹೋಸ್ಮಾಕಂಸ್ಮರಶಬರಬಾಣವ್ಯತಿಕರಜ್ವ
ರಜ್ವಾಲಾಶಾಂತಾತದಪಿನವರಾಕೀವಿರಮತಿ ||೬೧||

ಟೀಕು|| ಇಯಂ- ಈ, ಬಾಲಾ ಮುಗ್ಧಾಂಗನೆಯು- ಮಾನುಭಿಪ್ರೇತ್ಯ ನನ್ನನ್ನು ಉದ್ದೇಶಮಾಡಿ, ಅನವರತಂಯಥಾತಥಾ, ಅವಿಚ್ಛಿನವಾಗೋಣ, ಹೇಗೋಹಾಗೆ, ಇಂದೀವರದಳಪ್ರಭಾಚೋರಂ, ಇಂದೀವರದಳ- ಕನ್ನೈದಿಲೆ ಹೂವಿನ, ಪ್ರಭಾ - ಕಾಂತಿಗೆ, ಚೋರಂ - ತಸ್ಕರವಾದ, ಅಂದರ - ನೈದಲೆ ಹೂವಿನಕಾಂತಿಗೆ ಸದೃಶವಾದ, ಚಕ್ಷುಃ - ನೇತ್ರವನ್ನು, ಕ್ಷಿಪತಿ ಹಾಕುತ್ತಾಳೆ, ಕಿಂ- ಏನು, ಅನಯಾ- ಈ ಸ್ತ್ರೀಯಿಂದ. ಅಭಿಪ್ರೇತಂ- ತಿಳಿಯಲ್ಪಟ್ಟಿತು, ಅಸ್ಮಾಕಂ- ನಮ್ಮಗಳಿಗೆ, ಮೋಹಃ- ಅನುರಾಗವು, ಗತಃ- ಹೋದಂಥಾದ್ದಾಯಿತು, ಸ್ಮರಶಬರಬಾಣವ್ಯತಿಕರ ಜ್ವರಜ್ವಾಲಾ ; ಸ್ಮರ- ಮನ್ಮಥನೆಂಬುವಂಥಾ, ಶಬರ- ಬೇಡರವನ, ಬಾಣ- ಶರದ, ವ್ಯತಿಕರ- ಸಂಪರ್ಕದಿಂದ ಉಂಟಾದ, ಜ್ವರಜ್ವಾಲಾ- ತಾಪವು- ಶಾಂತಾ- ಶಮನವನ್ನು ಹೊಂದಿತು, ತದಪಿ- ಹಾಗಾದಾಗ್ಯದರೂ, ವರಾಕೀ- ಭೂತಪೂರ್ವ ಪ್ರಾಣಪ್ರೇಯಸಿಯು, ನವಿರಮತಿ- ವಿರಾಗವನ್ನು ಹೊಂದಿದವಳಾಗಲಿಲ್ಲ. ||೬೧||

ತಾತ್ಪರ್ಯ—ಈ ಶ್ಲೋಕದಲ್ಲಿ ಪೂರ್ವ ಕಾಲದಲ್ಲಿ ಸುರತ ಶೃಂಗಾರಾದಿಗಳನ್ನು ಅನುಭವಿಸಿ ಈಗ ಆ ಅಭಿಪ್ರಾಯದಿಂದ ದೃಷ್ಟಿಪಾತವನ್ನು ಮಾಡುತ್ತಲಿರುವ ಪ್ರಾಣಪ್ರಿಯಳನ್ನು ತನ್ನ ಸ್ನೇಹಿತನಿಗೆ ತೋರಿಸುತ್ತಾನೆ. ಎಲೈ ಸ್ನೇಹಿತನೆ ಈ ಸ್ತ್ರೀಯು ನನ್ನೆದಿರಿಗೆ ಹೂವಿಗೆ ಸಮಾನವಾದ ಕಣ್ಣುಗಳಿಂದ ನನ್ನನ್ನು ಅವಿಚ್ಛಿನ್ನವಾಗಿ ನೋಡುತ್ತಾಳೆ, ಇವಳಿಗೆ ಏನು ಅಭಿಪ್ರಾಯವಿರಬಹುದು ನಮಗೆ ಸ್ತ್ರೀಯಲ್ಲಿಷ್ಟ ಮೋಹವು ಹೋಯಿತು ಮತ್ತು ಮನ್ಮಥನೆಂಬುವ ಬೇಡರವನಿಂದ ಹಾಕಲ್ಪಟ್ಟ ಬಾಣದ ಉರಿಯು ತಾಪವು ಶಾಂತವಾಯಿತು, ಈ ಪೂರ್ವದ ಪ್ರಾಣಸಖಿಗೆ ಮಾತ್ರ ಮೋಹವು ಇನ್ನೂ ಹೋಗಲಿಲ್ಲ, ಅಂದರೆ ನಾವು ವಿರಾಗಿಗಳಾಗಿದ್ದೇವೆ, ಇವಳು ಪೂರ್ವದ ಹಾಗೆ ಕಾಮಿನಿಯಾಗಿದ್ದಾಳೆ, ಅಥವಾ ವೈರಾಗ್ಯವನ್ನು ಹೊಂದಲಿಲ್ಲ ಎಂದು ಭಾವವು. ಶಿಖರಿಣೀ ವೃತ್ತಂ. ||೬೩||

ಶ್ಲೋ|| ಕಿಂಕಂದರ್ಪಶರಕಂಧರ್ಥಯಸಿರೇಕೋದಂಡಟಂಕಾ
ರಿತಂರೇರೇಕೋಕಿಲಕೋಮಲಂಕಲರವಂಕಿಂವಾವೃಥಾ
ಜಲ್ಪಸಿ || ಮುಗ್ಧೇಸ್ನಿಗ್ಧವಿದಗ್ಧಚಾರು ಮಧುರೈ
ರ್ಲೋಲೈಃಕಟಾಕ್ಷೈರಲಂಚೇತಶ್ಚುಂಬಿತಚಂದ್ರಚೂ
ಡಚರಣಧ್ಯಾನಾಮೃತಂವರ್ತತೇ ||೬೪||

ಟೀಕಾ || ರೇಕಂದರ್ಪ - ಎಲೈ ಮನ್ಮಥನೆ, ಕೋದಂಡಟಂಕಾರಿತಂ; ಕೋದಂಡ- ಧನುಸ್ಸಿನ, ಟಂಕಾರಿತಂ-ಟಂಕಾರಧ್ವನಿಯುಳ್ಳ, ಶರಂ- ಬಾಣವನ್ನು. ಕಿಂ- ಯಾತಕ್ಕೋಸ್ಕರ, ಕದರ್ಥಯಸಿ - ವ್ಯರ್ಥವಾಗಿ ಪ್ರಯೋಗಮಾಡುತ್ತಿ, ರೇರೇ- ಎಲೋ ಎಲೋ, ಕೋಕಿಲ- ಕೋಗಿಲೆಯೆ, ಕೋಮಲಂ ಮನೋಹರವಾದ. ಕಲರವಂ- ಅವ್ಯಕ್ತ ಮಧುರವಾದ ಪಂಚಮಸ್ವರವನ್ನು, ಕಿಂವಾ- ಯಾತಕ್ಕೋಸ್ಕರ, ವೃಥಾ - ವ್ಯರ್ಥವಾಗಿ, ಜಲ್ಪಸಿ - ಕೂಗುತ್ತಿ, ಮುಗ್ಧೇ-ಎಲೈ ಸುಂದರಾಂಗಿಯೆ, ಸ್ನಿಗ್ಧವಿದಗ್ಧ ಚಾರುಮಧುರೈಃ, ಸ್ನಿಗ್ಧ- ಗಂಭೀರವಾದ, ವಿದಗ್ಧ - ವಿಶೇಷವಿಲಾಸ ವಿವರಣನಿಪುಣಗಳಾದ, ಚಾರು- ಚಂದ್ರಾರವಿಂದಗಳ ಶೋಭಾದಿಯಲ್ಲಿ, ರಮಣೀಯಗಳಾದ ಮಧುರೈಃ-ಸುಧಾಧಾರೆಗಳ ಶೋಭಾದಿಯಲ್ಲಿ, ಮನೋಹರಗಳಾದ- ಲೋಲೈಃ- ನೋಟಗಳುಳ್ಳ, ಕಟಾಕ್ಷೈಃ- ಕಡೆಗಣ್ಣುಗಳಿಂದ, ಅಲಂ- ಸಾಕು, ಚೇತಃ- ಮನಸ್ಸು, ಚಂದ್ರಚೂಡಚರಣಧ್ಯಾನಾಮೃತಂ ಸತ್- ಚಂದ್ರಚೂಡ- ಈಶ್ವರನ, ಚರಣ-ಪಾದಗಳ, ಧ್ಯಾನ - ಸ್ಮರಣೆಯು ಅಮೃತಂ ಸತ್ ಅಮೃತವುಳ್ಳಂಥಾದ್ದಾಗಿ, ವರ್ತತೇ- ಇದೆ. ||೬೪||

ತಾತ್ಪರ್ಯ—ಮೊದಲು ಕಾಮಿಯಾಗಿದ್ದು ಈಗ ವೈರಾಗ್ಯವನ್ನು ಆಶ್ರಯಿಸಿರುವ ವಿರಕ್ತನು ಸುಂದರವಾದ ಸ್ತ್ರೀವಿಲಾಸವನ್ನೂ ಕೋಕಿಲೆಯನ್ನೂ ಮನ್ಮಥನನ್ನು ದೂಷಣೆ ಮಾಡುತ್ತಾನೆ. ಅದು ಹೇಗೆಂದರೆ:—ಎಲೋ ಮನ್ಮಥನೆ ಧನುಷ್ಟಂಕಾರವನ್ನು ಮಾಡಿ ವ್ಯರ್ಥವಾಗಿ ನನ್ನಲ್ಲಿ ಬಾಣವನ್ನು ಯಾಕೆ ಬಿಡುತ್ತಿ ಈಗ ವಿರಾಗವನ್ನು ಹೊಂದಿರುವುದರಿಂದ ನಿನ್ನ ಬಾಣವು ನನ್ನನ್ನು ಏನೂ ಮಾಡಲಾರದು. ಎಲೈ ಕೋಕಿಲೆಯೆ ನೀನು ವ್ಯರ್ಥವಾಗಿ ಯಾಕೆ ಕೂಗುತ್ತಿ ನಿನ್ನ ಕೂಜಿತವು ವ್ಯರ್ಥವಾಗುತ್ತೆ ಎಲೈ ಸುಂದರಸ್ತ್ರೀಯೆ. ನೀನು ಸುಂದರವಾದ ಕಡೆಗಣ್ಣನೋಟವನ್ನು ನನ್ನ ಮೇಲೆ ಬಿಡಬೇಡ. ಈಗ ನನ್ನ ಮನಸ್ಸು ಈಶ್ವರನ ಪಾದಾಂಬುಜ ಅಮೃತದಲ್ಲಿ ಆಸಕ್ತವಾಗಿದೆ. ಪೂರ್ವದ ಹಾಗೆ ನಿಮ್ಮಗಳಿಗೆ ಕಿಂಕರನಾಗುವದಿಲ್ಲ, ಈಗ ಈಶ್ವರಪಾದಾರವಿಂದ ಧ್ಯಾನಾಮೃತದಲ್ಲಿ ಇರುವ ನನಗೆ ತುಚ್ಛತವಾದ ವೈಷಯಿಕಾನಂದದಲ್ಲಿ ವಿರಕ್ತನಾಗಿದ್ದೇನೆ, ನನ್ನಲ್ಲಿ ಕಾಮವಿಲಾಸವನ್ನು ತೋರಿಸಬೇಡವೆಂದು ಹೇಳಿದನೆಂದು ಭಾವವು. ||೬೪||

(ಶಾರ್ದೂಲ ವಿಕ್ರೀಡಿತ ವೃತ್ತಂ) ವೃತ್ತಲಕ್ಷಣಂತು ಸೂರ್ಯಾಶ್ವೈರ್ಮಸಜಸ್ತತಾಸ್ಸಗುರವ ಶ್ಶಾರ್ದೂಲ ವಿಕ್ರೀಡಿತಂ ||

ಶ್ಲೋ || ವಿರಹೇಽಪಿಸಂಗಮಃಖಲುಪರಸ್ಪರಂಸಂಗತಂಮನೋ
ಯೇಷಾಂ || ಹೃದಯಮಪಿವಿಘಟಿತಂಚೇತ್ಸಂಗೋ
ವಿರಹಂವಿಶೇಷಯತಿ || ೬೫ ||

ಟೀಕು || ಯೇಷಾಂ - ಯಾರುಗಳ, ಮನಃ - ಮನಸ್ಸು, ವಿರಹೇಽಪಿ- ವಿಯೋಗದಲ್ಲೂಕೂಡ, ಪರಸ್ಪರಂ - ಅನ್ಯೋನ್ಯವಾಗಿ, ಸಂಗತಃ - ಖಲು ಕೂಡಿಕೊಂಡದ್ದಷ್ಟೆ, ಹೃದಯಮಪಿ- ಮನಸ್ಸೂಕೂಡಾ, ವಿಘಟಿತಂಚೇತ್- ವೈರಾಗ್ಯದಿಂದ ಹೊಡೆಯಲ್ಪಟ್ಟದ್ದು, ಆದರೆ, ಸಂಗಃ-ಸಂಗಮವು, ವಿರಹಂ ವಿಯೋಗವನ್ನು ವಿಶೇಷಯತಿ- ಹೆಚ್ಚಿಸುತ್ತದೆ. || ೬೫ ||

ತಾತ್ಪರ್ಯ—ಈ ಶ್ಲೋಕದಲ್ಲಿ ವಿರಕ್ತಭಾವವನ್ನು ಹೇಳುತ್ತಾನೆ ಅದು ಹೇಗೆಂದರೆ:—ಕಾಮಿನೀ ಕಾಮುಕ ಪುರುಷರುಗಳಿಗೆ ವಿಯೋಗವುಂಟಾದ ಕಾಲದಲ್ಲಿ ಅನ್ಯೋನ್ಯವಾಗಿ ಮನಸ್ಸು ಸಂಗವುವಾಗಿರುತ್ತದೆ. ಅವರಿಬ್ಬರೂ ಏಕತ್ರ ಸೇರಿದರೆ ಮೊದಲಿದ್ದ ಸ್ನೇಹಾನುಬಂಧವಿಂದ ಪ್ರಾಪ್ಯಾ

ಭೂತಗಳಾದ ಕಾರ್ಯಗಳು ಜ್ಞಾಪಕಕ್ಕೆ ಬರುತ್ತವೆ. ಆದ್ದರಿಂದ ಸರ್ವಥಾ ವ್ಯಾಮೋಹವನ್ನು ಇಟ್ಟುಕೊಂಡಿರಬಾರದೆಂದು ಭಾವವು. ||೮೫||

—(ವೃತ್ತ ಮಾರ್ಯಾಭೇದಃ)—

ಶ್ಲೋ|| ಕಿಂಗತೇನಯದಿಸಾನಜೀವತಿ ಪ್ರಾಣಿತಿಪ್ರಿಯತಮಾ
ತಥಾಪಿಕಿಂ | ಇತ್ಯುದೀಕ್ಷ್ಯನವಮೇಘಮಾಲಿಕಾಂನ
ಪ್ರಯಾತಿಪಥಿಕಸ್ಸ್ವಮಂದಿರಂ || ೮೬ ||

ಟೀಕಾ || ಪ್ರಿಯತಮಾ - ಅತಿವಿಶ್ವಾಸಕರಳಾದ, ಸಾ - ಆ ಪ್ರಾಣಪ್ರಿಯಳು, ನಜೀವತಿ - ಬದುಕಿಯಿರುವುದಿಲ್ಲ, ಗತೇನ - ಹೋಗೋಣದರಿಂದ, ಕಿಂ - ಏನು ಪ್ರಯೋಜನವು, ತಥಾಪಿ - ಹಾಗಾದಾಗ್ಯೂ, ಸಾ - ಆ ಪ್ರಾಣನಾಯಕಿಯು, ಪ್ರಾಣಿತಿ - ಬದುಕಿಯಿದ್ದಾಗ್ಯೂ, ಕಿಂ ಏನು ಪ್ರಯೋಜನ. ಇತಿ - ಹೀಗೆಂದು, ವಿಚಾರಮಾಡಿ, ನವಮೇಘಮಾಲಿಕಾಂ; ನವ ನೂತನವಾದ - ಮೇಘಮಾಲಿಕಾಂ - ಮೇಘಗಳ ಪಙ್ಕ್ತಿಯನ್ನು ಉದೀಕ್ಷ್ಯ - ನೋಡಿ, ಪಥಿಕಃ - ಮಾರ್ಗಸ್ಥನು, ಮಂದಿರಂ - ಮನೆಯನ್ನು, ಕುರಿತು - ನಪ್ರಯಾತಿ - ಹೋಗಲಿಲ್ಲ. || ೮೬ ||

ತಾತ್ಪರ್ಯ— ಈ ಶ್ಲೋಕದಲ್ಲಿ ವಿರಕ್ತಭಾವವನ್ನು ಹೇಳುತ್ತಾನೆ. ಒಬ್ಬ ಮಾರ್ಗಸ್ಥನು ಮಳೆಗಾಲದಲ್ಲಿ ಮೇಘಗಳು ಉದಯಿಸಿರುವುದನ್ನು ನೋಡಿ ಈ ಮೇಘೋದಯವಾಗಿ ಯಿರುವ ಕಾಲದಲ್ಲಿ ಪ್ರಾಣಪ್ರಿಯಳಾದ ನನ್ನ ನಾಯಕಿಯು ಜೀವದಲ್ಲಿ ಬದುಕಿಯಿರುವುದಿಲ್ಲ. ಒಂದುವೇಳೆ ಉಪಾಯಾಂತರದಿಂದ ಬದುಕಿಯಿದ್ದಾಗ್ಯೂ ವಿರಹತಾಪದಿಂದ ಕೇವಲ ಕೃಶಳಾಗಿ ಬಲಹೀನಳಾಗಿರಬಹುದು ಹೀಗಿರುವ ನಾಯಕಿಯು ಪೂರ್ವದಹಾಗೆ ಯಾವ ವಿಶ್ವಾಸವನ್ನೂ ವಿಲಾಸವನ್ನು ತೋರಿಸಲಾರಳು. ಇಂಥಾ ಪ್ರಾಣನಾಯಕಿಯು ಜೀವದಲ್ಲಿ ಯಿದ್ದರೂ ಒಂದುವೇಳೆ ಜೀವದಲ್ಲಿ ಯಿಲ್ಲದೆ ಯಿದ್ದರೂ ಮನೆಗೆ ಹೋಗುವದು ಪ್ರಯೋಜನವಿಲ್ಲವೆಂದು ಮನೆಗೆ ಹೋಗದೆ ಅಡವಿಯನ್ನು ಕುರಿತು ಹೊರಟು ಹೋದನೆಂದು ಭಾವವು. ||೮೬||

ಕಾವ್ಯಲಿಂಗಾಲಂಕಾರಧ್ವನಿಃ | ರಥೋದ್ಧತಾವೃತ್ತ ||

ಶ್ಲೋ|| ವಿರಮತಬುಧಾಯೋಷಿತ್ಸಂಗಾತ್ಸುಖಾತ್ ಕ್ಷಣಭಂ
ಗುರಾತ್ಕುರುತಕರುಣಾಮೈತ್ರೀಪ್ರಜ್ಞಾವಧೂಜನ

ಸಂಗಮಂ ॥ ನಖಲುನರಕೇಹಾರಾಕ್ರಾಂತಂಘನಸ್ತನ
ಮಂಡಲಂ ಶರಣಮಥವಾಶ್ರೋಣೀಬಿಂಬಂರಣನ್ಮಣಿ
ಮೇಖಲಂ ॥ ೬೭ ॥

ಟೀಕು ॥ ಹೇ ವಿಬುಧಾಃ-ಎಲೈ ವಿದ್ವಾಂಸರುಗಳಿರ. ಯೋಷಿತ್ಸಂಗಾತ್ ; ಯೋಷಿತ್-ಸ್ತ್ರೀಯರುಗಳ, ಸಂಗಾತ್-ಸಂಬಂಧದ ದೆಸೆಯಿಂದ ಉಂಟಾದ, ಕ್ಷಣಭಂಗುರಾತ್ - ನಾಶವಾಗುವಂಥಾ, ಸುಖಾತ್ - ಸುಖದ ದೆಸೆಯಿಂದ, ವಿರಮತ-ವಿರಾಗವನ್ನು ಹೊಂದಿರಿ, ಕಿಂತು - ಮತ್ತೇನೆಂ ರೋ: ಕರುಣಾ-ದುಃಖಜನಗಳಲ್ಲಿ ದಯೆಯು, ಮೈತ್ರೀ- ಪುಣ್ಯಜನಗಳಲ್ಲಿ ಸ್ನೇಹವು, ಪ್ರಜ್ಞಾಃ ಸುಖಗಳಲ್ಲಿ ಬುದ್ಧಿವಿಶೇಷವು ಇವುಗಳೆಂಬುವಂಥಾ, ವಧೂಜನಸಂಗಮಂ ; ವಧೂ ಜನ ಸ್ತ್ರೀಜನಗಳ, ಸಂಗಮಂ-ಕೂಡವಿಕೆಯುನ್ನು ಕುರುತ-ಮಾಡಿರಿ, ಹಾರಾಕ್ರಾಂತಂ ; ಹಾರ-ಮುಕ್ತಾಹಾರದಿಂದ, ಆಕ್ರಾಂತಂ-ಕೂಡಿಕೊಂಡಿರುವ, ಘನಸ್ತನಮಂಡಲಂವ ; ಘನ-ಒತ್ತಾಗಿರುವ,ಸ್ತನ-ಕುಚಗಳ. ಮಂಡಲಂ-ಪ್ರದೇಶವೇ ಆಗಲಿ, ಅಥವಾ- ಹಾಗಲ್ಲದೆ ಹೋದರೆ, ರಣನ್ಮಣಿಮೇಖಲಂ-ರಣತ್-ಧ್ವನಿಮಾಡುತ್ತಾ ಇರುವ, ಮಣಿ- ರತ್ನಖಚಿತವಾದ, ಮೇಖಲಂ -ವೊಡ್ಯಾಣವುಳ್ಳ, ಶ್ರೋಣೀಬಿಂಬಂ ; ಶ್ರೋಣೀ-ಕಟಿಪುರೋಭಾಗದ ಬಿಬಂ-ಪ್ರದೇಶವು, ನರಕೇ-ನರಕದಲ್ಲಿ ಶರಣಂ-ಸಂರಕ್ಷಕವಾದದ್ದು, ನಖಲು-ಆಗುವದಿಲ್ಲ, ॥೬೭॥

ತಾತ್ಪರ್ಯ—ಈ ಶ್ಲೋಕದಲ್ಲಿ ವಿದ್ವಾಂಸರನ್ನು ಕುರಿತು ವೈರಾಗ್ಯವನ್ನು ಬೋಧಿಸುತ್ತಾನೆ. ಅದು ಹೇಗಂದರೆ;—ಎಲೈ ವಿದ್ವಾಂಸರುಗಳಿರಾ ಸ್ತ್ರೀಯರ ಸ್ನೇಹದಿಂದ ಪುಂಟಾಗುವ ಸುಖವು ಕ್ಷಣ ಭಂಗುರವಾದದ್ದು ಇವಕ್ಕೆ ಬದಲಾಗಿ ಕರುಣಾ ಮೈತ್ರೀ ಪ್ರಜ್ಞಾ ಎಂಬ ಸ್ತ್ರೀಯರುಗಳ ಸ್ನೇಹವನ್ನು ಮಾಡಿರಿ, ಅಥವಾ ಅಸಹ್ಯಕರವಾದ ಸ್ತ್ರೀಯರುಶರೀರದಲ್ಲಿ ನಿಬಿಡವಾದ ಕುಚಮಂಡಲವು ಕಾಂಚೀಧಾಮದಿಂದ ಶಬ್ದಾಯಮಾನವಾಗಿರುವ ಸ್ತ್ರೀಕಟಿ ಪುರೋಭಾಗವು ಜನಗಳಿಗೆ ಸಂರಕ್ಷಕವಾಗುವದಿಲ್ಲ, ಇವುಗಳನ್ನು ಅಂದರೆ ಸ್ತ್ರೀಯರುಗಳ ಸ್ತನಜಘನಾದಿ ಪ್ರದೇಶಗಳನ್ನು ನೋಡಿ ಭ್ರಮಿಸಬೇಡಿರಿ. ನಿಮ್ಮಗಳಿಗೆ ಸಂರಕ್ಷಕವಾಗುವುದಿಲ್ಲ, ಆದ್ದರಿಂದ ಕರುಣಾದಿಗಳ ಸಮಾಗಮವನ್ನು ಮಾಡುವದು ಶ್ರೇಯಸ್ಕರವೆಂದು ಭಾವವು. ॥೬೭॥

—( ಹರಿಣೀವೃತ್ತ. )—

ಶ್ಲೋ॥ ಯದಾಯೋಗಾಭ್ಯಾಸವ್ಯಸನಕೃಶಯೋರಾತ್ಮಮನ
ಸೋರವಿಚ್ಛಿನ್ನಾಮೈತ್ರೀಸ್ಫುರತಿಕೃತಿನಸ್ತಸ್ಯಕಿ
ಮುತೈಃ ॥ ಪ್ರಿಯಾಣಾಮಾಲಾಪೈರಧರಮಧುಭಿರ್ವ
ಕ್ತ್ರವಿಧುಭಿಸ್ಸನಿಶ್ವಾಸಾಮೋದೈಸ್ಸಕುಚಕಲಶಾ
ಶ್ಲೇಷಸುರತೈಃ ॥೬೮॥

ಟೀಕು ॥ ಯದಾ-ಯಾವ ಕಾಲದಲ್ಲಿ ಯಾವ ಸುಕೃತಿನಃ-ಯಾವ ಸುಕೃತ ಶಾಲಿಯು, ಯೋಗಾಭ್ಯಾಸವ್ಯಸನಕೃಶಯೋಃ ; ಯೋಗಾಭ್ಯಾಸ-ಆತ್ಮಧ್ಯಾನದ ಅಭ್ಯಾಸದಲ್ಲಿ ವುಂಟಾದ, ವ್ಯಸನ-ಆಸಕ್ತಿಯಿಂದ, ಕೃಶ-ಕಾರ್ಶ್ಯಗಳಾದ, ಆತ್ಮಮನಸೋಃ ಆತ್ಮ ಮನಸ್ಸುಗಳಲ್ಲಿ, ಅವಿಚ್ಛಿನ್ನಾ-ಅಧಿಕವಾದ, ಮೈತ್ರೀ-ವಿಶ್ವಾಸವು, ಸ್ಫುರತಿ ಪ್ರಕಾಶಿಸುತ್ತದೆಯೊ, ತಸ್ಯಕೃತಿನಃ-ಆ ಸುಕೃತಶಾಲಿಗೆ, ತೈಃ ಆ ಪೂರ್ವೋಕ್ತಗಳಾದ, ಪ್ರಿಯಾಸಂಬಂಧಗಳಾದ, ಆಲಾಪೈಃ ಮಾತುಗಳಿಂದ, ಅಧರ ಮಧುಭಿಃ-ಅಧರ ತುಟಿಯಲ್ಲಿರುವ, ಮಧುಭಿಃ-ಸುಧಾಸ್ವಾದವುಳ್ಳ. ವಕ್ತ್ರವಿಧುಭಿಃ-ಮುಖಚಂದ್ರಗಳಿಂದಲೂ ಸನಿಶ್ವಾಸಾಮೋದೈಃ ಸನಿಶ್ವಾಸ-ಉಸುರುಬಿಡೋಣದರಿಂದ ಕೂಡಿಕೊಂಡಿರುವ ಆಮೋದೈಃ ಪರಿಮಳಗಳಿಂದಲೂ, ಸಕುಚಕಲಶಾಶ್ಲೇಷಸುರತೈಃ-ಸಕುಚಕಲಶ-ಕುಚಕಲಶಗಳಿಂದ ಕೂಡಿಕೊಂಡಿರುವ, ಆಶ್ಲೇಷ ಆಲಿಂಗನಗಳುಳ್ಳ, ಸುರತೈಃ ಸುರತಕಾರ್ಯದಿಂದ, ಕಿಮು-ಏನು ಪ್ರಯೋಜನವು ॥೬೮॥

ತಾತ್ಪರ್ಯ—ಯಾವ ಸುಕೃತಶಾಲಿಯು ಮಾನವನಾದರೂ ಪರಮಾತ್ಮನ ಧ್ಯಾನಯೋಗದಲ್ಲಿ ಆಸಕ್ತವಾಗಿರುತ್ತದೆಯೋ ಅಂಥಾ ಸುಕೃತಶಾಲಿಗೆ ಸ್ತ್ರೀಯರುಗಳ ಮಧುರಾಲಾಪಗಳಿಂದಲು ಕುಚಾಲಿಂಗನ ಪೂರ್ವಕವಾದ ಸುರತದಿಂದಲವ ಅಧರಾಮೃತವುಳ್ಳ ಸ್ತ್ರೀಯರುಗಳ ಚಂದ್ರ ಸದೃಶಗಳಾದ ಮುಖಗಳಿಂದಲು ಸಹಾಯೇನುಪ್ರಯೋಜನ? ಯೋಗಿಯಾದವನಿಗೆ ಶಾಶ್ವತವಾದ ಸರ್ವೇಂದ್ರಿಯವೇ ಸುಖಕರವಾದ ಬ್ರಹ್ಮಾನಂದಕಿಂತ ತುಚ್ಛವಾದ ಸ್ರಕ್‌ಚಂದನಾದಿ ವಿಷಯಾನಂದದಿಂದ ಪ್ರಯೋಜನವಿಲ್ಲವೆಂಬುವ ತಾತ್ಪರ್ಯ. ಶ್ವಾಸಾಮೋದ ಪ್ರಸಕ್ತಿಯಿಂದ ಸ್ತ್ರೀಯರುಗಳಿಗೆ ಪದ್ಮಿನೀಜಾತಿತ್ವವು

ಸೂಚಿತವಾಗುತ್ತದೆ. ಇವಲ್ಲಿ ಅಪ್ರಸ್ತುತಾರೋಪಣೆಯೆಂಬಲು ಮುಖಗಳಿಗೆ ಯೆಂದು ಸಾದೃಶ್ಯದಿಂದಲೂ ರೂಪಕೋಪಮಾಲಂಕಾರಗಳಿಗೆ ಸಾಂಕರ್ಯವುಂಟಾಗಿದೆ. ||೬೮||

—|| ಶಿಖರಿಣೀವೃತ್ತಂ ||—

ಶ್ಲೋ || ಯದಾಸೀದಜ್ಞಾನಂ ಸ್ಮರತಿಮಿರಸಂಚಾರಜನಿತಂ
ತದಾ ದೃಷ್ಟಂ ನಾರೀಮಯಮಿದಮಶೇಷಂ ಜಗದಪಿ ||
ಇದಾನೀಮಸ್ಮಾಕಂ ಪಟುತರವಿವೇಕಾಂಜನಜುಷಾಂ ಸ
ಮೀಭೂತಾ ದೃಷ್ಟಿಸ್ತ್ರಿಭುವನಮಪಿ ಬ್ರಹ್ಮ ಮನುತೇ ||

ಟೀಕಃ || ಯದಾ - ಯಾವ ಕಾಲದಲ್ಲಿ, ಸ್ಮರತಿಮಿರಸಂಚಾರಜನಿತಂ, ಸ್ಮರ-ಮನ್ಮಥನೆಂಬುವಂಥಾ, ತಿಮಿರ - ಕತ್ತಲೆಯು, ಸಂಚಾರ - ವ್ಯಾಪ್ತಿಯಿಂದ, ಜನಿತಂ-ಹುಟ್ಟಿಸಲ್ಪಟ್ಟ ಅಜ್ಞಾನಂ ಅವಿವೇಕವು ಆಸೀತ್-ಆಯಿತೋ, ತದಾ-ಆಕಾಲದಲ್ಲಿ, ಅಶೇಷಂ-ಸಮಸ್ತವಾದ, ಇದಂಜಗತ್ ಈ ಪ್ರಪಂಚವೆಲ್ಲವು, ನಾರೀಮಯಮಿತಿ - ಸ್ತ್ರೀರೂಪಕವಾದದ್ದೆಂದು, ದೃಷ್ಟಂ-ನೋಡಲ್ಪಟ್ಟಿತು, ಇದಾನೀಂ - ಈಗಲಾದರೋ, ಪಟುತರವಿವೇಕಾಂಜನಜುಷಾಂ, ಪಟುತರ-ಸಮರ್ಥವಾದ, ವಿವೇಕ ತತ್ವಜ್ಞಾನವೆಂಬುವ ಅಂಜನ-ನೇತ್ರರೋಗನಿವಾರಕ ಅಂಜನವನ್ನು, ಜುಷಾಂ ಹೊಂದಿರುವ, ಅಸ್ಮಾಕಂ - ನಮ್ಮ ಸಂಬಂಧಿಯಾದ, ದೃಷ್ಟಿಃ ದೃಷ್ಟಿಯು, ಸಮೀಭೂತಾಸತೀ-ಸಮತ್ವವನ್ನು ಹೊಂದಿದಂಥಾದ್ದಾಗಿ, ತ್ರಿಭುವನಮಪಿ - ಮೂರುಲೋಕವನ್ನು ಕೂಡ, ಪರಬ್ರಹ್ಮ - ಪರಬ್ರಹ್ಮನನ್ನಾಗಿ, ಮನುತೇ - ಮನಸ್ಸಿಗೆ ತಿಳಿದಿರುತ್ತದೆ. ||೬೯||

ತಾತ್ಪರ್ಯ—ಈ ಶ್ಲೋಕದಲ್ಲಿ ಯೋಗಶಾಸ್ತ್ರಾನುಸಾರವಾಗಿ ಬ್ರಹ್ಮವಿಚಾರವನ್ನು ಹೇಳುತ್ತಾನೆ. ಅದು ಹೇಗಂದರೆ:—ಮನುಷ್ಯನಿಗೆ ಯಾವಕಾಲದಲ್ಲಿ ಮನ್ಮಥಾ ವಿಭ್ರಮವದಿಂದ ಉಂಟಾದ ಅಜ್ಞಾನವು ಬರುತ್ತೋ ಆಕಾಲದಲ್ಲಿ ಈ ಜಗತ್ತನ್ನೆಲ್ಲವನ್ನೂ ಸ್ತ್ರೀಮಯವಾದದ್ದೆಂದು ತಿಳಿಯುತ್ತಾನೆ ಅಂದರೆ ಪ್ರಪಂಚದಲ್ಲಿ ಸ್ತ್ರೀಯರುಗಳಂಥಾ ಉತ್ತಮವಸ್ತುವೆ ಯಿಲ್ಲವೆಂದು ಭಾವಿಸುತ್ತಾನೆ. ಆದರಿಂದ ಕಾಮುಕರಿಗೆ ಜಗತ್ತೇ ಸ್ತ್ರೀಮಯವಾಗಿ ಇರುವದು ಯೋಗಿಯಾದರೊ ಈಗ ನಮ್ಮದೃಷ್ಟಿಯು

ವಿವೇಕವೆಂಬುವ ಆ ಅಂಜನದಿಂದ ಮುಖದಾಮಿ ಸಜಾತೀಯ ವಿಜಾತೀಯ
ಭೇದಗಳುಳ್ಳ ಈ ಪ್ರಪಂಚವನ್ನೆಲ್ಲಾ ಏಕಾಕಾರವಾಗಿ ಪರಬ್ರಹ್ಮವಸ್ತುವ
ನ್ನಾಗಿ ತಿಳಿಯುತ್ತಲಿಸೆ ಎಂದು ಹೇಳುತ್ತಾನೆ. ||೬೯||

[ಶಿಖರಿಣೀವೃತ್ತಂ.]

ಶ್ಲೋ|| ತಾವದೇವಕೃತಿನಾಮಪಿಸ್ಫುರತ್ಯೇಷನಿರ್ಮಲವಿವೇಕ
ದೀಪಕಃ || ಯಾವದೇವನಕುರಂಗಚಕ್ಷುಷಾಂತಾಡ್ಯ
ತೇಚಟುಲಲೋಚನಾಂಚಲೈಃ ||೭೦||

ಟೀಕು || ಕೃತಿನಾಂ-ಪುಣ್ಯಶಾಲಿಗಳಿಗೆ, ಏಷಃ-ಈ, ನಿರ್ಮಲವಿವೇಕದೀ
ಪಕಃ ನಿರ್ಮಲ ನಿಷ್ಕಳಂಕವಾದ, ವಿವೇಕ - ತತ್ವಾವಬೋಧವೆಂಬುವಂಥಾ,
ದೀಪಕಃ ದೀಪವು, ತಾವದೇವ-ಅಷ್ಟರಪರ್ಯಂತವಾಗಿ, ಸ್ಫುರತಿ ಪ್ರಕಾಶಿಸು
ತ್ತದೆ. ಕುರಂಗಚಕ್ಷುಷಾಂ - ಕುರಂಗ-ಜಿಂಕೆಯ, ಚಕ್ಷುಷಾಂ-ಕಣ್ಣುಗಳೋ
ಪಾದಿಯಲ್ಲಿ ಕಣ್ಣುಗಳುಳ್ಳ ಸ್ತ್ರೀಯರುಗಳ, ಚಟುಲಲೋಚನಾಂಚಲೈಃ-
ಚಟುಲ-ಚಂಚಲವಾದ, ಲೋಚನ-ಕಣ್ಣುಗಳ, ಅಂಚಲೈಃ- ಕೊನೆನೋಟಗ
ಳಿಂದ, ಯಾವತ್ - ಎಷ್ಟರೊಳಗಾಗಿ, ನತಾಡ್ಯತೇ-ಹೊಡೆಯಲ್ಪಡುವುದಿಲ್ಲ
ವೊ, ತಾವದೇವ-ಅಷ್ಟರೊಳಗಾಗಿ, ಸ್ಫುರತಿ-ಪ್ರಕಾಶಿಸುತ್ತದೆ. ||೭೦||

ತಾತ್ಪರ್ಯ= ಈ ಶ್ಲೋಕದಲ್ಲಿ ಪೂರ್ವಶ್ಲೋಕ ವೈಲಕ್ಷಣದಿಂದ ದು
ರ್ವಿರಕ್ತಪದ್ಧತಿಯನ್ನು ಹೇಳುತ್ತಾನೆ. ಅದು ಹೇಗೆಂದರೆ:—ಯಾವ ಸು
ಕೃತಿಯ ಮನೋನೈರ್ಮಲ್ಯವೆಂಬುವ ದೀಪಪ್ರಕಾಶವು ಕುರಂಗನೇತ್ರ
ಯರ ಕಡೆಗಣ್ಣಿ ನೋಟದಿಂದ ಹೊಡೆಯಲ್ಪಡುವದಿಲ್ಲವೋ ಆವರೆಗೂ
ವೈರಾಗ್ಯಭಾಗ್ಯವಿರುವದು. ಸ್ತ್ರೀಯರುಗಳ ಅಪಾಂಗದೃಷ್ಟಿಗೆ ಗೋಚರ
ವಾದ ಮೇಲೆ ಯಾವ ವೈರಾಗ್ಯವೂ ಇರುವದಿಲ್ಲವೆಂದು, ತಾತ್ಪರ್ಯ.—
ಕುರಂಗಲೋಚನ ಸಾಮ್ಯದಿಂದ ಉಪಮಾಲಂಕಾರ. ||೭೦||

[ರಥೋದ್ಧತಾವೃತ್ತಂ.]

ಶ್ಲೋ|| ವಚಸಿಭವತಿಸಂಗತ್ಯಾಗಮುದ್ದಿಶ್ಯವಾರ್ತಾಶ್ರುತಿಮು
ಖರಮುಖಾನಾಂಕೇವಲಂಪಂಡಿತಾನಾಂ || ಜಘನಮ

ರುಣರತ್ನಗ್ರಥಿಕಾಂಚೀಕಲಾಪಂ ಕುವಲಯನಯನಾ
ನಾಂ ಕೋ ವಿಹಾತುಂ ಸಮರ್ಥಃ ॥೨೧॥

ಟೀಕಾ ॥ ಶ್ರುತಿಮುಖರಮುಖಾನಾಂ, ಶ್ರುತಿ-ವೇದಗಳಿಂದ, ಮುಖರ ಶಬ್ದಾಯಮಾನಗಳಾದ ಮುಖಾನಾಂ-ಮುಖಗಳುಳ್ಳ, ಪಂಡಿತಾನಾಂ ವೇದಾಂತಶಾಸ್ತ್ರಾದಿ ಶಾಸ್ತ್ರಾಭಿಜ್ಞರಾದ ವಿವೇಕಿಗಳಿಗೆ, ವಚಸಿ ವಾಕ್ಯದಲ್ಲಿ. ಕೇವಲಂ-ಅತ್ಯಂತವಾಗಿ, ಸಂಗತ್ಯಾಗಮುದ್ದಿಶ್ಯ-ಸಂಗ ಪಥೂಜನದ ತ್ಯಾಗಂ-ಬಿಡೋಣವನ್ನು, ಉದ್ದಿಶ್ಯ-ಉದ್ದೇಶ್ಯಮಾಡಿ, ವಾರ್ತಾಕೇವಲಂ - ವಾಙ್ಮಾತ್ರವೆ, ಭವತಿ ಆಗುತ್ತೆ, ಅರುಣರತ್ನಗ್ರಥಿಕಾಂಚೀಕಲಾಪಂ- ಅರುಣರತ್ನಗ್ರಥಿ-ಪದ್ಮರಾಗಮಣಿಖಚಿತವಾದ, ಕಾಂಚೀ - ಒಡ್ಯಾಣ್ಯವೆಂಬುವಂಥ, ಕಲಾಪಂ-ಆಭರಣವುಳ್ಳ, ಕುವಲಯ ದೃಶಾಂ-ಕುವಲಯ-ಕನ್ನೈದಿಲೆ ಹೂವಿಗೆ ದೃಶಾ- ಸಮಾನಗಳಾದ, ನಯನಾನಾಂ- ನೇತ್ರಗಳುಳ್ಳ, (ಸ್ತ್ರೀಯರುಗಳ) ಜಘನಂ-ಕಟಿಪುರೋಭಾಗವನ್ನು. ಕಃ-ಯಾವ ಮಾನವನು ವಿಹಾತುಂ-ಬಿಡುವದಕ್ಕೆ, ಸಮರ್ಥಃ-ಸಮರ್ಥನಾದಾನು, ॥೨೧॥

ತಾತ್ಪರ್ಯ—ಈ ಶ್ಲೋಕದಲ್ಲಿ ದುರ್ವಿರಕ್ತ ವಿಷಯವನ್ನು ಹೇಳುತ್ತಾನೆ. ಅದು ಹೇಗೆಂದರೆ —ಯಾವಾಗಲು ವೇದಪಾಠವನ್ನು ಹೇಳುತ್ತಾ ಇರುವ ಶ್ರೋತ್ರಿಯರುಗಳಿಗಾಗಲಿ, ವೇದಾಂತ ಶಾಸ್ತ್ರಾದಿ ಇತರ ಶಾಸ್ತ್ರಾಭಿಜ್ಞರಾದ ಇತರ ಪಂಡಿತರಿಗೆ ಆಗಲಿ, ವಿವೇಕ ವೈರಾಗ್ಯಗಳ ಬಾಯಲ್ಲಿ ಹೊಗಳುವದೆ ಹೊರ್ತು ನಡಿಸುವದಕ್ಕೆ ಆಗುವದಿಲ್ಲ ಯಾಕೆಂದರೆ ಅರುಣ ಕಿರಣವೋಪಾದಿಯಲ್ಲಿ ಹೊಳೆಯುತ್ತಿರುವ ರತ್ನಖಚಿತವಾದ ಕಾಂಚೀ ಕಲಾಪದಿಂದ ಒಪ್ಪುತ್ತಾ ಇರುವ ಕನ್ನೈದಲೆ ಹೂವಿನೋಪಾದಿಯಲ್ಲಿ ಕಣ್ಣುಗಳುಳ್ಳ ಸ್ತ್ರೀಯರುಗಳ ಕಟಿ ಪುರೋಭಾಗವನ್ನು ಯಾರುತಾನೆ ಬಿಟ್ಟಿರು ಕಟಾಕ್ಷ ವೀಕ್ಷಣ ಪರ್ಯಂತವಾಗಿ ವಿವೇಕ ವೈರಾಗ್ಯಗಳು ಇರುತ್ತವೆ. ಕಟಾಕ್ಷ ಪತನಾನಂತರ ವಾಙ್ಮಾತ್ರದಲ್ಲಿ ಇರುತ್ತದೆಯೇ ಹೊರತು ನಡಿಯುವದಕ್ಕೆ ಆಗುವದಿಲ್ಲ ಅರುಣರತ್ನ ಕುವಲಯನಯನಾ ಯೆಂಬುವ ಪದಪ್ರಯೋಗದಿಂದ. ಉಪಮಾಲಂಕಾರಃ, ಮಾಲಿನೀವೃತ್ತಂ ವೃತ್ತಲಕ್ಷಣಂತು ನನಮಯಯಯುತೇಯಂ ಮಾಲಿನೀ ಭೋಗಿ ಲೋಕೈಃ ಇತಿ ಲಕ್ಷಣಾತ್. ॥೨೧॥

ಶ್ಲೋ॥ ಸಪರಪ ್ರತಾರಕೋಽಸೌ ನಿಂದತಿ ಯೋಽಲೀಕಪಂಡಿತೋ ಯುವತೀಃ ॥ ಯಸ್ಮಾತ್ತಪಸೋಽಪಿ ಫಲಂ ಸ್ವರ್ಗಸ್ತಸ್ಯಾಪಿ ಫಲಂ ತಥಾಪ್ಸರಸಃ ॥೭೧॥

ಟೀಕು ॥ ಯೋಽಸೌ-ಯಾವ ಈ, ಅಲೀಕಪಂಡಿತಃ-ಅಲೀಕ- ಅನೃತವನ್ನು ಆಡುತ್ತಿರುವ, ಪಂಡಿತಃ-ವಿದ್ವಾಂಸನಾದರೂ, ಯುವತೀಃ - ಯೌವ್ವನಸ್ತ್ರೀಯರುಗಳನ್ನು, ನಿಂದತಿ-ತಿರಸ್ಕರಿಸುತ್ತಾನೋ, ಸೋಽಸೌ-ಆಪಂಡಿತನು. ಪರಪ್ರತಾರಕಃ ಪರ ಅನ್ಯರನ್ನು, ಪರ-ಪರಲೋಕವನ್ನು, ಪ್ರತಾರಕಃ-ವಂಚಿಸುವಂಥಾವನಾಗುತ್ತಾನೆ, ಯಸ್ಮಾತ್-ಯಾವ ಕಾರಣದ ದೆಸೆಯಿಂದ, ತಪಸೋಽಪಿ-ತಪಸ್ಸಿಗೂ, ಫಲಂ ಫಲವೂ, ಸ್ವರ್ಗಃ-ಸ್ವರ್ಗಲೋಕವೂ, ಸ್ವರ್ಗೇಽಪಿ-ಸ್ವರ್ಗಲೋಕದಲ್ಲಿಯೂ ಕೂಡ, ತಪಸಃ-ತಪಸ್ಸಿಗೆ, ಫಲಂ-ಫಲವು, ಅಪ್ಸರಸಃ ಅಪ್ಸರ ಸ್ತ್ರೀಯರುಗಳೂ ಭವಂತಿ-ಆಗುತ್ತಾರೊ, ॥೭೧॥

ತಾತ್ಪರ್ಯ—ಯಾವ ಪಂಡಿತನಾದರೂ ಯೌವನ ಸ್ತ್ರೀಯರುಗಳನ್ನು ನಿಂದಿಸುತ್ತಾನೋ ಆವನು ಮನುಷ್ಯರು ಜನಗಳನ್ನು ವಂಚಿಸುವನೆಂದು ಹೇಳಬೇಕು. ಅದು ಹೇಗೆಂದರೆ:—ಲೋಕದಲ್ಲಿ ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸಿಗೆ ಸ್ವರ್ಗಲೋಕವೆ ಫಲವಾಗಿದೆಯೋ ಆ ಸ್ವರ್ಗಲೋಕದಲ್ಲಿಯೂ ಕೂಡ ಅಂಥಾ ತಪಸ್ಸಿಗೆ ಅಪ್ಸರ ಸ್ತ್ರೀಯರುಗಳೆ ಫಲವಾಗಿ ಇರುತ್ತಾರೋ ಆಕಾರಣದ ದೆಸೆಯಿಂದ ಸ್ತ್ರೀಯರುಗಳನ್ನು ನಿಂದಿಸುವ ಪಂಡಿತರು ಜನವಂಚಕರೆಂದು ಹೇಳಬೇಕೆಂಬ ತಾತ್ಪರ್ಯವು. ವೃತ್ತಮಾರ್ಯಾಭೇದ.

ಶ್ಲೋ ॥ ಮತ್ತೇಭಕುಂಭದಳನೇ ಭುವಿ ಸಂತಿ ಧೀರಾಃ ಕೇಚಿತ್ಪ್ರಚಂಡಮೃಗರಾಜವಧೇಽಪಿ ದಕ್ಷಾಃ ॥ ಕಿಂತು ಬ್ರವೀಮಿ ಬಲಿನಾಂ ಪುರತಃ ಪ್ರಸಹ್ಯ ಕಂದರ್ಪದರ್ಪದಳನೇ ವಿರಳಾ ಮನುಷ್ಯಾಃ ॥ ೭೨ ॥

ಟೀಕು ॥ ಭುವಿ-ಭೂಮಿಯಲ್ಲಿ, ಕೇಚಿತ್ - ಕೆಲವು ಜನಗಳು, ಮತ್ತೇಭಕುಂಭದಳನೇ-ಮತ್ತೇಭ-ಮದಿಸಿದ ಆನೆಯ, ಕುಂಭ-ಕುಂಭಸ್ಥಳವನ್ನು, ದಳನೇ-ಸೀಳೋಣದಲ್ಲಿ, ಧೀರಾಃ-ಸಮರ್ಥರಾಗಿದ್ದಾರೆ, ಕೇಚಿತ್ - ಕೆಲವು ಜನರು, ಪ್ರಚಂಡಕೋಪೋದ್ದೀಪಿತವಾದ, ಮೃಗರಾಜ-ಸಿಂಹದ, ವಧೇಽಪಿ-

ಸಂಹಾರದಲ್ಲೂ ಕೂಡ, ದಕ್ಷಾಃ-ಸಮರ್ಥರಾಗಿದ್ದಾರೆ, ಕಿಂತು-ಮತ್ತೇನೆಂದ ರೋ, ಬಲಿನಾಂ-ಬಲಶಾಲಿಗಳ, ಪುರತಃ-ಮುಂದುಗಡೆಯಲ್ಲಿ, ಪ್ರಸಹ್ಯ-ಬಲಾತ್ಕಾರವಾಗಿ, ಬ್ರವೀಮಿ-ಹೇಳುತ್ತೇನೆ, ಕಂದರ್ಪದರ್ಪದಳನೇ-ಕಂದರ್ಪ-ಮನ್ಮಥನ, ದರ್ಪ-ಅಹಂಕಾರವನ್ನು ದಳನೇ-ಸೀಳೋಣದರಲ್ಲಿ, ಮನುಷ್ಯಾಃ-ಮನುಷ್ಯರು, ವಿರಳಾಃ-ಹುಡುಕುವದಕ್ಕೆ ಯೋಗ್ಯರಾಗಿದ್ದಾರೆ. ||೭೩

ತಾತ್ಪರ್ಯ—ಭೂಲೋಕದಲ್ಲಿರುವ ಜನರು ಮನ್ಮಥನನ್ನು ಜಯಿಸುವದಕ್ಕೆ ಆಗುವದಿಲ್ಲವೆಂಬುದನ್ನು ಹೇಳುತ್ತಾನೆ. ಅದು ಹೇಗೆಂದರೆ;—ಭೂಮಿಯಲ್ಲಿರುವ ಜನಗಳಲ್ಲಿ ಮದಿಸಿದ ಆನೆಯ ಕುಂಭಸ್ಥಳವನ್ನು ಭೇದಿಸುವ ಶೂರರು ಕೆಲವರು ಕೋಪದಿಂದ ಕೂಡಿರುವ ಸಿಂಹವನ್ನು ಸಂಹರಿಸುವುದರಲ್ಲಿ ಸಮರ್ಥರಾದವರು ಕೆಲವರು ಹೋಗಿರುವ ಶೂರಜನದ ಮುಂದುಗಡೆ ಪ್ರಸಹ್ಯ ಬಲಾತ್ಕಾರವಾಗಿ (ಅಥವಾ ಪ್ರಸಹ್ಯ ಹಾಸ್ಯಮಾಡಿ ಊರ್ಧ್ವಬಾಹುವಾಗಿ) ಹೇಳುತ್ತೇನೆ. ಏನಂದರೆ;—ಮನ್ಮಥನ ದರ್ಪವನ್ನು ಹೋಗಲಾಡಿಸುವ ಶೂರರನ್ನು ಹುಡುಕಿದರೆ ಸಿಕ್ಕುತ್ತಾರೋ ಇಲ್ಲವೋ ಎಂಬುವ ಸಂದೇಹವಾಗಿದೆ ಪ್ರಮಥಗಣಗಳಲ್ಲದೆ ಮನುಷ್ಯರಲ್ಲಿ ಯಾರು ಮನ್ಮಥನನ್ನು ಜಯಿಸಿದವರೋ ಅವರು ಸ್ವಲ್ಪವಾಗಿರಬಹುದೆಂದು ತಿಳಿಯುತ್ತೇನೆ. ಅತ್ರ ಕಂದರ್ಪಯಿತ್ಯತ್ರ ಶಬ್ದಾಲಂಕಾರಃ, ವಸಂತತಿಲಕಾ ವೃತ್ತಂ ಲಕ್ಷಣಂತು ಉಕ್ತಾವಸಂತತಿಲಕಾತಭಜಾ ಜಗೌಗಃ ಇತಿ ಲಕ್ಷಣಾತ್. ||೭೩||

ಶ್ಲೋ|| ಸನ್ಮಾರ್ಗೇತಾವದಾಸ್ತೇ ಪ್ರಭವತಿಚನರಸ್ತಾವದೇ
ವೇಂದ್ರಿಯಾಣಾಂಲಜ್ಜಾಂತಾವದ್ವಿದತ್ತೇವಿನಯ
ಮಪಿ ಸಮಾಲಂಬತೇತಾವದೇವ || ಭ್ರೂಚಾಪಾಕೃಷ್ಟ
ಮುಕ್ತಾಃ ಶ್ರವಣಪಥಗತಾನೀಲಪಕ್ಷ್ಮಾಣಏತೇಯಾವ
ಲ್ಲೀಲಾವತೀನಾಂಹೃದಿನಧೃತಿಮುಷೋದೃಷ್ಟಿಬಾಣಾಃ
ಪತಂತಿ ||೭೪||

ಟೀಕು || ನರಃ-ವಿದ್ವಾಂಸನು, ಸನ್ಮಾರ್ಗೇ - ಶ್ರುತಿಸ್ಮೃತಿ ಸಂಮತವಾದ ಆಚಾರಮಾರ್ಗದಲ್ಲಿ, ತಾವದೇವ-ತಾವತ್ಪರ್ಯಂತ, ಆಸ್ತೇ-ಇರು

ತ್ತಾನೆ, ಇಂದ್ರಿಯಾಣಾಂ ಚಕ್ಷುರಾದಿ ಇಂದ್ರಿಯಗಳಿಗೆ, ನಿಯಮಃ ನಿಯ ಮವು ತಾವದೇವ, ಅಷ್ಟರ ಪರಿಯಂತರವು, ಭವತಿ - ಆಗುತ್ತೆ, ಲಜ್ಜಾಂ- ನಾಚಿಕೆಯನ್ನು, ತಾವತ್-ಅಷ್ಟರ ಪರ್ಯಂತರವು, ವಿಧತ್ತೇ - ಧರಿಸುತ್ತಾನೆ, ವಿನಯಮಪಿ-ವಿನಯತ್ವವನ್ನೂ ಕೂಡ, ತಾವದೇವ - ಅಷ್ಟರಪರಿಯಂತವು, ಸಮಾಲಂಬತೇ ಸ್ವೀಕರಿಸುತ್ತಾನೆ, ಭ್ರೂಚಾಪಾಕೃಷ್ಟ ಮುಕ್ತಾಃ-ಭ್ರೂ-ಹು ಬ್ಬುಗಳೆಂಬುವ, ಚಾಪಾ-ಧನುಸ್ಸಿನಿಂದ, ಆಕೃಷ್ಟ-ಎಳೆಯಲ್ಪಟ್ಟ, ಮುಕ್ತಾಃ- ಬಿಡಲ್ಪಟ್ಟ, (ಭ್ರೂಭಂಗಪೂರ್ವ್ವಕವಾಗಿ ಬಿಡಲ್ಪಟ್ಟ) ಶ್ರವಣಪಥಗತಾಃ-ಶ್ರವ ಣಾ-ಕಿವಿಗಳ, ಪಥ-ಮಾರ್ಗವನ್ನು, ಗತಾಃ-ಹೊಂದಿರುವ, ನೀಲಪಕ್ಷ್ಮಾಣಃ- ನೀಲ ಕಪ್ಪಾದ, ಪಕ್ಷ್ಮಾಣಃ-ರೆಪ್ಪೆಗಳುಳ್ಳ, ಹೃದಿ-ಮನಸ್ಸಿನಲ್ಲಿ, ಧೃತಿ-ಮು ಷಃ ಧೃತಿ-ಧೈರ್ಯವನ್ನು, ಮುಷಃ - ಅಪಹರಿಸುತ್ತಿರುವ, ಲೀಲಾವತೀ ನಾಂ- ವಿಲಾಸವುಳ್ಳ ಸ್ತ್ರೀಯರುಗಳ, ದೃಷ್ಟಿ-ಬಾಣಾಃ ದೃಷ್ಟಿನೇತ್ರಗಳೆಂಬು ವಂತಾಬಾಣಾಃ-ಬಾಣಗಳು, ಯಾವತ್-ಎಷ್ಟರೊಳಗಾಗಿ, ನಪತಂತಿ ಬೀಳು ವುದಿಲ್ಲವೋ, ತಾವದೇವೇತಿ ಪೂರ್ವೇಣಾನ್ವಯಃ, ಅತ್ರದ್ವಿತೀಯಾರ್ಧೇ ಸಮ ಸ್ತ ವಸ್ತುವರ್ತಿಸಾ-ಯವ ರೂಪಕಾಲಂಕಾರಃ ಸ್ರಗ್ಧರಾವೃತ್ತಂ, ||೭೪||

ತಾತ್ಪರ್ಯ — ಈ ಶ್ಲೋಕದಲ್ಲಿ ಮೊದಲು ಹೇಳಿದ ಅರ್ಥವನ್ನೇ ಶಬ್ದ ವೈಚಿತ್ರ್ಯದಿಂದ ಬದಲಾಗಿ ಹೇಳುತ್ತಾನೆ. ಅದು ಹೇಗೆಂದರೆ:—ವಿದ್ವಾಂ ಸನಾದ ಮನುಷ್ಯನು ಎಷ್ಟರ ಪರ್ಯಂತ ಕುವಲಯನೇತ್ರೆಯರ ಕಟಾಕ್ಷಬಾ ಣಗಳು ಬೀಳುವದಿಲ್ಲವೋ ಸ್ತ್ರೀಯರುಗಳ ಕಡೆಗಣ್ಣಿನೋಟಕ್ಕೆ ಬೀಳದೆ ಇರುವನೋ ಅಷ್ಟರ ಪರ್ಯಂತವಾಗಿ ಸನ್ಮಾರ್ಗದಲ್ಲಿ ಇರುತ್ತಾನೆ. ಮತ್ತು ಅದುವರಿಗೂ ಇಂದ್ರಿಯ ನಿಗ್ರಹವನ್ನು ಮಾಡಿ ಇರುತ್ತಾನೆ. ಮತ್ತು ಲಜ್ಜಾಭಾವವಲ್ಲಿಯೂ ಸಹ ಇರುತ್ತಾನೆ. ಸರಸಿಜನೇತ್ರಿಯರ ಕಟಾಕ್ಷ ಬಾಣಗಳು ಮೇಲೆಬಿದ್ದ ಅನಂತರ ಸನ್ಮಾರ್ಗಾಚರಣೆಯು ಇಂದ್ರಿಯ ನಿಗ್ರಹವು ಲಜ್ಜಾಭಾವವು ಸಹಾ ಹೋಗುತ್ತದೆ. ಆದ್ದರಿಂದ ಮನ್ಮಥನ ನ್ನು ಜಯಿಸುವದಕ್ಕೆ ಆಗುವದಿಲ್ಲವೆಂಬುವ ತಾತ್ಪರ್ಯವು. ||೭೪||

ಶ್ಲೋ||ಉನ್ಮತ್ತಪ್ರೇಮಸಂರಂಭಾದಾರಂಭಂತೇಯದಂಗನಾಃ||
ತತ್ರಪ್ರತ್ಯೂಹಮಾಧಾತುಂಬ್ರಹ್ಮಾಪಿಖಲುಕಾತರಃ||

ಟೀಕು | ಅಂಗನಾಃ- ಸ್ತ್ರೀಯರುಗಳು, ಉನ್ಮತ್ತ ಸಂರಂಭಾತ್ಪ್ರೇ ಮ-ಸಂರಂಭಾತ್-ಉನ್ಮತ್ತ-ಅತ್ಯಧಿಕವಾದ, ಪ್ರೇಮ-ವಿಶ್ವಾಸದದೆಸೆಯಿಂದ

ಯತ್-ಯಾವ ಕಾರ್ಯವನ್ನು, ಆರಂಭತೇ-ಪ್ರಾರಂಭಿಸುತ್ತಾರೋ, ತತ್ರ-ಆಕಾರ್ಯದಲ್ಲಿ, ಅಂತರಾಯಂ-ವಿಘ್ನವನ್ನು, ವಿಧಾತುಂ- ಮಾಡುವದಕ್ಕೋಸ್ಕರ, ಬ್ರಹ್ಮಾಪಿ-ಬ್ರಹ್ಮದೇವರು ಕೂಡ, ಕಾತರಃ- ಭಯಪಡುವನಷ್ಟೆ. ಅಂದರೆ ವಿಘ್ನಮಾಡುವದಕ್ಕೆ ಸಮರ್ಥನಾಗುವದಿಲ್ಲ ||೭೫||

ತಾತ್ಪರ್ಯ—ಈ ಶ್ಲೋಕದಲ್ಲಿ ಸ್ತ್ರೀಯರುಗಳ ಸಾಮರ್ಥ್ಯಕ್ಕೆ ಪ್ರತಿಯಾಗಿ ಮಾಡುವದಕ್ಕೆ ಆಗುವದಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ:—ಸ್ತ್ರೀಯರು ಪ್ರೇಮಾತಿಶಯದಿಂದ ಯಾವಕಾರ್ಯವನ್ನಾದರೂ ಮಾಡುವದಕ್ಕೆ ಯತ್ನಿಸುತ್ತಾರೋ ಅಂಥಾ ಕೆಲಸ ವಿಷಯದಲ್ಲಿ ವಿಘ್ನವನ್ನುಂಟು ಮಾಡುವದಕ್ಕೆ ಬ್ರಹ್ಮನಿಂದಲೂ ಆಗುವದಿಲ್ಲವೆಂದು ತಾತ್ಪರ್ಯವು. ಅನುಷ್ಟುಪ್ ವೃತ್ತಂ. ||೭೫||

ಶ್ಲೋ|| ತಾವನ್ಮಹತ್ತ್ವಂಪಾಂಡಿತ್ಯಂಕುಲೀನತ್ವಂವಿವೇಕಿತಾ ||
ಯಾವಜ್ವಲತಿನಾಂಗೇಷುಹಂತಪಂಚೇಷು ಪಾವಕಃ||

ಟೀಕಾ|| ಮಹತ್ವಂ- ಮಹಾನುಭಾವತ್ವವು, ಪಾಂಡಿತ್ಯಂ- ಪಂಡಿತತ್ವವು, ಕುಲೀನತ್ವಂ- ಮಹಾಕುಲ ಪ್ರಸೂತತ್ವವೂ, ವಿವೇಕಿತಾ-ಕರ್ತವ್ಯಾಕರ್ತವ್ಯವಿಚಾರತ್ವವು, ಯಾವತ್-ಎಷ್ಟರಪರ್ಯಂತವು, ಹತಃ ನೀಚನಾದ, (ಅಥವ ನಿಕೃಷ್ಟನಾದ) ಪಂಚೇಷುಪಾವಕಃ-ಪಂಚೇಷು- ಮನ್ಮಥನೆಂಬ, ಪಾವಕಃ ಅಗ್ನಿಯು, ಅಂಗೇಷು- ಅವಯವಗಳಲ್ಲಿ ಪ್ರಜ್ವಲತಿ- ಆವಿರ್ಭವಿಸುವದಿಲ್ಲವೋ, ಅಥವಾ ಸಂತಾಪವನ್ನುಂಟುಮಾಡುವದಿಲ್ಲವೋ, ತಾವತ್-ಅಷ್ಟು ಪರ್ಯಂತರವೂ ||೭೬||

ತಾತ್ಪರ್ಯ—ಮನುಷ್ಯನಿಗೆ ಪ್ರಜ್ಞಾ ವಿವೇಕ ವಿಚಾರ ಪರತ್ವ ಮಹಾ ಕುಲೀನತ್ವಾದಿ ಸುಗುಣಗಳೆಲ್ಲವು ಪಂಚಬಾಣನು ಶರೀರದ ಅಂಗಗಳಲ್ಲಿ ಪ್ರವೇಶಿಸಿ ಯಾವವರೆಗೆ ಪ್ರಜ್ವಲಿಸುವದಿಲ್ಲವೋ ಅಲ್ಲಿವರೆಗೂ ಮೇಲೆ ಹೇಳಿದ ಎಲ್ಲಾ ಗುಣಗಳು ಇರುತ್ತವೆ. ಮನ್ಮಥನಿಂದ ಸಂಪೀಡಿತನಾದ ನಂತರ ಮಹಾಕುಲೀನತ್ವಾದಿ ಗುಣಗಳು ಒಂದೂ ಇರುವದಿಲ್ಲ. ಆದ್ದರಿಂದ ಕಂದರ್ಪನನ್ನು ಯಾರೂ ಜಯಿಸುವದಕ್ಕೆ ಆಗುವದಿಲ್ಲವೆಂದು ತಾತ್ಪರ್ಯವು. ಪಾವಕ ಎಂಬುವದರಿಂದ ಏಕದೇಶ ರೂಪಕಾಲಂಕಾರಃ ಅನುಷ್ಟುಪ್ ವೃತ್ತಂ

ಶ್ಲೋ|| ಶಾಸ್ತ್ರಜ್ಞೋಪಿಪ್ರಗುಣಿತನಯೋಽತ್ಯಂತಬೋಧೋ
ಧೋಽಪಿಬಾಢಂಸಂಸಾರೇಸ್ಮಿನ್ಭವತಿವಿರಳೋಭಾಜನಂ

ಸದ್ಗತೀನಾಂ || ಯೇನೈತಸ್ಮಿನ್ನಿರಯನಗರದ್ವಾರ
ಮುದ್ಘಾಟಯಂತೀ ವಾಮಾಕ್ಷೀಣಾಂ ಭವತಿಕುಟಿಲ
ಭ್ರೂಲತಾಕುಂಚಿಕೇವ ||೨೨||

ಟೀಕು|| ಶಾಸ್ತ್ರಜ್ಞೋಪಿ-ಸಕಲಶಾಸ್ತ್ರರಹಸ್ಯವನ್ನು ತಿಳಿದವನಾದಾಗ್ಯೂ, ಪ್ರಗುಣಿತನಯೋಪಿ-ಪ್ರಗುಣಿತ- ಚೆನ್ನಾಗಿ ಆವೃತ್ತಿಯನ್ನು ಮಾಡಲ್ಪಟ್ಟ, ನಯೋಪಿ- ನೀತಿಶಾಸ್ತ್ರವುಳ್ಳವನಾದಾಗ್ಯೂ, ಬಾಢಂ- ಅತ್ಯಂತವಾಗಿ, ಆತ್ತ ಬೋಧೋಪಿ ಆತ್ತ- ಸ್ವೀಕರಿಸಲ್ಪಟ್ಟ ಬೋಧೋಪಿ ಜ್ಞಾನವುಳ್ಳವನಾದಾಗ್ಯೂಕೂಡ, ಅಸ್ಮಿನ್-ಈ, ಸಂಸಾರೇ-ಸಂಸಾರದಲ್ಲಿ, ಸದ್ಗತೀನಾಂ ಒಳ್ಳೇಗತಿಗೆ ಭಾಜನಂ ಪಾತ್ರನಾದ ಮನುಷ್ಯನು, ವಿರಳಃ- ಹುಡುಕುವದಕ್ಕೆ ಯೋಗ್ಯನಾಗಿ, ಭವತಿ- ಇದ್ದಾನೆ, ಯೇನ - ಯಾವಕಾರಣದೆಸೆಯಿಂದ, ಏತಸ್ಮಿನ್ ಸಂಸಾರೇ- ಈಸಂಸಾರದಲ್ಲಿ, ವಾಮಾಕ್ಷೀಣಾಂ- ಮನೋಹರನೇತ್ರೆಯರ, ಕುಟಿಲಭ್ರೂಲತಾ- ಕುಟಿಲ, ವಕ್ರವಾದ, ಭ್ರೂಲತಾ- ಲತಾಸದೃಶವಾದ ಹುಬ್ಬು, ಕುಂಚಿಕೇವ-ಕೂಚಕೋಲಿನೋಪಾದಿಯಲ್ಲಿ, ನಿರಯನಗರದ್ವಾರಂ ನಿರಯನಗರ- ಯಮಪುರದ, ದ್ವಾರಂ- ಬಾಗಲನ್ನು, ಉದ್ಘಾಟಯಂತೀ - ತೆಗೆಯುವಂಥಾದ್ದು, ಭವತಿ-ಆಗುತ್ತದೆ ||೨೨||

ತಾತ್ಪರ್ಯ—ಈ ಶ್ಲೋಕದಲ್ಲಿ ಸಂಸಾರಿಗೆ ಸದ್ಗತಿಪ್ರಾಪ್ತಿಯುಂಟಾಗುವದು ದುರ್ಲಭವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ—ಮನುಷ್ಯನಿಗೆ ವಿದ್ಯಾಪಾಂಡಿತ್ಯವು ನೀತಿಶಾಸ್ತ್ರಪ್ರವೀಣತೆಯು ಶಾಸ್ತ್ರದಲ್ಲಿ ವಿಚಾರಜ್ಞಾನವು ಈ ಮುಂತಾದ ಸುಗುಣಗಳುಂಟಾಗಿಯೂ ಸಂಸಾರದಲ್ಲಿ ಇರುವ ಮನುಷ್ಯರಲ್ಲಿ ಮೋಕ್ಷ ಭಾಜನನಾದವನು ಪ್ರಾಯಶಃ ಅಪರೂಪನಾಗಿದ್ದಾನೆ. ಯಾವ ಕಾರಣದಿಂದ ಸ್ತ್ರೀಯರುಗಳು ಭ್ರೂಭಂಗಪೂರ್ವಕವಾಗಿ ಅಂದರೆ ಕಣ್ಣುಹುಬ್ಬು ಗಂಟುಹಾಕಿಕೊಂಡು ವಕ್ರದೃಷ್ಟಿಯಿಂದ ನೋಡುತ್ತಾರೊ ಆನೋಟವೆ ಅನೇಕ ನರಕಗಳುಳ್ಳ ಯಮಪುರದ ಬಾಗಲು ತೆಗೆಯುವ ಕೂಚಕೋಲಾಗಿದೆ. ಅಂದರೆ, ಸ್ತ್ರೀಯರುಗಳ ಮೋಹಕ್ಕೊಳಪಟ್ಟವರಾಗಿ ಯಮಪುರದಲ್ಲಿ ನರಕಯಾತನೆಯನ್ನು ಹೊಂದುವರು ಆದ್ದರಿಂದ ಸಂಸಾರಿಗಳಲ್ಲಿ ಒಳ್ಳೆಯಮಾರ್ಗದಲ್ಲಿದ್ದು ಮೋಕ್ಷವನ್ನು ಹೊಂದುವದು ದುರ್ಲಭವೆಂದು ಭಾವವು. ಉಪಮಾಲಂಕಾರಃ ಮಂದಾಕ್ರಾಂತಾ ವೃತ್ತಂ. ||೨೨||

ಶ್ಲೋ॥ ಕೃಶಃಕಾಣಃಖಂಜಃಶ್ರವಣರಹಿತಃ ಪುಚ್ಛವಿಕಲೋ
ವ್ರಣೀಪೂಯಕ್ಲಿನ್ನಃಕ್ರಿಮಿಕುಲಶತೈರಾವೃತತನುಃ ॥
ಕ್ಷುಧಾಕ್ಷಾಮೋಜೀರ್ಣಃಪಿಠರಕಕಪಾಲಾರ್ಪಿತಗಳಃ
ಶುನೀಮನ್ವೇತಿಶ್ವಾಹತಮಪಿಚಹಂತ್ಯೇವಮದನಃ ॥೨೮

ಟೀಕಾ॥ ಕೃಶಃ ಆಹಾರವಿಲ್ಲದೆ ಕಾರ್ಶ್ಯವನ್ನು ಹೊಂದಿರುವ, ಕಾಣಃ-ಕುರಡಾಗಿರುವ, ಅಥವ-ಒಂದುಕಣ್ಣುಇರುವ, ಖಂಜಃ-ಕುಂಟನಾಗಿರುವ ಶ್ರವಣರಹಿತಃ- ಕಿವಿಗಳು ಕೊಯಿದು ಇರುವ, ಪುಚ್ಛವಿಕಲಃ- ಬಾಲವನ್ನು ಕೊಯಿದು ಇರುವ, ವ್ರಣೀ ಘಾಯಗಳುಳ್ಳ, ಪೂಯಕ್ಲಿನ್ನಃ-ಪೂಯ-ಕೀವು ಗಳಿಂದ, ಕ್ಲಿನ್ನಃ-ವ್ಯಾಪ್ತವಾದ, ಕ್ರಿಮಿಕುಲಶತೈಃ-ಕ್ರಿಮಿಕುಲ ಹುಳುಗಳ ಗುಂಪುಗಳ ಶತೈಃ-ನೂರುಗಳಿಂದ, ಆವೃತತನುಃ-ಆವೃತ - ಕೂಡಿಕೊಂಡಿರುವ, ತನುಃ ಶರೀರವುಳ್ಳ, ಕ್ಷುಧಾ-ಹಸಿವಿನಿಂದ, ಕ್ಷಾಮಃ-ಕೃಶವಾದ, ಜೀರ್ಣಃ-ಜರಾವಸ್ಥೆಯಿಂದ ಶಿಥಿಲವಾದ ಪಿಠರಕಕಪಾಲಾರ್ಪಿತಗಳಃ- ಪಿಠರಕ- ಘಟ ಮುಖವೆಂಬುವ, ಕಪಾಲ-ಗಡಿಗೆ ಹೋಳಿನಲ್ಲಿ, ಅರ್ಪಿತ- ಇಡಲ್ಪಟ್ಟ, ಗಳಃ-ಕುತ್ತಿಗೆಯುಳ್ಳ, ಶ್ವಾ-ನಾಯಿಯು, ಶುನೀಂ- ಹೆಣ್ಣುನಾಯಿಯನ್ನು ನೋಡಿ, ಅನ್ವೇತಿ- ಮಿಥುನಕರ್ಮಕೋಸ್ಕರ, ಅನುಸರಿಸಿಹೋಗುತ್ತೆ, ತಥಾಹಿ-ಅದು ಯುಕ್ತವೇಸರಿ, ಮದನಃ-ಮನ್ಮಥನು, ಹತಮಪಿಚ- ಸತ್ತುಹೋಗುವಂಥಾ ವರನ್ನಾದರೂ ಕೂಡ, ಹಂತ್ಯೇವ-ಹೊಡೆದೇ ಹೊಡಿಯುತ್ತಾನೆ ॥೭೮॥

ತಾತ್ಪರ್ಯ.—ಎರಡು ಶ್ಲೋಕಗಳಿಂದ ಮನ್ಮಥನ ವಿಚಿತ್ರ ಚರಿತ್ರೆಯನ್ನು ಹೇಳುತ್ತಾನೆ. ಅದು ಹೇಗೆಂದರೆ:—ಕಿವಿಗಳನ್ನು ಕತ್ತರಿಸಿಯೂ ಬಾಲವನ್ನು ಕುಯಿದು ಶರೀರವೆಲ್ಲಾ ಘಾಯವಡೆದು ಅದರಿಂದ ಕೀವುರಕ್ತ ಸುರಿಸುತ್ತಾ ಘಾಯದಲ್ಲಿ ಹುಳಗಳು ನೂರುಪ್ರಕಾರ ಗುಂಗುಂಪಾಗಿ ಈಚೆಗೆ ಬರುತ್ತಾ ಆಹಾರವಿಲ್ಲದೆ ಕೃಶವಾಗಿ ಮುದುಕತನದಿಂದ ಅಂಗಗಳೆಲ್ಲವು ಶಿಥಿಲವಾಗಿ ಗಡಿಗೆ ಕಂಠದಲ್ಲಿ ಮುಖವಿಟ್ಟುಕೊಂಡು ಇರುವ ಅಂದರೆ ಗಡಿಗೆಯಲ್ಲಿ ಮೂತಿಇಟ್ಟು ಪದಾರ್ಥ ತಿನ್ನುವದಕ್ಕೆ ಹೋದಕಾಲದಲ್ಲಿ ಗಡಿಗೆ ಒಡೆದು ಅದರ ಕಂಠಮಾತ್ರ ಕುತ್ತಿಗೆಯಲ್ಲಿ ಸೇರಿ ಈಚೆಗೆ ಬಾರದೆ ತಗಲಿಕೊಂಡು ಇರುವದಾದ ಈ ರೀತಿಯಾದ ದುರವಸ್ಥೆಯನ್ನು ಹೊಂದಿರುವ ನಾಯಿಯು ಹೆಣ್ಣುನಾಯಿಯನ್ನು ನೋಡಿದರೆ ಮಿಥುನ ಕರ್ಮಮಾಡುವದಕ್ಕೆ ಅನುಸರಿಸಿಕೊಂಡು ಹೋಗುತ್ತದೆ. ಅದು ಯುಕ್ತವೇಸರಿ ಮನ್ಮಥನು ಸ

ತ್ತಾಹೋಗುತ್ತಾ ಇರುವನನ್ನಾದರೂ ತನ್ನ ಬಾಣದಿಂದ ಹೊಡೆದು ಅರೆ
ಯುತ್ತಾನೆ. ಆದುದರಿಂದ ಅಂಥಾ ಕಾಲದಲ್ಲು ಕೂಡಾ ಕಾಮನಾಶನವುಂ
ಟಾಗುವದೆಂದು ತಾತ್ಪರ್ಯವು. ಅರ್ಥಾಂತರ ನ್ಯಾಸಾಲಂಕಾರಃ ಶಿಖರಿಣೀ
ವೃತ್ತಂ. ||೭೮||

ಶ್ಲೋ|| ಸ್ತ್ರೀಮುದ್ರಾಂ ಕುಸುಮಾಯುಧಸ್ಯ ಜಯಿನೀಂ
ಸರ್ವಾರ್ಥಸಂಪತ್ಕರೀಂ ಯೇ ಮೂಢಾಃ ಪ್ರವಿಹಾಯ
ಯಾಂತಿ ಕುಧಿಯೋ ಮಿಥ್ಯಾಫಲಾನ್ವೇಷಿಣಃ || ತೇ ತೇ
ನೈವ ನಿಹತ್ಯ ನಿರ್ದಯತರಂ ನಗ್ನೀಕೃತಾ ಮುಂಡಿ
ತಾಃ ಕೇಚಿತ್ಪಂಚಶಿಖೀಕೃತಾಶ್ಚ ಜಟಿಲಾಃ ಕಾಪಾಲಿ
ಕಾಶ್ಚ ಪರೇ ||೭೯||

ಟೀಕಾ || ಸರ್ವಾರ್ಥಸಂಪತ್ಕರೀಂ ಸರ್ವಾರ್ಥ - ಸಮಸ್ತ ಪ್ರಯೋಜನ
ಗಳ, ಸಂಪತ್- ಐಶ್ವರ್ಯವನ್ನು, ಕರೀಂ- ಉಂಟುಮಾಡುತ್ತಿರುವ, ಕುಸುಮಾ
ಯುಧಸ್ಯ- ಮನ್ಮಥನಿಗೆ, ಜಯಿನೀಂ- ಜಯಾವಹರವಾದ, ಸ್ತ್ರೀಮುದ್ರಾಂ-
ಸ್ತ್ರೀಯೆಂಬುವ ಮುದ್ರೆಯನ್ನು, ಅಥವಾ ಸ್ತ್ರೀರೂಪಚಿಹ್ನೆಯನ್ನು, ವಿಹಾ
ಯ- ಬಿಟ್ಟು, ಕುಧಿಯಃ ದುರ್ಬುದ್ಧಿವುಳ್ಳಂಥಾವರಾದ ಕಾರಣವೇ- ಮೂಢಾಃ-
ಕರ್ತವ್ಯಾಕರ್ತವ್ಯ ವಿಚಾರಶೂನ್ಯರಾದ- ಯೇ- ಯಾವಜನಗಳು, ಮಿಥ್ಯಾಫ
ಲಾನ್ವೇಷಿಣಃ-ಸಂತಃ-ಮಿಥ್ಯಾಫಲ ಕಣ್ಣಿಗೆ ಕಾಣದೆ ಇರುವ ಮೋಕ್ಷಾದಿ ಫಲ
ವನ್ನು, ಅನ್ವೇಷಿಣಃ- ಹುಡುಕುತ್ತಿರುವವರಾಗಿ, ಯಾಂತಿ - ಹೋಗುತ್ತಾರೋ,
ತೇ-ಅವರುಗಳು, ತೇನೈವ- ಆ ಮನ್ಮಥನಿಂದಲೆ, ನಿರ್ದಯತರಂ ಅತ್ಯಂತ
ನಿರ್ದಯವಾಗೋಣ ಹೇಗೋ ಹಾಗೆ, ನಿಹತ್ಯ-ಹೊಡೆದು, ನೀಚರನ್ನುಮಾಡಿ,
ತೇ-ಆಜನಗಳು, ಕೇಚಿತ್ ಕೆಲವರು, ನಗ್ನೀಕೃತಾಃ ದಿಗಂಬರರಾಗಿಯೂ,
ಕೇಚಿತ್ ಕೆಲವರು, ಮುಂಡಿತಾಃ. ವಿಶಿಷ್ಟರಾಗಿಯು, ಕೇಚಿತ್- ಕೆಲವರು, ಜಟಿ
ಲಾಃ ಜಟಾಭಾರಗಳುಳ್ಳವರಾಗಿಯು, ಪಂಚಶಿಖೀಕೃತಾಃ ಐದುಕಡೆ ಜುಟ್ಟು
ಉಳ್ಳವರಾಗಿಯು ಜುಟ್ಟನತಿರಿಗಳುಳ್ಳವರಾಗಿಯೂ, ಅಥವಾ ಕೇಚಿತ್ತು- ಕೆಲ
ವರು, ಕಾಪಾಲಿಕಾಃ- ಕಪಾಲಿ ಭಿಕ್ಷೆವುಳ್ಳವರಾಗಿಯೂ, ಕೃತಾಃ- ಮಾಡಲ್ಪ
ಡುತ್ತಿದ್ದಾರೆ. ||೭೯||

ತಾತ್ಪರ್ಯ— ಈ ಶ್ಲೋಕದಲ್ಲಿ ಸನ್ಯಾಸ ಅವಧೂತ ಕಾಪಾಲಿಕ
ಭೈರವ ಪಂಚಶಿಖಿಗಳ ಮತಗಳನ್ನು ನೋಡಿ ಉತ್ಪ್ರೇಕ್ಷೆಮಾಡಿ ಇದ್ದಾನೆ.

ಅದು ಹೇಗೆಂದರೆ ಮನ್ಮಥನಿಗೆ ಜಯಶೀಲಗಳಾಗಿಯೂ ಸರ್ವಾರ್ಥ ಸಮ್ಮ
ದ್ಧಿಯನ್ನುಂಟು ಮಾಡುತ್ತಲಿರುವ ಸ್ತ್ರೀಮುದ್ರೆಯನ್ನು ಯಾರು ಬಿಟ್ಟು
ಹೋಗುತ್ತಾರೋ ಅಂಥಾ ಜನಗಳನ್ನು ಅಂದರೆ ಸ್ತ್ರೀ ರೂಪಮುದ್ರೆಯಲ್ಲಿ
ನಿರಾಸವನ್ನು ಮಾಡಿದ ಜನಗಳಲ್ಲಿ ಕೆಲವರನ್ನು ಅವರ ಐಶ್ವರ್ಯವನ್ನೆಲ್ಲಾ
ತೆಗೆದುಕೊಂಡು ಬಡವರನ್ನಾಗಿ ಹೊದಿಯುವದಕ್ಕೆ ಬಟ್ಟೆ ಸಹ ಯಿಲ್ಲದೆ ಓ
ಡಿಸಿಬಿಟ್ಟನು ಕೆಲವರನ್ನು ಸನ್ಯಾಶಿಗಳನ್ನಾಗಿ ಮಾಡಿದನು. ಕೆಲವರನ್ನು
ತಲೆಯಮೇಲೆ ಐದುಕಡೆ ಶಿಖೆಗಳನ್ನು ಬಿಡಿಸಿದನು ಕೆಲವರನ್ನು ಜುಟ್ಟುಗಳ
ತಿರಿಗಳನ್ನು ಮಾಡಿಕೊಂಡು ತಿರುಗುವಂತೆ ಮಾಡಿದನು. ಕೆಲವರನ್ನು ಹಿ
ಡಿದುಕೊಂಡು ಶೀಮೆಯಮೇಲೆ ಭಿಕ್ಷಾರ್ಥಿಗಳಾಗಿ ತಿರುಗುವಂತೆ ಮಾಡಿದ
ನು. ಅಂದರೆ ಸ್ತ್ರೀ ಭೋಗವನ್ನು ಬಿಟ್ಟು ಪ ರಮಾರ್ಥಿಕನನ್ನು ಅನುಸ
ರಿಸಿದ ಜನಗಳನ್ನು ರಾಜಾಜ್ಞೆಗೆ ತಪ್ಪಿದ ಜನಗಳನ್ನು ರಾಜದಂಡನೆಯೋ
ಪಾಟಿಯಲ್ಲಿ ಮನ್ಮಥರಾಜನು ತನ್ನ ಆಜ್ಞಾಮೀರಿಹೋದ ಜನಗಳನ್ನು ಈ
ರೀತಿ ಮಾಡಿದ್ದಾನೊ ಯೆಂದುತ್ಪ್ರೇಕ್ಷೆ ಮಾಡಿದ್ದಾನೆ. ||೭೯||

ಶ್ಲೋ|| ವಿಶ್ವಾಮಿತ್ರಪರಾಶರಪ್ರಭೃತಯೋವಾತಾಂಬುಪ
ರ್ಣಾಶನಾಸ್ತೇಪಿಸ್ತ್ರೀಮುಖಪಂಕಜಂಸುಲಲಿತಂದೃ
ಷ್ಟ್ವೈವಮೋಹಂಗತಾಃ || ಶಾಲನ್ನಂಸಘೃತಂಪ
ಯೋದಧಿಯುತಂಯೇಭುಂಜತೇಮಾನವಾಸ್ತೇಷಾ
ಮಿಂದ್ರಿಯನಿಗ್ರಹೋಯದಿಭವೇದ್ವಿಂಧ್ಯಃಪ್ಲವೇ
ತ್ಸಾಗರೇ ||೮೦||

ಟೀಕು|| ವಾತಾಂಬುಪರ್ಣಾಶನಾಃ ವಾತ-ಗಾಳಿಯು, ಅಂಬು- ಉದ
ಕವು, ಪರ್ಣ- ಎಲೆಗಳು, ಅಶನಾಃ-ಭೋಜನಗಳಾಗಿವುಳ್ಳಂಥ, ವಿಶ್ವಾಮಿ
ತ್ರಪರಾಶರ ಪ್ರಭೃತಯಃ-ವಿಶ್ವಾಮಿತ್ರ-ವಿಶ್ವಾಮಿತ್ರರು, ಪರಾಶರ- ಪರಾ
ಶರ ಋಷಿಗಳು, ಪ್ರಭೃತಯಃ-ಇವರೇ ಮೊದಲಾದ, ತೇಪಿ ಆ ಪ್ರಸಿದ್ಧ
ರಾದ ಮಹರ್ಷಿಗಳೂ ಕೂಡ, ಸುಲಲಿತಂ-ಸುಂದರವಾದ, ಸ್ತ್ರೀಮುಖಪಂಕ
ಜಂ-ಸ್ತ್ರೀ ಸ್ತ್ರೀಯರುಗಳ, ಮುಖಪಂಕಜಂ-ಕಮಲಕ್ಕೆ ಸಮಾನವಾದ ಮು
ಖವನ್ನು, ದೃಷ್ಟ್ವೇವ- ನೋಡಿಯೇ, ಮೋಹಂಗತಾಃ - ಮೋಹಂ ಭ್ರಾಂತಿ
ಯನ್ನು, ಗತಾಃ - ಹೊಂದಿನಂಥಾವರಾದರು, (ತದಾಯತ್ತಚಿತ್ತರಾದರು)

ಸಪ್ಲುತಂ ಆಜ್ಯದಿಂದಕೂಡಿ ಇರುವ, ಪಯೋದಧಿಯುತಂ-ಪಯಃ-ಹಾಲಿನಿಂದಲೂ ದಧಿ ಮೊಸರಿನಿಂದಲೂ, ಯುತಂ ಕೂಡಿಕೊಂಡು ಇರುವ, ಶಾಲ್ಯನ್ನಂ ಶಾಲ್ಯನ್ನವನ್ನು, ಯೇಮಾನವಾಃ-ಯಾವ ಮನುಷ್ಯರಾದರೂ, ಭುಂಜತೇ-ಭೋಜನ ಮಾಡುತ್ತಾರೋ, ತೇಷಾಂ ಅವರುಗಳಿಗೆ, ಇಂದ್ರಿಯನಿಗ್ರಹಃ ಇಂದ್ರಿಯ, ಚಕ್ಷುರಾದಿ ಇಂದ್ರಿಯಗಳ, ನಿಗ್ರಹಃ-ನಿಯಮನವು, ಭವೇದ್ಯದಿ-ಆಗುವಂಥಾದಾದರೆ, ವಿಂಧ್ಯಃ ವಿಂಧ್ಯಪರ್ವತವು, ಸಾಗರೇ-ಸಮುದ್ರದಲ್ಲಿ, ಪ್ಲವೇತ್-ತೇಲುತ್ತಲಿತ್ತು. ॥೪೦॥

ತಾತ್ಪರ್ಯ—ಈ ಶ್ಲೋಕದಲ್ಲಿ ಮನ್ಮಥನನ್ನು ಜಯಿಸುವದಕ್ಕೆ ಆಗುವದಿಲ್ಲವೆಂಬುವದನ್ನು ಹೇಳುತ್ತಾನೆ. ನಿಸ್ಸಾರವಾದ, ಗಾಳಿ, ನೀರು, ಎಲೆ ಇವುಗಳನ್ನು ತಿಂದು ತಪಸ್ಸುಮಾಡಿಕೊಂಡು ಇರುವ ವಿಶ್ವಾಮಿತ್ರಾದಿ ಮಹಾಋಷಿಗಳು ಸ್ತ್ರೀಯರ ಮುಖವನ್ನು ನೋಡಿದ ಮಾತ್ರದಿಂದಲೇ ಭ್ರಮಿಸಿ ಮೋಹಿಸುವಂಥಾವರಾದರು. ಹೀಗಿರುವಲ್ಲಿ ಪಯೋದಧಿಘೃತ ಸಹಿತವಾದ ಶಾಲ್ಯನ್ನವನ್ನು ಭೋಜನಮಾಡುವ ಮನುಷ್ಯರು ಇಂದ್ರಿಯ ನಿಗ್ರಹವನ್ನು ಮಾಡಿದರೆ ವಿಂಧ್ಯಪರ್ವತವು ಸಮುದ್ರದಲ್ಲಿ ತೇಲಾಡೀತು. ಪರ್ವತಾನಾಂ ಸಮುದ್ರಲಂಘನಂ ಸಮುದ್ರಪ್ಲವನಂಚ ಅಸಂಭಾವ್ಯತ್ವಂ ವ್ಯಂಥೋಕ್ತೀರತಿಶಯೋಕ್ತಿ ಭೇದ. ಶಾರ್ದೂಲ ವಿಕ್ರೀಡಿತವೃತ್ತಂ,

ಇತಿ ಶ್ರೀ ಭರ್ತೃಹರಿ ಸುಭಾಷಿತೇ ಶೃಂಗಾರ ಶತಕೇ

ಸುವಿರಕ್ತ ದುರ್ವಿರಕ್ತ ಪದ್ಧತಿಃ

ಸಮಾಪ್ತಾ.

---

ಶೃಂಗಾರ ಶತಕೇ ಋತುವರ್ಣನ ಪದ್ಧತಿಃ

ಪ್ರಾರಂಭಃ ಮಂಗಳಮಸ್ತು.

ಶ್ಲೋ॥ ಪರಿಮಳಭೃತೋ ವಾತಾಶಾಖಾನವಾಂಕುರಕೋಟಯೋಮಧುರಮಧುರೋತ್ಕಂಠಾಭಾಜಃಪ್ರಿಯಾಃಪಿಕಪಕ್ಷಿಣಾಂ ॥ ವಿರಳವಿರಳಸ್ವೇದೋದ್ಗಾರಾವಧೂವದನೇಂದವಃಪ್ರಸರತಿಮಧೌಧಾತ್ರ್ಯಾಂಜಾತೋನಕಸ್ಯಗುಣೋದಯಃ ॥೪೧॥

ಟೀಕು ॥ ವಾತಾಃ-ಗಾಳಿಗಳೂ, ಪರಿಮಳಭೃತಃ-ವಿವಿಧಕುಸುಮಸಂಮರ್ದವಿಂದ ಪರಿಮಳ, ವಿಶಿಷ್ಟವಾಗಿ, ಜಾತಾಃ-ಹುಟ್ಟಿದಂಥವುಗಳಾದವು, ಶಾಖಾನವಾಂಕುರಕೋಟಯಃ ಶಾಖಾಃ-ರಸಾಲಾದಿ ಸ್ಕಂಧಗಳು, ನವಾಂಕುರ-ನವ-ನೂತನವಾದ, ಅಂಕುರ-ಸಿಹಿಮಾವಿನ ಚಿಗುರುಗಳ, ಕೋಟಯಃ-ಅಗ್ರಭಾಗಗಳುಳ್ಳದ್ದಾಗಿ, ಜಾತಾಃ-ಮಾಡಲ್ಪಟ್ಟವುಗಳು ಆದವು, ಪಿಕಪಕ್ಷಿಣಾಂ-ಕೋಕಿಲೆಗಳ, ಪ್ರಿಯಾಃ ಹೆಂಡತಿಯರು, ಮಧುರ ಮಧುರೋತ್ಕಂಠಾಭಾಜಃ-ಮಧುರ-ಮನೋಜ್ಞವಾದ, ಅಂದರೆ ಸಹಕಾರಾಂಕುರಸ್ವಾದಾನುಗುಣವಾದ, ಮಧುರ ಮನೋಹರವಾಗಿ ಕೂಗುವದರಲ್ಲಿ, ಉತ್ಕಂಠಾಭಾಜಃ-ಆಸಕ್ತಿವುಳ್ಳಂಥಾವುಗಳು, ಜಾತಾಃ ಆದವು, ವಿರಳವಿರಳಸ್ವೇದೋದ್ಗಾರಾಃ-ವಿರಳವಿರಳ - ಅತ್ಯಂತ ವಿರಾಳವಾಗಿ, ಸ್ವೇದ- ಘರ್ಮೋದಕದ ಅಥವ ಬೆವರ. ನೀರಿನ, ಉದ್ಗಾರಾಃ-ಬಿಂದುಗಳು. (ಅಥವಾ ಗುಳ್ಳೆಗಳುಳ್ಳ) ವಧೂವದನೇಂದವಃ ವಧೂ-ಸ್ತ್ರೀಯರುಗಳ, ವದನ-ಮುಖಗಳೆಂಬುವ, ಇಂದವಃ-ಚಂದ್ರಗಳುಳ್ಳದ್ದಾಗಿ, ಮಧೌ-ವಸಂತ ಋತುವಿನಲ್ಲಿ, ಪ್ರಸರತಿಸತಿ-ಬೀಸುತ್ತಿರಲಾಗಿ, ಧಾತ್ರ್ಯಾಂ-ಭೂಮಿಯಲ್ಲಿ, ಕಸ್ಯ-ಯಾವ ವಸ್ತುವಿಗೆ ತಾನೆ, ಗುಣೋದಯಃ-ಗುಣ-ಸುಗುಣಗಳ, ಉದಯಃ-ಆವಿರ್ಭಾವವು, ನಜಾತಃ-ಹುಟ್ಟವದಿಲ್ಲ, ॥೮೧॥

ತಾತ್ಪರ್ಯ—ವಸಂತ ರುತುವಿನಲ್ಲಿ ಬಾಲ ಸಹಕಾರಾಗದ ವೇಳೆ ಬರುವ ಗಾಳಿಯು ಸುವಾಸನೆಯಾಗಿಯೂ ಕೇವಲ ಹಿತಕರವಾಗಿಯೂ ಬೀಸುತ್ತದೆ. ಹೆಣ್ಣುಕೋಕಿಲೆಗಳು ಕಿವಿಗೆ ಇಂಪಾಗಿ ಸ್ವರಗೈಯುತ್ತವೆ, ಇದು ಯುಕ್ತವೆಂದು ಹೇಳಬೇಕು. ಅದು ಹೇಗೆಂದರೆ;—ವಸಂತಕಾಲದಲ್ಲಿ ಯಾರುತಾನೆ ಗುಣವುಳ್ಳವರಾಗುವುದಿಲ್ಲ ಎಲ್ಲರೂ ಗುಣವಂತರೆ ಆಗುವರೆಂದು ಸ್ತ್ರೀಪುರುಷರು ತಮ್ಮ ತಮ್ಮ ಈರ್ಷ್ಯಾಕೋಪಗಳನ್ನು ಬಿಟ್ಟು ಅನ್ಯೋನ್ಯವಾಗಿ ಸುಖಿಸಿಕೊಂಡು ಇರುತ್ತಾರೆ ಎಂದು ತಾತ್ಪರ್ಯವು. ॥೮೧॥

ಶ್ಲೋ॥ ಮಧುರಯಂಮಧುರೈರಪಿಕೋಕಿಲಾ ಕಲರವೈರ್ಮಲ
ಯಸ್ಯಚವಾಯುಭಿಃ । ವಿರಹಿಣಃಪ್ರಹಿಣಸ್ತಿಶರೀ
ರಿಣೋವಿಪದಿಹಂತ್ರಸುಧಾಪಿವಿಷಾಯತೇ ॥೮೨॥

ಟೀಕು॥ ಅಯಂ-ಈ ಪ್ರಸಕ್ತವಾದ, ಮಧುಃ-ವಸಂತಋತುವು, ಮಧುರೈರಪಿ-ಮನೋಹರಗಳಾದ, ಕೋಕಿಲಾಕಲರವೈಃ- ಕೋಕಿಲಾ ಕೋಕಿಲೆ

ಗಳ, ಕಲರವೈಃ ಅವ್ಯಕ್ತ ಮಧುರವಾದ ಧ್ವನಿಗಳಿಂದ, ಮಲಯಸ್ಯ - ಮಲಯಪರ್ವತದ, ವಾಯುಭಿಶ್ಚ - ಗಾಳಿಗಳಿಂದಲೂ, ವಿರಹಿಣಃ - ವಿಯೋಗವನ್ನು ಹೊಂದಿರುವ, ಶರೀರಿಣಾಂ - ಜನಗಳನ್ನು ಪ್ರಹಣಸ್ತಿ - ಪ್ರಾಣವನ್ನು ತೆಗೆಯುತ್ತದೆ, ತಥಾಹಿ - ಅದು ಯುಕ್ತವೇ ಸರಿ, ಆಪದಿ - ಕಷ್ಟಕಾಲದಲ್ಲಿ ಸುಧಾಪಿ - ಅಮೃತವು ಕೂಡ, ವಿಷಾಯತೇ - ವಿಷದೋಪಾದಿಯಲ್ಲಿ ಆಚರಿಸುತ್ತದೆ. ||೮೨||

ತಾತ್ಪರ್ಯ— ಈ ಶ್ಲೋಕದಲ್ಲಿ ವಸಂತರುತುವನ್ನು ವರ್ಣಿಸುತ್ತಾನೆ. ಅದು ಹೇಗೆಂದರೆ;— ಈ ವಸಂತರುತುವು ಮನೋಹರವಾದ ಕೋಕಿಲಾಲಾಪಗಳಿಂದಲೂ ಮಲಯ ಪರ್ವತದಿಂದ ಬಂದ ಮಂದಮಾರುತದಿಂದಲೂ ಅಂದರೆ ತಂಗಾಳಿಯಿಂದಲೂ, ವಿಯೋಗವನ್ನು ಹೊಂದಿದ ಸ್ತ್ರೀಪುರುಷ ಜನರನ್ನು ಕೊಲ್ಲುವಂಥಾದ್ದಾಗುತ್ತದೆ ಅದು ಯುಕ್ತವೇ ಸರಿ ಮನುಷ್ಯರಿಗೆ ಆಪತ್ಕಾಲದಲ್ಲಿ ಅಮೃತವೂ ಕೂಡ ವಿಷದೋಪಾದಿಯಲ್ಲಿ ಆಗುತ್ತದೆ. ಆದ್ದರಿಂದ ಸುಖಾನುಭವ ಮಾಡುವವರಿಗೆ ಮಂದಮಾರುತಾದಿಗಳು ಸುಖಕರವಾಗಿರುತ್ತ ವಿರಹಯಾತನೆಯನ್ನು ಅನುಭವಿಸುವವರಿಗೆ ಕಷ್ಟತರವಾಗುತ್ತೆಂದು ತಾತ್ಪರ್ಯವು ಸಾಮಾನ್ಯೇನ ವಿಶೇಷಣ ಸಮರ್ಥನ ರೂಪೋಽರ್ಥಾಂತರನ್ಯಾಸಾಲಂಕಾರಃ ದೃತವಿಲಂಬಿತ ವೃತ್ತಂ. ||೮೨||

ಶ್ಲೋ|| ಆವಾಸಃಕಿಲಿಕಿಂಚಿತಸ್ಯ ದಯಿತಾಃಪಾರ್ಶ್ವೇವಿಲಾಸಾಲಸಾಃ ಕರ್ಣೇಕೋಕಿಲಕಾಮಿನೀಕಲರವಃ ಸ್ಮೇರೋಲತಾಮಂಟಪಃ || ಗೋಷ್ಠೀಸತ್ಕವಿಭಿಸ್ಸಮಂ ಕತಿಪಯೈರ್ಮುಗ್ಧಾಸ್ಸಿತಾಂಶೋಃಕರಾಃ ಕೇಷಾಂಚಿತ್ಸುಖಯಂತಿಚಾತ್ರಹೃದಯಂ ಚೈತ್ರೇವಿಚಿತ್ರಾಸ್ಸ್ರಜಃ ||

ಟೀಕು || ಪಾರ್ಶ್ವೇ - ಸಮೀಪದಲ್ಲಿ, ಕಿಲಿಕಿಂಚಿತಸ್ಯ - ರೋಷಾಶ್ರುಭೀತ್ಯಾದಿ ಸೂಚಕವಾದ ಶೃಂಗಾರಚೇಷ್ಟೆಯು, ಆವಾಸಃ - ಇರುವಿಕೆಯು, ವಿಲಾಸಾಲಸಾಃ, ವಿಲಾಸ - ಶೃಂಗಾರಹಾವಭಾವವಿಲಾಸಗಳಿಂದ, ಅಲಸಾಃ - ಮತ್ತರಾದ, ದಯಿತಾಃ - ಪ್ರಿಯತಮರಾದ ಸುಂದರ - ಸ್ತ್ರೀಯರುಗಳು, ಕರ್ಣೇ - ಕಿವಿಯಲ್ಲಿ ಕೋಕಿಲಕಾಮಿನೀ ಕಲರವಃ - ಕೋಕಿಲಕಾಮಿನೀ ಹೆಣ್ಣುಕೋಗಿಲೆಗಳ, ಕಲರವಃ - ಕಲ - ಅವ್ಯಕ್ತ ಮಧುರವಾದ, ರವಃ - ಶಬ್ದವು, ಸ್ಮೇರಃ - ಭಾವಿಸುವ ವಿಲಾಸಾರ್ಥವಾದ ಮಂದಹಾಸವು, ಲತಾಮಂಟಪಃ - ಬಳ್ಳಿಗಳ ಪೊ

ಪಯುಃ, ಸತ್ಕವಿಭಿಃ ಸಮಂ-ಸರಸ ಕವೀಶ್ವರರೊಡನೆ, ಗೋಷ್ಠೀ-ಸಹವಾಸ
ವು, ಕತಿಪಯೈಃ-ಕೆಲವುಗಳಾದ, ಮುಗ್ಧಾಃ-ಮನೋಹರಗಳಾದ, ಸಿತಾಂ
ಶೋಃ-ಚಂದ್ರನ, ಕರಾಃ-ಕಿರಣಗಳು, ವಿಚಿತ್ರಸ್ರಜಃ-ವಿಚಿತ್ರ-ನಾನಾವಿಧಗ
ಳಾದ, ಸ್ರಜಃ-ಪುಷ್ಪಮಾಲಿಕೆಗಳು ಅತ್ರ-ಈ ವಸಂತಋತುವಿನಲ್ಲಿ, ಕೇಷಾಂ
ಚಿತ್-ಕೆಲವು ಜನಗಳ, ಹೃದಯಂ-ಮನಸ್ಸನ್ನು, ಸುಖಯಂತಿ-ಸಂತೋಷ
ಪಡಿಸುತ್ತವೆ, ॥೮೩॥

ತಾತ್ಪರ್ಯ—ವಸಂತ ಋತುವಿನಲ್ಲಿ ಸ್ತ್ರೀಯರುಗಳ ಶೃಂಗಾರವಿಲಾಸ
ಗಳು ಕೋಕಿಲಾಲಾಪವು ಮತ್ತು ಚಂದ್ರಕಿರಣಗಳು ಲತಾಮಂಟಪಗಳು
ಸರಸಕವಿಗಳ ಸಹವಾಸವು ಉತ್ತಮವಾದ ಸ್ತ್ರೀಯರುಗಳೂ ಕೆಲವು ಜನ
ಗಳ ಮನಸ್ಸನ್ನು ಸಂತೋಷ ಪಡಿಸುತ್ತವೆ. ಅಂದರೆ ಏಕತ್ರಯೌವನ
ಸ್ತ್ರೀ ಪುರುಷರಲ್ಲಿ ಮನುಷ್ಯರಿಗೆ ಮನಸ್ಸಂತೋಷ ವಿರುವ. ಯೌವನ
ಸ್ತ್ರೀಯರರುಗಳಿಗೆ ಮಲಯಾನಿಲ ಕೋಕಿಲಾಸಲಾಪಗಳು ತಟಸ್ಥೋ
ದ್ದೀಪದ ಸಾಮಗ್ರಿಗಳು ಸ್ತ್ರೀಯು ಶೃಂಗಾರರಸಕ್ಕೆ ಅಲಂಬನವು ಅಲಂ
ಕಾರಾದಿಗಳು ಉದ್ದೀಪನ ಸಾಮಗ್ರಿಗಳು ಎರಡುಂಟು. ಈ ಆಲಬನದಿಂ
ದಲೂ ಉದ್ದೀಪನ ಸಾಮಗ್ರಿಯಿಂದಲೂ ಶೃಂಗಾರ ರಸವುಂಟಾಗುವುದು
ಅದು ಹೇಗಂದರೆ;—ರತಿರಹಸ್ಯೇ.

ಶ್ಲೋ॥ ವಿಭಾವೈರನುಭಾವೈಶ್ಚ ಸಾತ್ವಿಕೈರ್ವ್ಯಭಿಚಾರಿಭಿಃ। ಆನೀಯಮಾ
ನಃಸ್ವಾದುತ್ವಂಸ್ಥಾಯೀಭಾವೋರಸಸ್ಮೃತಃ ಇತಿ ಲಕ್ಷಣಾತ್ ॥

ಈ ರೀತಿಯಲ್ಲಿರುವ ವಸಂತಕಾಲವು ಮೇಲೆ ಹೇಳಿದ ಜನಗಳಿಗೆ ಸಂತೋ
ಷಕರವಾದದ್ದು. ವಿರಹಿ ಜನಗಳಿಗೆ ಸಂತಾಪಕರವಾದದ್ದು ಎಂದು ಭಾ
ವವು. ಶಾರ್ದೂಲ ವಿಕ್ರೀಡಿತ ವೃತ್ತಂ. ॥೮೩॥

ಶ್ಲೋ॥ ಪಾಂಥಸ್ತ್ರೀವಿರಹಾನಲಾಹುತಿಕಲಾಮಾತನ್ವತೀಮಂ
ಜರೀಮಾಕಂದೇಷುಪಿ ಕಾಂಗನಾಭಿರಧುನಾಸೋತ್ಕಂ
ಠಮಾಲೋಕ್ಯತೇ ॥ ಅಪ್ಯೇತೇನವಪಾಟಲಾಪರಿಮಳ
ಪ್ರಾಗ್ಭಾರಪಾಟಚ್ಚರಾವಾಂತಿಕ್ಲಾಂತಿವಿತಾನತಾನವ
ಕೃತಶ್ರೀಖಂಡಶೈಲಾನಿಲಾಃ ॥೮೪॥

ಟೀಕು ॥ ಅಧುನಾ- ಈ ವಸಂತ ರುತುವಿನಲ್ಲಿ, ಪ್ರೋಷಿತಸ್ತ್ರೀವಿರಹಾನಲಾಹುತಿಕಲಾಂ - ಪ್ರೋಷಿತಸ್ತ್ರೀ- ಪ್ರೋಷಿತ ಭರ್ತೃಗಳ ಅಥವಾ ಪಥಿಕಾಂಗನೆಯರ, ವಿರಹಾನಲ- ವಿಯೋಗಾಗ್ನಿಯು. ಆಹುತಿಕಲಾಂ-ಆಹುತಿ ಸಾಮ್ಯವನ್ನು, ಆತನ್ವತೀ- ಸ್ವೀಕರಿಸಿರುವ, ಮಾಕಂದಶಾಖಿಷು-ಸಿಹಿಮಾವಿನ ಮರದಲ್ಲಿ, ಮಂಜರೀ-ಪುಷ್ಪಗುಚ್ಛವು, ಅಧುನಾ-ಈಗ, ಪಿಕಾಂಗನಾಭಿಃ ಹೆಣ್ಣುಕೋಕಿಲೆಗಳಿಂದ, ಸೋತ್ಕಂಠಯಾಥಾತಥಾ - ಅತಿಉತ್ಸಾಹದಿಂದ ಕೂಡೋಣ, ಹೇಗೊ ಹಾಗೆ, ಆಲೋಕ್ಯತೇ-ನೋಡಲ್ಪಡುತ್ತದೆ, ನವಪಾಟಲಾಪರಿಮಳಪ್ರಾಗ್ಭಾರಪಾಟಚ್ಚರಾಃ ನವ-ನೂತನವಾದ, ಪಾಟಲ - ಪಾಟಲೀಕುಸುಮಗಳ, ಪ್ರಾಗ್ಭಾರ-ಸಂಪದತಿಶಯದಿಂದ, ಪಾಟಚ್ಚರಾಃ-ಮಲೀಮಸಗಳಾದ- ಶ್ರೀಖಂಡಶೈಲಾನಿಲಾಃ ಶ್ರೀಖಂಡಶೈಲ ಮಲಯಪರ್ವತದಲ್ಲಿ ಹುಟ್ಟಿದ, ಅನಿಲಾಃ-ಗಾಳಿಗಳು, ಕ್ಲಾಂತಿವಿತಾನತಾನವಂ - ಕ್ಲಾಂತಿ-ವಿಯೋಗದಿಂದ ಬಳಲಿರುವ ಜನಗಳ, ವಿತಾನ- ಸಮೂಹಕ್ಕೆ, ತಾನವಂ-ಕೃಶತ್ವವನ್ನು, ಕೃತಃ ಸಂತಃ-ಮಾಡುತ್ತಲಿರುವವರಾಗಿ, ವಾಂತಿ ಬೀಸುತ್ತವೆ, ॥೮೪॥

ತಾತ್ಪರ್ಯ— ಈ ಶ್ಲೋಕದಲ್ಲಿ ವಸಂತರುತು ಸಮಯವನ್ನು ಹೇಳುತ್ತಾನೆ. ಅದು ಹೇಗೆಂದರೆ;—ಈಗ ವಸಂತಕಾಲದಲ್ಲಿ ಮಾರ್ಗವನ್ನು ನಡೆಯುತ್ತಾ ಇರುವ ಪುರುಷರುಗಳ ಅಂದರೆ ಅಥವಾ ವಿಯೋಗಿ ಜನಗಳ ಸ್ತ್ರೀಯರುಗಳ ಮದನಾಗ್ನಿಯು ಆಹುತಿ ಕಳೆಗಳ ಹಾಗೆಇರುವ ಸಿಹಿಮಾವಿನ ಚಿಗುರಿನ ಗೊಂಚಲುಗಳನ್ನು ನೋಡಿ ಹೆಣ್ಣುಕೋಕಿಲೆಗಳು ಅತಿಸಂತೋಷದಿಂದ ಕೂಗುತ್ತವೆ. ಮತ್ತು ಮಲಯ ಪರ್ವತದಿಂದ ಬರುವ ತಂಗಾಳಿಯು ವಿಯೋಗಿ ಜನಗಳ ಸ್ತ್ರೀಯರುಗಳನ್ನು ಕ್ರೂರವಾಗಿ ಮಾಡುತಾ ಇರುವನಾಗಿ ಬೀಸುತ್ತಲಿವೆ. ರೂಪಕಾಲಂಕಾರಗಳಿಗೆ ಸಂಕರವು ವೃತ್ತ್ಯನುಪ್ರಾಸ ಶಬ್ದಾಲಂಕಾರಕ್ಕೆ ಸಂಸೃಷ್ಟಿಯು ಆಗಿದೆ. ಶಾರ್ದೂಲವಿಕ್ರೀಡಿತ ವೃತ್ತ. ॥೮೪॥

ಶ್ಲೋ॥ ಪ್ರಥಿತಃಪ್ರಣಯವತೀನಾಂತಾವತ್ಪದಮಾತನೋತುಹೃದಿಮಾನಃ । ಭವತಿನಯಾವಚ್ಚಂದನತರುಸುರಭಿರ್ಮಲಯಪವಮಾನಃ ॥೮೫॥

ಟೀಕು॥ ಪ್ರಥಿತಃ-ಪ್ರಸಿದ್ಧವಾದ, ಮಾನಃ- ಈರ್ಷ್ಯಾಕೃತ ಕೋಪವು, ಪ್ರಣಯಯುವತೀನಾಂ-ಪ್ರಣಯ ವಿಶ್ವಾಸವುಳ್ಳ, ಯುವತೀನಾಂ- ಸ್ತ್ರೀಯ

ರುಗಳಿಗೆ, ಹೃದಿ-ಮನಸ್ಸಿನಲ್ಲಿ, ಪದಂ-ಸ್ಥಾನವನ್ನು, ಆತನೋತು ಉಂಟು ಮಾಡಲಿ, ಚಂದನತರು ಸುರಭಿಃ ಚಂದನತರು-ಚಂದನ ವೃಕ್ಷಗಳ, ಸುರಭಿಃ-ಪರಿಮಳವಿಶಿಷ್ಟವಾದ, ಮಲಯಪವನಃ-ಮಲಯಪರ್ವತದ ಗಾಳಿಯು, ಯಾವತ್-ಎಷ್ಟರವರೆಗೆ, ನಭವತಿ-ಬೀಸುವದಿಲ್ಲವೊ, ತಾವತ್-ಅಷ್ಟುಪರ್ಯಂತವು, ವ್ಯಥಿತಾಃ ಇರುತ್ತದೆ, ||೮೫||

ತಾತ್ಪರ್ಯ—ಸ್ತ್ರೀಯರುಗಳಿಗೆ ಉಂಟಾದ ಈರ್ಷ್ಯಾಕೃತ ಕೋಪವು ಎಷ್ಟರಪರ್ಯಂತ ಇರುತ್ತೆಂದರೆ ಮಲಯ ಪರ್ವತದಲ್ಲಿ ಅಂದರೆ ಚಂದನ ವೃಕ್ಷಗಳುಳ್ಳ ಮಲಯ ಪರ್ವತದಲ್ಲಿ ಹುಟ್ಟಿದ ಗಾಳಿಯು ಎಷ್ಟರ ಪರ್ಯಂತ ಬೀಸುವದಿಲ್ಲವೊ ಅಷ್ಟರ ಪರ್ಯಂತವಿರುತ್ತದೆ. ಅಂದರೆ ಮಂದಮಾರುತವು ಬೀಸಿದ ಕೂಡಲೆ ಸ್ತ್ರೀಯರಿಗೆ ಪೂರ್ವದಲ್ಲಿದ್ದ ಈರ್ಷ್ಯಾಕೃತ ಕೋಪವು ಹೋಗಿ ಪುರುಷರಲ್ಲಿಸೇರಿ ಸಂಭೋಗಸುಖವನ್ನು ಅನುಭವಿಸುತ್ತಾರೆ. ಈರ್ಷ್ಯಾಕೃತ ಕೋಪವೆಂದರೆ ತನ್ನ ನಾಯಕನು ಮತ್ತೊಬ್ಬ ಸ್ತ್ರೀಸಂಗವನ್ನು ಮಾಡಿದರೆ ನಾಯಿಕೆಗೆ ಬರುವ ಕೋಪಕ್ಕೆ ಈರ್ಷ್ಯಾಕೃತ ಕೋಪವೆಂದು ಹೆಸರು (ಲಕ್ಷಣಂತು) ಶ್ಲೋ|| ಸ್ತ್ರೀಣಾಮೀರ್ಷ್ಯಾಕೃತಃಕೋಪೋ । ಮಾನೋಽನ್ಯಾಸಂಗಿನಿಪ್ರಿಯೇ ನಿಶ್ರುತೇವಾನುಮಿತೇ ದೃಷ್ಟೇ ಇತಿದಶರೂಪಕೇ (ವೃತ್ತಮಾರ್ಯಾಭೇದಃ) ||೮೫||

ಶ್ಲೋ|| ಸಹಕಾರಕುಸುಮಕೇಸರನಿಕರಭರಾಮೋದಮೂರ್ಛಿತದಿಗಂತೇ || ಮಧುರಮಧುವಿಧುರಮಧುಪೇಮಧೌಭವೇತ್ಕಸ್ಯನೋತ್ಕಂಠಾ ||೮೬||

ಟೀಕಾ || ಸಹಕಾರಕುಸುಮಕೇಸರನಿಕರ ಭರಾಮೋದ ಮೂರ್ಛಿತದಿಗಂತೇ-ಸಹಕಾರ ಕುಸುಮಕೇಸರ-ಸಹಕಾರ-ಸಿಹಿಮಾವಿನ ಮರಗಳ, ಕುಸುಮ-ಪುಷ್ಪಗಳ, ಕೇಸರ-ಕಿಂಜಲ್ಕಗಳ ಅಥವಾ-ಕುಸುಮಗಳ, ನಿಕರ-ಸಮೂಹದ, ಭಾರ ಅತಿಶಯವಾದ, ಆಮೋದ-ಪರಿಮಳದಿಂದ, ಮೂರ್ಛಿತ ವ್ಯಾಪ್ತವಾದ, ದಿಗಂತೇ-ಏಕ-ದಿಕ್ಕುಗಳ, ಅಂತೇ-ಕೊನೆಗಳುಳ್ಳ, ಮಧುರ ಮಧುವಿಧುರ ಮಧುಪೇ-ಮಧುರ ಮಾಧುರ್ಯಗುಣಯುಕ್ತವಾದ, ಮಧು-ಮಕರಂದದಿಂದ, ವಿಧುರ-ವಿಹ್ವಲಗಳಾದ ಅಥವಾ-ಉನ್ಮತ್ತಗಳಾದ, ಮಧುಪೇ-ಭ್ರಮರಗಳುಳ್ಳ, ಮಧೌ-ವಸಂತರುತುವಿನಲ್ಲಿ, ಕಸ್ಯ-ಯಾವ ಜನಕ್ಕೆ ತಾನೆ, ಉತ್ಕಂಠಾ-ಆಸಕ್ತಿಯು, ನಭವೇತ್ ಆಗುವದಿಲ್ಲ, ಆಗಿಯೇ ಆಗುತ್ತದೆ, ||೮೬||

ತಾತ್ಪರ್ಯ—ಸಿಹಿಮಾವಿನ ಗಿಡದ ಹೂವಿನ ಕುಸುಮಗಳ ಗುಂಪುಗಳಲ್ಲಿರುವ ಅಧಿಕವಾದ ಸಮೃದ್ಧಿಯಿಂದ ವ್ಯಾಪಿಸಿಕೊಂಡಿರುವ ದಿಕ್ಕುಗಳ ಕೊನೆಗಳಲ್ಲಿ ಸಿಹಿಮಾವಿನಗಿಡದ ಕುಸುಮದಲ್ಲಿರುವ ಮಧುರತರವಾದ ಮಕರಂದಪಾನದಿಂದ ಪರವಶವಾದ ಭ್ರಮರಗಳುಳ್ಳ ವಸಂತಋತುವಿನಲ್ಲಿ ಯಾವ ಸ್ತ್ರೀಪುರುಷರು ತಾನೇ ಉತ್ಕಂಠಿತರಾಗುವದಿಲ್ಲ? ಅಂದರೆ ಸಂಭೋಗೇಚ್ಛೆಯುಳ್ಳವರಾಗುವದಿಲ್ಲ? ಎಲ್ಲರೂ ಆಗುತ್ತಾರೆ. ವಸಂತಕಾಲದಲ್ಲಿ ಮಾವಿನಹೂವಿನ ಮಕರಂದ ಪಾನಮಾಡಿ ಭ್ರಮರ ಝೇಂಕಾರವು ಮತ್ತು ಪುಷ್ಪವಾಸನೆಯುಂಟಾದರೆ ಎಲ್ಲಾ ಮನುಷ್ಯರೂ ಕಾಮಕೇಳಿಯಲ್ಲಿ ಆಸಕ್ತರಾಗುತ್ತಾರೆಂದು ತಾತ್ಪರ್ಯ. ವೃತ್ಯನುಪ್ರಾಸಾಲಂಕಾರಃ ವೃತ್ತಮಾರ್ಯಾ ಭೇದಃ. ||೭೬||

ಶ್ಲೋ|| ಅಚ್ಛಾಚ್ಛಚಂದನರಸಾರ್ದ್ರತರಾಮೃಗಾಕ್ಷ್ಯೋಧಾ
ರಾಗೃಹಾಣಿಕುಸುಮಾನಿಚಕೌಮುದೀಚ || ಮಂದೋ
ಮರುತ್ಸುಮನಸಶ್ಶುಚಿಹರ್ಮ್ಯಪೃಷ್ಠಂಗ್ರೀಷ್ಮೇಮ
ದನಂಚವಿವರ್ಧಯಂತಿ ||೭೭||

ಟೀಕು || ಅಚ್ಛಾಚ್ಛಚಂದನರಸಾರ್ದ್ರತರಾಃ-ಅಚ್ಛಾಚ್ಛ- ಅತಿಸ್ವಚ್ಛವಾದ, ಚಂದನರಸ-ಶ್ರೀಗಂಧಸಾರದಿಂದ, ಆರ್ದ್ರತರಾಃ-ಅತ್ಯಂತವಾಗಿ ನೆನೆಯಿಸಲ್ಪಟ್ಟ, ಮೃಗಾಕ್ಷ್ಯಃ-ಜಿಂಕೆಯ ಕಂಣಿನೋಪಾದಿಯಲ್ಲಿ ಕಣ್ಣುಗಳುಳ್ಳ ಸ್ತ್ರೀಯರುಗಳು, ಧಾರಾಗೃಹಾಣಿ ಜಲಯಂತ್ರಗೃಹಗಳು, ಕುಸುಮಾನಿ-ಮಲ್ಲಿಕಾದಿ ಪುಷ್ಪಗಳು, ಕೌಮುದೀಚ- ಬೆಳದಿಂಗಳು, ಸುಮನಸಃ - ಮಾಲತೀ ಕುಸುಮಗಳು. ಶುಚಿ ನಿರ್ಮಲವಾದ, ಹರ್ಮ್ಯಪೃಷ್ಠಂ-ಹರ್ಮ್ಯ-ಉಪ್ಪರಿಗೆಗಳ. ಪೃಷ್ಠಂ-ಮೇಲಭಾಗವು, ಮಂದಃ - ಶೈತ್ಯಸೌರಭ್ಯಮಾಂದ್ಯ ವಿಶಿಷ್ಟವಾದ, ಮರುತ್-ವಾಯುವೂ ಕೂಡ, ಗ್ರೀಷ್ಮೇ- ಗ್ರೀಷ್ಮ ಋತುವಿನಲ್ಲಿ, ಮದಂಚ-ಮದವನ್ನು, ಮದನಂಚ-ಕಾಮೋದ್ದೀಪನವನ್ನು, ವಿವರ್ಧಯಂತಿ-ವೃದ್ಧಿಮಾಡುವಂಥಾವುಗಳು ಆಗುತ್ತವೆ ||೭೭||

ತಾತ್ಪರ್ಯ—ಈ ಶ್ಲೋಕದಲ್ಲಿ ಗ್ರೀಷ್ಮರ್ತುವನ್ನು ಹೇಳುತ್ತಾನೆ. ಅದು ಹೇಗೆಂದರೆ; — ಗ್ರೀಷ್ಮರ್ತುವಿನಲ್ಲಿ ವಿರಹತಾಪವನ್ನು ಸಹಿಸಲಾರದೆ ಚಂದನ ಗಂಧವನ್ನು ಮೈಗೆ ತೊಡೆದುಕೊಂಡಿರುವ ಮೃಗಾಕ್ಷಿಯರಿಗೆ

ಯಾಂದವಾಗುತ್ತವೆ ಜಲಯಂತ್ರಗಳುಳ್ಳ ಮನೆಗಳು ಮಾಲತಿ ಮಲ್ಲಿಕಾದಿ ಕು
ಸುಮಗಳು ಚಂದನ ಗಂಧಲೇಪವು ಉಪ್ಪರಿಗೆಗಳು ಮತ್ತು ಸ್ವಚ್ಛತರವಾದ
ಬೆಳದಿಂಗಳು ಮದವನ್ನು ಕಾಮವನ್ನು ಸಹ ಉಂಟುಮಾಡುವವುಗಳು ಆಗು
ತ್ತವೆಯೆಂದು ಭಾವವು. (ಶಬ್ದಸಮುಚಯಾಲಂಕಾರವನ್ನಾಗಿ ಊಹಿಸ
ಬೇಕು) ಅಂದರೆ ಮಲಯಾನಿಲ ಮಲ್ಲಿಕಾ ಕುಸುಮಾದಿಗಳು ಕಾಮೋದ್ದೀ
ಪನ ಸಾಮಗ್ರಿಗಳಾಗಿರುತ್ತವೆ. ||೮೭||

ಶ್ಲೋ || ಸ್ರಜೋಹೃದ್ಯಾಮೋದಾವ್ಯಜನಪವನಶ್ಚಂದ್ರ
ಕಿರಣಾಃ || ಶುಚಿಸ್ಸೌಧೋತ್ಸಂಗಃ ಪ್ರತನುವಸನಂ
ಪಂಕಜದೃಶೋನಿದಾಘರ್ತಾವೇತದ್ವಿಲಸತಿಲಭಂತೇ
ಸುಕೃತಿನಃ ||೮೮||

ಟೀಕಾ || ಹೃದ್ಯಾಮೋದಾಃ - ಹೃದ್ಯ - ಮನೋಹರವಾದ, ಆಮೋ
ದಾಃ - ಪರಿಮಳಗಳುಳ್ಳ, ಸ್ರಜಃ - ಪುಷ್ಪಮಾಲಿಕೆಗಳು, ವ್ಯಜನಪವನಶ್ಚ - ವ್ಯ
ಜನ ಬೀಸಣಿಗೆಗಳ, ಪವನಶ್ಚ - ವಾಯುವೂ ಕೂಡ, ಚಂದ್ರಕಿರಣಾಃ - ಚಂದ್ರ
ನಕಿರಣಗಳು, ಪರಾಗಃ ಮನೋಹರವಾದ, ಕಾಸಾರಃ ಸರೋವರಗಳು,
ಮಲಯಜರಜಃ ಮಲಯಜ - ಮಲಯ ಪರ್ವತದಲ್ಲಿ ಹುಟ್ಟಿದ ಶ್ರೀಗಂಧದ,
ರಜಃ - ಧೂಳಿಯು, ವಿಶದಂ - ನಿರ್ಮಲವಾದ, ಶೀಧು ಮದ್ಯವು, ಶುಚಿಃ - ಶು
ಭ್ರವಾದ, ಸೌಧೋತ್ಸಂಗಃ - ಸೌಧ - ಉಪ್ಪರಿಗೆಗಳ, ಉತ್ಸಂಗಃ ಪ್ರದೇಶವು,
ಪ್ರತನುವಸನಂ ಪ್ರತನು - ಸೂಕ್ಷ್ಮವಾದ, ವಸನಂ - ವಸ್ತ್ರವು, ಪಂಕಜದೃಶಃ -
ಕಮಲಪೋಪಾದಿಯಲ್ಲಿ ಕಣ್ಣುಗಳುಳ್ಳ, ಸ್ತ್ರೀಯರುಗಳು ಎಂಬುವ, ಏತ
ತ್ - ಈ ಸಮಸ್ತವು ನಿದಾಘರ್ತೌ - ಗ್ರೀಷ್ಮ ಋತುವು, ವಿಲಸತಿ ಶತಿ - ವಿಜೃಂಭಿ
ಸುತ್ತಿರಲಾಗಿ, ಸುಕೃತಿನಃ - ಪುಣ್ಯವಂತನಿಗೆ, ಲಭಂತೇ - ಲಭಿಸುತ್ತವೆ ||೮೮||

ತಾತ್ಪರ್ಯ — ಗ್ರೀಷ್ಮಋತುವಿನಲ್ಲಿ ಪುಷ್ಪಮಾಲಿಕೆಗಳ ಬೀಸಣಿಗೆ ಘಾ
ಳಿಯೂ ವಿಶದವಾದ ಉಪ್ಪರಿಗೆ ಮನೆಗಳು ಚಂದನ ಗಂಧವು ಚಂದ್ರಕಿರಣಗ
ಳು ಕ್ರೀಡಾಸರಸ್ಸು ಸ್ವಚ್ಛವಾದ ಮದ್ಯವು ಕಮಲಾಕ್ಷಿಯರು ಈ ಎಲ್ಲವು
ಪುಣ್ಯಶಾಲಿಗೆ ಲಭಿಸುತ್ತವೆ. ಪಾಪಿಜನಗಳಿಗೆ ಲಭಿಸುವದಿಲ್ಲ ಎಂದು ಭಾ
ವವು. ಶಿಖರಿಣೀ ವೃತ್ತಂ. ||೮೮||

ಶ್ಲೋ॥ ಸುಧಾಶುಭ್ರಂಧಾಮಸ್ಫುರದಮಲರಶ್ಮಿಃ ಶಶಧರಃ ಪ್ರಿಯಾವಕ್ತ್ರಾಂಭೋಜಂ ಮಲಯಜರಜಶ್ಚಾತಿಸುರಭಿ ॥
ಸ್ರಜೋಹೃದ್ಯಾಮೋದಾಸ್ತದಿದಮಖಿಲಂರಾಗಿಣಿಜನೇಕರೋತ್ಯಂತಃಕ್ಷೋಭಂನತು ವಿಷಯಸಂಸರ್ಗವಿಮುಖೇ ॥೪೯॥

ಟೀಕು॥ ಸುಧಾಶುಭ್ರಂ-ಸುಧಾ-ಲೇಪನದ್ರವ್ಯದಿಂದ, ಶುಭ್ರಂ-ಬೆಳ್ಳಗಿರುವ, ಧಾಮ- ಮನೆಯು, ಸ್ಫುರದಮಲರಶ್ಮಿಃ- ಸ್ಫುರತ್- ಪ್ರಕಾಶವಾನವಾದ, ಅಮಲ-ನಿರ್ಮಲವಾದ, ರಶ್ಮಿಃ-ಕಿರಣಗಳುಳ್ಳ, ಶಶಧರಃ-ಚಂದ್ರನು, ಪ್ರಿಯಾವಕ್ತ್ರಾಂಭೋಜಂ-ಪ್ರಿಯ-ನಾಯಕಿಯು, ವಕ್ತ್ರಾಂಭೋಜಂ- ಮುಖಕಮಲವು ಅಂದರೆ—ಕಮಲ ಸದೃಶವಾದ ಮುಖವು, ಅತಿಸುರಭಿ- ಅತ್ಯಂತ ಪರಿಮಳವಾದ, ಮಲಯರಜಃ- ಶ್ರೀಗಂಧಪರಿಮಳವು, ಹೃದ್ಯಾಮೋದಾಃ- ಹೃದ್ಯ-ಮನೋಹರವಾದ, ಆಮೋದಾಃ ಪರಿಮಳವುಳ್ಳ, ಸ್ರಜಃ-ಪುಷ್ಪಮಾಲೆಗಳು, ಅಖಿಲ ಸಮಸ್ತವಾದ, ತದಿದಂ-ಈ ಉತ್ತಮವಾದವುಗಳು, ರಾಗಿಣಿ-ವಿಷಯಾಸಕ್ತಿಯುಳ್ಳ, ವಿಷಯಸಂಸರ್ಗವಿಮುಖೇ-ವಿಷಯಾಸಕ್ತಿಗೆ ವಿಮುಖರಾದ, ಜನೇತು - ಜನರಲ್ಲಿಯಾದರೂ, ಕ್ಷೋಭಂ- ಮನಸ್ಸಂಪಾತವನ್ನು, ನಕರೋತಿ-ಮಾಡುವದಿಲ್ಲವೆ, ಏನು? ಮಾಡಿಯೇ ಮಾಡುತ್ತದೆ. ॥೪೯॥

ತಾತ್ಪರ್ಯ—ಈ ಶ್ಲೋಕದಲ್ಲಿಯೂ ಗ್ರಿಷ್ಮಋತುವನ್ನೇ ವರ್ಣಿಸುತ್ತಾನೆ. ಅದು ಹೇಗೆಂದರೆ;—ಈ ಗ್ರಿಷ್ಮಋತುವಿನಲ್ಲಿ ಗಂಧಪರಿಮಳವು ಚಂದ್ರಕಿರಣಗಳು ಪುಷ್ಪಮಾಲ್ಲಿಕೆಯೂ ಪುಪ್ಪರಿಗೆ ಮನೆಯೊಳು ಸ್ತ್ರೀಮುಖಪಂಕಜವು ವಿಷಯಾಸಕ್ತಿವುಳ್ಳ ನೀರ ಜನಗಳಿಗೆ ದುಃಖವನ್ನುಂಟುಮಾಡುವವಿಲ್ಲವೇ ಅಂದರೆ ಮಾಡಿಯೇಮಾಡುತ್ತದೆ ಎಂದು ಭಾವವು. ಶಿಖರಿಣೀವೃತ್ತಂ. ॥೪೯॥

ಶ್ಲೋ ॥ ತರುಣೀವೇಷೋದ್ದೀಪಿಕಾಮಾವಿಕಸಜ್ಜಾತೀಪುಷ್ಪಸುಗಂಧಿಃ ॥ ಉನ್ನತಪೀನಪಯೋಧರಭಾರಾಪ್ರಾವೃಟ್ತನುತೇಕಸ್ಯನಹರ್ಷಂ ॥ ೫೦ ॥

ಟೀಕು॥ ಉದ್ದೀಪಿತಕಾಮಾ- ಉದ್ದೀಪಿತ- ಹುಟ್ಟಿಸಲ್ಪಟ್ಟ, ಕಾಮಾ-ಮನ್ಮಥನುಳ್ಳ ಸುರತಾಭಿಲಾಷೆಯುಳ್ಳ, ವಿಕಸಜ್ಜಾತೀಪುಷ್ಪಸುಗಂಧಿಃ- ವಿಕ

ಸತ್- ಅರಳಿದಂಥಾ, ಜಾತೀಪುಷ್ಪ- ಜಾಜೀಹೂವಿನ, ಸುಗಂಧಿಃ- ಪರಿಮಳ ವುಳ್ಳ, ಉನ್ನತ - ಉತ್ತುಂಗವಾದ, ಪೀನ - ಬಲಿತುಯಿರುವ, ಪಯೋಧರ-ಸ್ತನಗಳ, (ಪಯೋಧರ-ಮೇಘಗಳ) ಭಾರಾವುಳ್ಳ, (ಅಥವಾ ಅತಿಶಯುವುಳ್ಳ) ತರುಣೀವೇಷಾ-ತರುಣೀ- ಸ್ತ್ರೀಯುವೇಷಾ- ವೇಷದೋಷಾದಿಯುಲ್ಲಿ ದೀಪವುಳ್ಳ, ಪ್ರಾವೃಟ್-ವರ್ಷಾಕಾಲವು, ಕಸ್ಯ- ಯಾರಿಗೆ ತಾನೆ, ಹರ್ಷಂ- ಸಂತೋಷವನ್ನು, ನತನುತೇ-ಉಂಟುಮಾಡುವದಿಲ್ಲ ‖೯೦‖

ತಾತ್ಪರ್ಯ—ವರ್ಷಾಕಾಲವನ್ನು ವರ್ಣಿಸುತ್ತಾನೆ ಕಾಮಿನಿವೇಷ ದೋಷಾದಿಯಲ್ಲಿ ವೇಷವುಳ್ಳ ವರ್ಷಾಕಾಲವು ಯಾವಜನಕ್ಕೆ ತಾನೆ ಸಂತೋಷವನ್ನುಂಟುಮಾಡುವದಿಲ್ಲ ? ಎಲ್ಲರಿಗೂ ಸಂತೋಷವನ್ನುಂಟುಮಾಡೇ ಮಾಡುತ್ತದೆ, ಈ ಶ್ಲೋಕದಲ್ಲಿ ಪಯೋಧರತ್ವ ಜಾತೀಪುಷ್ಪ ಸೌಗಂಧಾದಿ ವಿಶೇಷಣ ಸಾಮ್ಯೇನ ಶ್ಲೇಷಾನುಪ್ರಾಣಿತವಾದ ಉಪಮಾಲಂಕಾರಃ.

ಶ್ಲೋ॥ ವಿಯದುಪಚಿತಮೇಘಂ ಭೂಮಯಃಕಂದಳಿನ್ಯೋನವ
ಕುಟಜಕದಂಬಾಮೋದಿನೋಗಂಧವಾಹಾಃ ॥ ಶಿಖಿಕು
ಲಕಲಕೇಕಾರಾವರಮ್ಯಾವನಾಂತ್ರಾಸುಖಿನಮಸುಖಿ
ನವಾಸರ್ವಮುತ್ಕಂಠಯಂತಿ ॥ ‖೯೧‖

ಟೀಕಾ॥ ಉಪಚಿತಮೇಘಂ- ಉಪಚಿತ- ಆವೃತವಾದ, ವಿಯತ್- ಆಕಾಶವು, ಕಂದಳಿನ್ಯಃ-ಬೀಜಾಂಕುರವುಳ್ಳ, ಭೂಮಯಃ-ಭೂಪ್ರದೇಶಗಳು, ನವಕುಟಜಕದಂಬಾಮೋದಿನಃ- ನವ- ನೂತನಗಳಾದ, ಕುಟಜ- ಗಿರಿಮಲ್ಲಿಕಾಪುಷ್ಪಗಳ, ಕದಂಬ-ನೀಪಪುಷ್ಪಗಳ, ಆಮೋದಿನಃ- ಪರಿಮಳಗಳುಳ್ಳ, ಗಂಧವಾಹಾಃ-ವಾಯುಗಳ, ಶಿಖಿಕುಲಕೇಕಾರಾವರಮ್ಯಾಃ-ಶಿಖಿಕುಲ-ಮಯೂರದ ಗುಂಪುಗಳ, ಕೇಕಾರಾವ-ಕೇಕಾಧ್ವನಿಯಿಂದ, ರಮ್ಯಾಃ-ಮನೋಹರಗಳಾದ, ವನಾಂತಾಃ- ವನದಕೊನೆಭಾಗಗಳು, ಸರ್ವಂ- ಇವುಗಳು ಎಲ್ಲವು ಸುಖಿನಂ- ಸಂತೋಷವುಳ್ಳವನನ್ನು, ಅಸುಖಿನಂವಾ- ಸುಖವಿಲ್ಲದೆ ಇರುವನನ್ನಾಗಲಿ, ಉತ್ಕಂಠಯಂತಿ-ಕ್ರೀಡಾಸಂಭೋಗೋತ್ಕಂಠವುಳ್ಳವನನ್ನಾಗಿ ಮಾಡುತ್ತದೆ.

ತಾತ್ಪರ್ಯ—ಈ ಶ್ಲೋಕದಲ್ಲೂ ವರ್ಷಾಕಾಲವನ್ನು ವರ್ಣಿಸುತ್ತಾನೆ ವರ್ಷಾಕಾಲದಲ್ಲಿ ಮೇಘಾವೃತವಾದ ಆಕಾಶವೂ ಗಿರಿಮಲ್ಲಿಕಾಕದಂಬ ಪುಷ್ಪದಮೇಲೆ ಬರುವಗಾಳಿಯು ಬೀಜದ ಅಂಕುರಗಳೂ ಭೂಭಾಗವು ಮ

ಯೂರಗಳ ಧ್ವನಿಗಳಿಂದ ಕೂಡಿರುವ ವನಪ್ರದೇಶವೂ ಸುಖವಲ್ಲಿರುವವನನ್ನಾಗಲಿ ದುಃಖದಲ್ಲಿರುವವನನ್ನಾಗಲಿ ಈ ಮೇಲೆಹೇಳಿದ ಮೇಘಾವೃತ ಆಕಾಶಾದಿಗಳು ಕೂಡ ಮೇಘಾರಂಭದಲ್ಲಿ ಉತ್ಕಂಠಾಯುತ್ತನನ್ನಾಗಿ ಮಾಡುವದಿಲ್ಲ? ಅಂದರೆ ಮೇಘೋದಯವಾದರೆ ಸರ್ವರಿಗೂ ಕಾಮೋದ್ದೀಪನವಾಗುತ್ತದೆ. ಯೆಂದು ತಾತ್ಪರ್ಯವು. ಮಾನಿನೀವೃತ್ತಂ. ||೯೧||

ಶ್ಲೋ|| ಉಪರಿಘನಂಘನಪಟಲಂತಿರ್ಯಗ್ಗಿರಯೋಪಿನರ್ತಿತ
ಮಯೂರಾಃ । ಕ್ಷಿತಿರಪಿಕಂದಳಧವಳಾದೃಷ್ಟಿಂಪಥಿ
ಕಃಕ್ವಪಾತಯತಿ || ೯೨ ||

ಟೀಕು| ಉಪರಿ- ಮೇಲ್ಭಾಗದಲ್ಲಿ, ಘನಪಟಲಂ- ಘನ- ಸಾಂದ್ರವಾದ, ಪಟಲಂ ಸಮೂಹವುಳ್ಳ, ಘನಂ ಮೇಘವು, ತಿರ್ಯಕ್- ದಿಕ್ಕುಗಳಲ್ಲಿ, ನರ್ತಿತ-ಕುಣಿಯುತ್ತಿರುವ, ಮಯೂರಾಃ-ನವಿಲುಗಳುಳ್ಳ ಗಿರಯೋಪಿ- ಪರ್ವತಗಳೂಕೂಡ ಕಂದಳಧವಳಾ-ಕಂದಳ-ಬೀಜಾಂಕುರಗಳಿಂದ, ಧವಳಾ-ಶುಭ್ರವಾಗಿರುವ, ಕ್ಷಿತಿರಪಿ-ಭೂಮಿಯೂ, ಆಸ್ತೆ-ಇದೆ, ಪಥಿಕಃ-ಮಾರ್ಗಸ್ಥನು, ದೃಷ್ಟಿಂ- ದೃಷ್ಟಿಯನ್ನು, ಕ್ವ-ಎಲ್ಲಿ, ಪಾತಯತಿ- ಬಿಡುತ್ತಾನೆ ಎಲ್ಲಿಯೂ-ಬಿಡುವದಕ್ಕೆ ಆಗುವದಿಲ್ಲ ||೯೨||

ತಾತ್ಪರ್ಯ—ವರ್ಷಾಕಾಲದಲ್ಲಿ ಮೇಲುಗಡೆ ನೋಡಿದರೆ ಹೆಚ್ಚಾದ ಮೇಘಸಮುದಾಯವು ದಿಕ್ಕುಗಳಲ್ಲಿ ನೋಡಿದರೆ ಮಯೂರಧ್ವನಿಗಳುಳ್ಳ ಬೆಟ್ಟಗಳು ಭೂಮಿಯನ್ನು ನೋಡಿದರೆ ಪೈರಿನಿಂದ ಎಲ್ಲಾ ಕಡೆಯಲ್ಲಿಯೂ ಬೆಳ್ಳಗೆಯದೆ. ಹೀಗಿರುವಲ್ಲಿ ನಿತ್ಯದಲ್ಲಿಯೂ ಮಾರ್ಗವನ್ನು ನಡೆಯುವ ಮನುಷ್ಯನು ತನ್ನದೃಷ್ಟಿಯನ್ನು ಯಾವಕಡೆ ಬಿಟ್ಟುನೋಡ್ಯಾನು? ಎಲ್ಲಿ ನೋಡಿದರೂ ಕಾಮೋದ್ದೀಪನವನ್ನುಂಟುಮಾಡುತ್ತದೆ. ಅಂದರೆ ಮೇಘೋದಯ ಮಯೂರಕೇಕಾರವ ಬೀಜಕಂದಳ ಛಾಯೆ ಇವುಗಳೆಲ್ಲವೂ ನಿತ್ಯಪಥಿಕರಿಗೆ ಕಾಮಜನಕವೆಂದು ಭಾವವು. ವೃತ್ತಮಾರ್ಯಾಭೇದಃ. ||೯೨||

ಶ್ಲೋ|| ಇತೋವಿದ್ಯುದ್ವಲ್ಲೀವಿಲಸಿತಮಿತಃಕೇತಕಿತರೋಃ ಸ್ಫು
ರನ್‌ಗಂಧಃಪ್ರೋದ್ಯಜ್ಜಲದನಿನದಸ್ಫೂರ್ಜಿತಮಿತಃ ||
ಇತಃಕೇಕೀಕ್ರೀಡಾಕಲಕಲರವಃ ಪಕ್ಷ್ಮಲದೃಶಾಂಕಥಂ
ಯಾಸ್ಯಂತ್ಯೇತೇವಿರಹದಿವಸಾಸ್ಸಂಭೃತರಸಾಃ ||೯೩

ಟೀಕು ॥ ಇತಃ-ಈ ಪ್ರದೇಶದಲ್ಲಿ, ವಿದ್ಯುದ್ವಲ್ಲೀವಿಲಸಿತಂ- ವಿದ್ಯುತ್-ಮಿಂಚು ಎಂಬುವ, ವಲ್ಲೀ-ಬಳ್ಳಿಗಳ, ವಿಲಸಿತಂ ಪ್ರಕಾಶವು, ಭವತಿ-ಆಗುತ್ತದೆ, ಇತಃ-ಈ ಪ್ರದೇಶದಲ್ಲಿ, ಕೇತಕೀತರೋಃ-ಕೇತಕೀವೃಕ್ಷಗಳ ಅಥವಾ ತಾಳೆಮರದ ಹೂವಿನ, ಸ್ಫುರನ್-ಪ್ರಕಾಶವಾನವಾದ, ಗಂಧಃ - ಸುಗಂಧವು, ವರ್ತತೇ-ಇದೆ, ಇತಃ-ಈ ಪ್ರದೇಶದಲ್ಲಿ, ಪ್ರೋದ್ಯಜ್ಜಲದನಿನದ ಸ್ಫೂರ್ಜಿತಂ-ಪ್ರೋದ್ಯತ್-ಅಧಿಕವಾದ, ಜಲದನಿನದ-ಮೇಘಧ್ವನಿಯು, ಸ್ಫೂರ್ಜಿತಂ-ಆದರಣೆಯು, (ಅಥವಾ ಅತಿಶಯವು) ಭವತಿ-ಆಗುತ್ತಲಿದೆ, ಇತಃ-ಈ ಪ್ರದೇಶದಲ್ಲಿ, ಕೇಕಿಕ್ರೀಡಾಕಲಕಲರವಃ- ಕೇಕೀ-ಮಯೂರಗಳ, ಕ್ರೀಡಾ-ವಿಹಾರದ, ಕಲಕಲರವಃ-ಕೋಲಾಹಲ ಶಬ್ದವು, ಭವತಿ-ಆಗುತ್ತಲಿದೆ, ಪಕ್ಷ್ಮಲದೃಶಾಂ-ಸುಂದರಾಂಗಿಯರ, ಸಂಭೃತರಸಾಃ-ಸಂಭೃತ- ಉಂಟುಮಾಡಲ್ಪಟ್ಟ, ರಸಾಃ-ಶೃಂಗಾರರಸಗಳುಳ್ಳ, ಏತೇ-ಈ ಪ್ರಸಿದ್ಧಗಳಾದ, ವಿರಹದಿವಸಾಃ-ವಿಯೋಗದಿವಸಗಳು, ಕಥಂ-ಹೇಗೆ, ಯಾಸ್ಯಂತಿ - ಕಳೆಯುವದಕ್ಕೆ ಆದೀತು ? ಕಳೆಯುವದಕ್ಕೆ ಆಗುವದಿಲ್ಲ ॥೯೩॥

ತಾತ್ಪರ್ಯ—ಈ ಶ್ಲೋಕದಲ್ಲೂ ವರ್ಷಾಕಾಲವನ್ನು ವರ್ಣನೆಮಾಡುತ್ತಾನೆ. ಅದು ಹೇಗೆಂದರೆ ವರ್ಷಾಕಾಲದಲ್ಲಿ ಒಂದುಕಡೆ ಬಳ್ಳಿಯಂತೆ ಮಿಂಚುಗಳು ಒಂದುಕಡೆ ನವಿಲುಗಳು ಕುಣಿದುಕೂಗುತ್ತಾ ಇರುವ ಧ್ವನಿಯು ಒಂದುಕಡೆ ತಾಳೆಯುಮರಗಳ ಹೂವಿನವಾಸನೆಯು ಸ್ತ್ರೀಯರುಗಳ ಶೃಂಗಾರವಿಲಾಸಗಳು ಈ ಮೊದಲಾದ ಕಾಮಜನಕವಾದ ದಿವಸಗಳನ್ನು ವಿರಹಿಜನಗಳು ಹೇಗೆತಾನೆ ಕಳೆಯುವದಕ್ಕೆ ಆದೀತು ? ಕಳೆಯುವದಕ್ಕೆ ಆಗುವದಿಲ್ಲವೆಂಬುವ ತಾತ್ಪರ್ಯವು. . ಶಿಖರಿಣೀವೃತ್ತಂ. ॥೯೩॥

ಶ್ಲೋ॥ ಅಸೂಚೀಸಂಸಾರೇತಮಸಿನಭಸಿಪ್ರೌಢಜಲದಧ್ವನಿ
ಪ್ರಾಜ್ಞಂಮನ್ಯೇಪತತಿಪೃಷತ್ರಾನಾಂಚನಿಚಯೇ ॥
ಇದಂಸೌದಾಮನ್ಯಾಃ ಕನಕಕಮನೀಯಂ ವಿಲಸಿತಂ
ಮುದಂಚಮ್ಲಾನಿಂಚಪ್ರಥಯತಿ ಪಥಿಸ್ವೈರಸು
ದೃಶಾಂ ॥ ॥೯೪॥

ಟೀಕು ॥ ತಮಸಿ-ಅಂಧಕಾರವು, ಅಸೂಚೀ-ಸಂಚಾರೇ, ಸತಿ-ಸೂಜಿಯು ಸಂಚಾರಕ್ಕೆ ಅವಕಾಶವಿಲ್ಲದಂತೆ ಒತ್ತಾಗಿ ಇರುತ್ತಿರಲಾಗಿ, ನಭಸಿ - ಆಕಾಶದಲ್ಲಿ, ಪ್ರೌಢಜಲಧ್ವನಿ ಪ್ರಾಜ್ಞಂಮನ್ಯೇ-ಪ್ರೌಢ-ಹೆಚ್ಚಾದ, ಜಲದ ಮೇ

ಘದ ಧ್ವನಿಸ್ರಾಜ್ಞಂ ಮನ್ಯೇ-ಪ್ರೌಢತರಧ್ವನಿವಿಜೃಂಭಣೆ ವುಂಟಾಗುತ್ತಿರಲಾಗಿ, ಪೃಷತಾನಾಂ-ವರ್ಷಬಿಂದುಗಳ, ನಿಚಯೇಸತಿ-ಸಮುದಾಯವುಂಟಾಗುತ್ತಿರಲಾಗಿ, ಇದಂ-ಸುಂದರವಾದ, ಕನಕಕಮನೀಯಂ- ಸುವರ್ಣರೇಖೆಯೋಪಾದಿಯಲ್ಲಿ, ಸೌದಾಮನ್ಯಾಃ-ಮಿಂಚಿನ, ವಿಲಸಿತಂ-ಪ್ರಕಾಶವು, ಸ್ವೈರಸಾದೃಶಾಂ-ಜಾರಸ್ತ್ರೀಯರುಗಳಿಗೆ, ಪಥಿ-ಮಾರ್ಗದಲ್ಲಿ, ಮುದಂಚ- ಸಂತೋಷವನ್ನು, ಗ್ಲಾನಿಂಚ ದುಃಖವನ್ನು ಕೂಡ, ಪ್ರಥಯತಿ ಉಂಟುಮಾಡುತ್ತದೆ ||೯೩||

ತಾತ್ಪರ್ಯ—ಆಕಾಶದಲ್ಲಿ ಸೂಜಿಯೂರುವುದಕ್ಕೆ ಸ್ಥಳವಿಲ್ಲದಹಾಗೆ ಕತ್ತಲೆ ಮುಚ್ಚಿಕೊಂಡು ಮೇಘವು ಗುಡುಗುತ್ತಾ ಮಳೆಹನಿಗಳು ಸುರಿಯುತ್ತಾ ಬಂಗಾರದಂತೆ ಅಥವಾ ಭಂಗಾರದ ರೇಖೆಯೋಪಾದಿಯಲ್ಲಿರುವ ಮಿಂಚಿನಕೋಳವೂ ಜಾರಪುರುಷರನ್ನು ಕುರಿತು ಸಂಕೇತಸ್ಥಾನಕ್ಕೆ ಹೋಗುವಾಗ ಜಾರಸ್ತ್ರೀಗಳಿಗೆ ಸಂತೋಷ ಸಂತಾಪಗಳೆರಡರನ್ನೂ ವುಂಟುಮಾಡುತ್ತದೆ. ಅಂದರೆ ಮಿಂಚಿದಕಾಲದಲ್ಲಿ ದಾರಿಕಾಣುವದರಿಂದ ದಾರಿಕಂಡಸಂತೋಷ ಯಾರಾದರೂ ನೋಡ್ಯಾರೆಂಬುವ ಸಂಕೋಚದಿಂದ ಸಂತಾಪವು ವುಂಟಾಗುತ್ತವೆ ಯೆಂದು ತಾತ್ಪರ್ಯವು. ಮೇಲೆಹೇಳಲ್ಪಟ್ಟ ನಾಯಿಕಿಯು ಅಭಿಸಾರಿಕಾ ಎಂನಿಸಿಕೊಳ್ಳುವಳು ||೯೪||

ಶ್ಲೋ|| ಕಾಂತಾಭಿಸರಣೋತ್ಸುಕಾ ಸ್ಮರಾತುರಾಸಾಭಿಸಾರಿಕಾ ಇತಿ ಲಕ್ಷಣಾತ್ (ಶಿಖರಿಣೀ ವೃತ್ತಂ)

ಶ್ಲೋ|| ಆಸಾರೇಣನಹರ್ಮ್ಯತಃಪ್ರಿಯತಮೈರ್ಯಾತುಂಬಹಿಶ್ಶಕ್ಯತೇಶೀತೋತ್ಕಂಪನಿಮಿತ್ತಮಾಯತದೃಶಾಗಾಢಂ
ಸಮಾಲಿಂಗ್ಯತೇ || ಜಾತಾಶ್ಶೀಕರಶೀತಲಾಶ್ಚಮರು
ತೋರತ್ಯಂತಖೇದಚ್ಛಿದೋ ಧನ್ಯಾನಾಂಬತದುರ್ದಿ
ನಂಸುದಿನತಾಂಯಾತಿಪ್ರಿಯಾಸಂಗಮೇ ||೯೫||

ಟೀಕು || ಆಸಾರೇಣ-ಧಾರಾಸಂಪಾತದಿಂದ, ಹರ್ಮ್ಯತಃ - ಉಪ್ಪರಿಗೆ, ದಸೆಯಿಂದ, ಪ್ರಿಯತಮೈಃ-ಪ್ರಾಣಪ್ರಿಯರಿಂದ, ಬಹಿಃ-ಹಚೆ ಕಡೆಗೆ, ಯಾತುಂ - ಬರುವದಕ್ಕೋಸ್ಕರ, ನಶಕ್ಯತೇ-ಆಗುವದಿಲ್ಲ, ಶೀತೋತ್ಕಂಪನಿಮಿತ್ತಂ-ಶೀತ-ಸೀತದಿಂದವುಂಟಾದ, ಉತ್ಕಂಪ-ನಡುಗೋಣದರ, ನಿಮಿತ್ತಂ-

ಕಾರಣವಾಗಿ, ಆಯತದೃಶಾ-ವಿಸ್ತಾರವಾದ ಕಣ್ಣುಗಳುಳ್ಳ, ಸ್ತ್ರೀಯಿಂದ, ಗಾಢಂ-ಗಟ್ಟಿಯಾಗಿ, ಸಮಾಲಿಂಗತೇ- ಆಲಿಂಗನೆ ಮಾಡೋಣವಾಗುತ್ತದೆ, ರತ್ಯಂತಖೇದಚ್ಛಿದಃ-ರತ್ಯಂತ ಸಂಭೋಗಾನಂತರದಲ್ಲಿ ಹುಟ್ಟಿದ, ಖೇದ-ಆಯಾಸವನ್ನು, ಛಿದಃ- ಹೋಗಲಾಡಿಸುತ್ತಿರುವ, ಮರುತಃ - ವಾಯುಗಳು ಜಾತಾಶ್ಚ-ಹುಟ್ಟಿದವುಗಳು, ಆದವು-ಧನ್ಯಾನಾಂ-ಪುಣ್ಯಶಾಲಿಗಳಿಗೆ, ಪ್ರಿಯಾಸಂಗಮೇಸತಿ ಪ್ರಿಯಾ-ಪ್ರಾಣನಾಯಕಿಯರ. ಸಂಗಮೇಸತಿ-ಸಂಗಮವುಉಂಟಾಗುತ್ತಿರಲಾಗಿ, ದುರ್ದಿನಂ-ದುರ್ದಿನವು, (ಮೇಘಚ್ಛನ್ನದಿನವು) ಸುದಿನತಾಂ ಒಳ್ಳೆದಿನದ ಭಾವವನ್ನು, ಯಾತಿ-ಹೊಂದುತ್ತದೆ, ||೯೫||

ತಾತ್ಪರ್ಯ—ಮಳೆಯು ಸಂತತವಾಗಿ ಸುರಿಯೋಣದರಿಂದ ಯೌವನಪುರುಷರು ಉಪ್ಪರಿಗೆಗಳಿಂದ ಇಳಿದು ಈಚೆಗೆ ಬರುವುದಿಲ್ಲ ಸ್ತ್ರೀಯರುಗಳು ಛಳಿಯನಿಮಿತ್ತ ಮಾಡಿಕೊಂಡು ಪುರುಷರನ್ನು ಗಟ್ಟಿಯಾಗಿ ತಬ್ಬಿಕೊಳ್ಳುತ್ತಾರೆ ಮತ್ತು ಪ್ರಾತಃಕಾಲ ಅತಿಕ್ರಮಿಸಿದಾಗಲೂ ಮೇಲಕ್ಕೆಯೇಳುವದಕ್ಕೆ ಬಿಡದೆ ತಂಮ ವಿಶ್ವಾಸತೋರಿಸುವರು. ಮೇಘಾಚ್ಛಾದಿತವಾದದಿನವೂ ಸ್ತ್ರೀಯರಿಂದ ಕೂಡಿದ ಪುಣ್ಯಶಾಲಿಗಳಿಗೆ ಸುದಿನವಾಗಿ ಕಾಣುತ್ತದೆ. ಅಂದರೆ ವರ್ಷಾಕಾಲದಲ್ಲಿ ಜನಗಳು ಮಹಡಿಗಳಮೇಲೆ ವಾಸಮಾಡುತ್ತಾ ಅಲ್ಲಿಯೇ ಸ್ತ್ರೀಸಂಭೋಗವನ್ನು ಮಾಡಿಕೊಂಡು ಇರೋಣದರಿಂದ ಹಗಲುಮೇಘದಿಂದ ಮುಚ್ಚಿಹೋಗಿದ್ದಾಗ್ಯೂ ಸುದಿನವಾಗಿ ಪುಣ್ಯಶಾಲಿಗಳಿಗೆ ಕಾಣುತ್ತಾ ಇರುತ್ತವೆ. ಎಂದುಭಾವವು, ಅತ್ರದುರ್ದಿನಂಸುದಿನತಾಂಯಾತಿ ಎಂಬುವ ಸ್ಥಳದಲ್ಲಿ ವಿರೋಧಾಭಾಸಾಲಂಕಾರಃ ಶ್ಲೋ|| ಆಭಾಸತ್ವೇವಿ ರೋಧಸ್ಯ ವಿರೋಧಾ ಭಾಸ್ಯತೇ ಇತಿಲಕ್ಷಣಾತ್ ಶಾರ್ದೂಲ ವಿಕ್ರೀಡಿತವೃತ್ತಂ. ||೯೫||

ಶ್ಲೋ|| ಅರ್ಧಂಸುಪ್ತ್ವಾನಿಶಾಯಾಸ್ಸರಭಸಸುರತಾಯಾಸ
ಸನ್ನಶ್ಲಥಾಂಗಃಪ್ರೋದ್ಭೂತಾಸಹ್ಯತೃಷ್ಣೋಮಧು
ಮದನಿರತೋಹರ್ಮ್ಯಪೃಷ್ಠೇವಿವಿಕ್ತೇ || ಸಂಭೋಗ
ಕ್ಲಾಂತಕಾಂತಾ ಶಿಥಿಲಭುಜಲತಾವರ್ಜಿತಂ ಕರ್ಕರೀ
ತೋಜ್ಯೋತ್ಸ್ನಾಭಿನ್ನಾಚ್ಛಧಾರಂನಪಿಬತಿಸಲಿಲಂ
ಶಾರದಂಮಂದಪುಣ್ಯಃ ||೯೬||

ಟೀಕು || ನಿಶಾಯಾಃ-ರಾತ್ರಿಯ ಅರ್ಧಕಾಲದಲ್ಲಿ, ಸುಪ್ತ್ವಾ - ಮಲಗಿ
ಕೊಂಡು ಇದ್ದು, ತತಃ-ಅನಂತರದಲ್ಲಿ, ಸರಭಸಸುರತಾಯಾಸಸನ್ನ ಶ್ಲಥಾಂ
ಗಃ-ಸರಭಸ-ಅತಿವೇಗದಿಂದ ಕೂಡೋಣ ಹೇಗೋ ಹಾಗೆ, ಸುರತ-ಸಂಭೋ
ಗದಿಂದ ಉಂಟಾದ, ಆಯಾಸ-ಶ್ರಮದಿಂದ, ಸನ್ನ - ಬಳಲಿದಂಥಾವುಗಳಾದ
ಕಾರಣವೆ, ಶ್ಲಥ-ಶಿಥಿಲವಾದ, ಅಂಗಃ-ಅವಯವಗಳುಳ್ಳಂಥಾ, ಪ್ರೋದ್ಭೂ
ತಾಸಹ್ಯತೃಷ್ಣಃ-ಪ್ರೋದ್ಭೂತ-ಹೆಚ್ಚಾಗಿ ಹುಟ್ಟಿದ, ಅಸಹ್ಯ- ಸಹಿಸುವುದಕ್ಕೆ
ಅಸಾಧ್ಯವಾದ, ತೃಷ್ಣಃ-ಬಾಯಾರಿಕೆಯುಳ್ಳ, ವಿವಿಕ್ತೇ-ನಿಜನವಾಗಿರುವ, ಮ
ಧುಮದನಿರತಃ- ಮದ್ಯಪಾನಮದದಲ್ಲಿ ಆಸಕ್ತನಾದ, ಹರ್ಮ್ಯಶ್ರೇಷ್ಠೇ-
ಉಪ್ಪರಿಗೆಯ ಮೇಲ್ಭಾಗದಲ್ಲಿ, ಕರ್ಕರೀತಃ-ಹೂಜಿಯ ದೆಸೆಯಿಂದ, ಸಂಭೋ
ಗಕ್ಲಾಂತಕಾಂತಾಶಿಥಿಲ ಭುಜಲತಾವರ್ಜಿತಂ-ಸಂಭೋಗ- ಅಭ್ಯಂತರ ಸುರತ
ದಿಂದ, ಕ್ಲಾಂತ-ಬಳಲಿದ, ಕಾಂತಾ-ಸುಂದರ ಸ್ತ್ರೀಯ ಭುಜಲತಾ-ಎಳೆ ಬಳ್ಳಿ
ಗೆ ಸದೃಶವಾದ ಭುಜಗಳಿಂದ, ಆವರ್ಜಿತಂ-ಬಗ್ಗಿಸಲ್ಪಟ್ಟ, ಜ್ಯೋತ್ಸ್ನಾ -
ಬೆಳದಿಂಗಳಿಂದ, ಭಿನ್ನಾ-ಕೂಡಿಕೊಂಡಿರುವ, ಅಚ್ಛ-ಸ್ವಚ್ಛವಾದ, ಧಾರಂ-
ಧಾರೆಯುಳ್ಳ, ಶಾರದಂ-ಶರತ್ಕಾಲದಲ್ಲಿ ಹುಟ್ಟಿದ, ಸಲಿಲಂ-ನೀರನ್ನು, ಮಂ
ದಪುಣ್ಯಃ-ಹೀನ ಭಾಗ್ಯನು, ನಪಿಬತಿ-ಕುಡಿಯುವದಿಲ್ಲ. ||೬೭||

ತಾತ್ಪರ್ಯ—ಈ ಶ್ಲೋಕದಲ್ಲಿ ಶರದೃತುವನ್ನು ವರ್ಣನೆಮಾಡುತ್ತಾ
ನೆ. ಅರ್ಧರಾತ್ರಿವರಿಗೂ ಮಲಗಿಕೊಂಡು ಇದ್ದು ಅರ್ಧರಾತ್ರಿ ಅನಂತರ
ಮೂರನೆಯಾಮದಲ್ಲಿ ಎದ್ದು ಅತಿವೇಗದಿಂದ ಸುರತವನ್ನು ಮಾಡಿ ಆಯಾ
ಸಾಂಗನಾಗಿಯೂ ಮಧುಪಾನ ಮದರಿಂದ ಕೂಡಿದವನಾಗಿಯೂ ನಿಜನ
ವಾದ ಉಪ್ಪರಿಗೆ ಮೇಲೆ ಮಲಗಿ ಅಭ್ಯಂತರ ಸುರತದಿಂದ ಸೋತುಹೋದ
ಬಳ್ಳಿಗೆ ಸಮಾನವಾದ ಭುಜಗಳಿಂದ ಅಂದರೆ ಕೈಯಿಂದ ಹೂಜಿಯಲ್ಲಿ ಚಂ
ದ್ರಕಿರಣದಿಂದ ಅತಿನಿರ್ಮಲವಾದ ನೀರು ಧಾರೆಯನ್ನು ಪ್ರಿಯತಮಳು ಬಿ
ಡುತಿರುವ ಇಂಥಾ ಶರತ್ಕಾಲದ ಉದಕವನ್ನು ಭಾಗ್ಯವಂತನಾದವನು ಕು
ಡಿಯುತ್ತಾನೆ. ಪುಣ್ಯಹೀನನಿಗೆ ದೊರೆಯುವದಿಲ್ಲ ಮೂರನೆಯಾಮದಲ್ಲಿ
ಸುರತಾಭಿಲಾಷೆ ಹೇಳಿದ್ದರಿಂದ ಈ ನಾಯಕನು ಕಾಮತಂತ್ರ ಕಳಾಭಿ
ಜ್ಞನೆಂತಲೂ ನಾಯಕಿಯು ಶಂಖಿನಿಜಾತಿ ಸ್ತ್ರೀಯೆಂತಲೂ ರತಿಗ್ರಂಥದ
ಲ್ಲಿ ಹೇಳಿಇದೆ.

ಶ್ಲೋ|| ರಮಯತಿ ಚಿತ್ತವೃತ್ತೀಯೇ ಶಂಖಸೀಕರವಾದ್ಯಭಾವಂ | ಗಮಯತಿರ ಮಣಿಯಾಂಪದಿ ನೀಂತುರ್ಯಯಾಮೇ|| ಇತಿ ಲಕ್ಷಣಾತ್|| ಮೇಲೆ ಹೇಳಲ್ಪಟ್ಟ ಉದಕವು ಹಂಸೋದಕವೆನ್ನಿಸುವದು. ಲಕ್ಷಣಂತು ದ್ರವ್ಯ ರತ್ನ ಮಾಲಾಯಾ || ವಹ್ನಿತಪ್ತಮಹಿಮಾಂಶುರಶ್ಮಿಭಿಶ್ಶೀತಮಂಬುಶಶಿರಶ್ಮಿ ಭಿರ್ನಿಶಿ | ಏವಮೇವತದಹರ್ನಿಶಂಸ್ಥಿತಂ ತಚ್ಚಹಂಸಜಲನಾಮಕಂಮ್ಮೃತಂ || ಈ ಉದಕಪಾನದಿಂದ ಸಂಪತ್ತು ಕಾಂತಿ ಇವುಗಳು ಉಂಟಾಗುತ್ತವೆ. ಪ್ರಸಾದತಂತ್ರಿದೋಷಘ್ನಂ ಹೃದ್ಯಂಲಘುಂಚಶೀತಲಂ | ವೃಷಂವು ನೋಪರಂಸ್ವಾದು ವಿಷಘ್ನಂ ಕಾಂತಿಕೃತ್ಪರಂ || ಇತಿ ಲಕ್ಷಣಾತ್ || ಸ್ರಗ್ಧರಾ ವೃತ್ತಂ. ||೯೬||

ಶ್ಲೋ|| ಹೇಮಂತೇದಧಿ ದುಗ್ಧಸರ್ಪಿರಶನಾಮಾಂಜಿಷ್ಠವಾ
ಸೋಭೃತಃಕಾಶ್ಮೀರದ್ರವಸಾಂದ್ರದಿಗ್ಧವಪುಷಃಖಿನ್ನಾ
ವಿಚಿತ್ರೈರತೈಃ || ವೃತ್ತೋರುಸ್ತನಕಾಮಿನೀಜನಕೃ
ತಾಶ್ಲೇಷಾಗೃಹಾಭ್ಯಂತರೇತಾಂಬೂಲೀದಳಪೂಗಪೂರಿ
ತಮುಖಾಧನ್ಯಾಸ್ಸುಖಂಶೇರತೇ ||೯೭||

ಟೀಕು || ಹೇಮಂತೇ-ಹಿಮಂತರುತುವಿನಲ್ಲಿ, ದಧಿದುಗ್ಧಸರ್ಪಿರಶನಾಃ-ದಧಿ ಮೊಸರು, ದುಗ್ಧ-ಹಾಲು, ಸರ್ಪಿಃ-ತುಪ್ಪ ಇವೆ ಅಶನಾಃ - ಮುಖ್ಯ ಭೋಜನಗಳಾಗಿವುಳ್ಳ, ಮಾಂಜಿಷ್ಠವಾಸೋಭೃತಃ-ಮಾಂಜಿಷ್ಠ-ಕೆಂಪುಬಣ್ಣವುಳ್ಳ, ವಾಸಃ-ವಸ್ತ್ರಗಳನ್ನು, ಭೃತಃ-ಹೊದೆದುಕೊಂಡು ಇರುವ, ಕಾಶ್ಮೀರದ್ರವಸಾಂದ್ರದಿಗ್ಧವಪುಷಃ- ಕಾಶ್ಮೀರದ್ರವ - ಕುಂಕುಮಕೇಸರದಿಂದ, ಸಾಂದ್ರ-ಒತ್ತಾಗಿ, ದಿಗ್ಧ-ಲೇಪನೆಮಾಡಲ್ಪಟ್ಟವಪುಷಃ-ಶರೀರಗಳುಳ್ಳ, ವಿಚಿತ್ರೈಃ-ನಾನಾವಿಧಗಳಾದ,ರತೈಃ-ಬಾಹ್ಯಾಭ್ಯಂತರಸುರತಗಳಿಂದ, ಖಿನ್ನಾಃ-ಬಳಲಿರುವ, ಗೃಹಾಭ್ಯಂತರೇ-ಗೃಹ-ಮನೆಗಳ, ಅಭ್ಯಂತರೇ - ಒಳಗಡೆಯು ಲ್ಲಿ, ವೃತ್ತೋರುಸ್ತನಕಾಮಿನೀಜನಕೃತಾಶ್ಲೇಷಾಃ - ವೃತ್ತ-ಗುಂಡಗಿರುವ, ಊರು-ತೊಡೆಗಳು, ಸ್ತನ-ಕುಚಗಳೂ ವುಳ್ಳ, ಕಾಮಿನೀಜನ - ಸ್ತ್ರೀಜನಗಳಿಂದ ಕೃತ-ಮಾಡಲ್ಪಟ್ಟ, ಅಶ್ಲೇಷಾಃ-ಆಲಿಂಗನೆಯುಳ್ಳ, ತಾಂಬೂಲೀದಳಪೂಗಪೂರಿತಮುಖಾಃ-ತಾಂಬೂಲೀದಳ- ತಾಂಬೂಲಪರ್ಣದಿಂದಲೂ, ಪೂಗ-ಅಡಕೆಗಳಿಂದಲೂ, ಪೂರಿತ- ತುಂಬಲ್ಪಟ್ಟ, ಮುಖಾಃ- ಮುಖಗಳುಳ್ಳ,

ಧನ್ಯಾಃ-ಪುಣ್ಯಶಾಲಿಗಳು, ಸುಖಂಯಥಾತಥಾ-ಸುಖವಾಗೋಣ, ಹೇಗೋ-ಹಾಗೆ, ಶೇರತೇ-ಶಯನ ಮಾಡುತ್ತಾರೆ, ||೯೭||

ತಾತ್ಪರ್ಯ—ಈ ಶ್ಲೋಕದಲ್ಲಿ ಹೇಮಂತಋತುವನ್ನು ವರ್ಣಿಸುತ್ತಾನೆ ಅದು ಹೇಗೆಂದರೆ:—ಹೇಮಂತ ಋತುವಿನಲ್ಲಿ ಪುಣ್ಯಶಾಲಿಗಳಾದ ಪುರುಷರು ಮೊಸರೂ ಹಾಲು ತುಪ್ಪ ಈ ಮುಂತಾದ ಪದಾರ್ಥಗಳನ್ನು ಭೋಜನಮಾಡಿಕೊಂಡು ಮನೆಯ ಒಳಭಾಗದ ಅಂತರ್ಗೃಹಗಳಲ್ಲಿ ಶಾಲೂಮೊದಲಾದ ಕೆಂಪುಬಣ್ಣದ ವಸ್ತ್ರಗಳನ್ನು ಧರಿಸಿಕೊಂಡು ಕುಂಕುಮ ಕೇಸರೀ ಮಿಶ್ರವಾದ ಗಂಧವನ್ನು ಒತ್ತಾಗಿ ಶರೀರಕ್ಕೆ ಲೇಪನಮಾಡಿಕೊಂಡು ದಿವ್ಯವಾದ ತಾಂಬೂಲವನ್ನು ಹಾಕಿಕೊಂಡು ಸ್ತ್ರೀಯರುಗಳೊಡನೆ ನಾನಾವಿಧವಾದ ರತಿಸುಖವನ್ನು ಅನುಭವಿಸಿ ಆನೆಸೊಂಡಿಲದಹಾಗೆ ಗುಂಡಗೂ ಮೃದುವಾಗಿಯೂ ಇರುವ ತೊಡೆಗಳು ಗುಂಡಗೆಯಿರುವ ಅಂಗಗಳುಳ್ಳ ಸ್ತ್ರೀಯರುಗಳನ್ನು ಆಲಿಂಗನೆ ಮಾಡಿಕೊಂಡು ಪುಣ್ಯಶಾಲಿಗಳು ಸುಖವಾಗಿ ಮಲಗಿ ಕೊಳ್ಳುತ್ತಾರೆಂದು ತಾತ್ಪರ್ಯ—ಶಾರ್ದೂಲ ವಿಕ್ರೀಡಿತವೃತ್ತಂ. ||೯೭||

ಶ್ಲೋ|| ಪ್ರೋದ್ಯತ್ಪ್ರೌಢಪ್ರಿಯಂಗುದ್ಯುತಿಭೃತಿವಿಕಸತ್ಕುಂ
ದಮಾದ್ಯದ್ದ್ವಿರೇಫೇಕಾಲೇಪ್ರಾಲೇಯ ವಾತಪ್ರಚಲವಿ
ಲಸಿತೋದಾರಮಂದಾರಧಾಮ್ನಿ || ಯೇಷಾಂನೋಕಂ
ಠಲಗ್ನಾಕ್ಷಣಮಪಿತುಹಿನಕ್ಷೋದದಕ್ಷಾ ಮೃಗಾಕ್ಷೀತೇ
ಷಾ ಮಾಯಾಮಯಾಮಾಯಮಸದನ ಸಮಾಯಾ
ಮಿನೀಯಾತ್ರಿಯಾನಾಂ ||೯೮||

ಟೀಕು | ಪ್ರೋದ್ಯತ್ಪ್ರೌಢ ಪ್ರಿಯಂಗುದ್ಯುತಿ ಭೃತಿ · ಪ್ರೋದ್ಯತ್-ಉದಿತ್ವರಗಳಿಂದ, ಪ್ರೌಢ-ಪ್ರವೃತ್ತಗಳಾದ, ಪ್ರಿಯಂಗು - ಪ್ರಿಯಂಗು ಫಲಗಳ, ದ್ಯುತಿ-ಕಾಂತಿಯನ್ನು, ಭೃತಿ-ಧರಿಸಿಕೊಂಡಿರುವ, ವಿಕಸತ್ಕುಂದ ಮಾದ್ಯದ್ದ್ವಿರೇಫೆ-ವಿಕಸತ್-ಅರಳಿದಂಥ, ಕುಂದ-ಜಾಲಾರದ ಹೂವಿನ ವಾಸನೆಯಿಂದ, ಮಾದ್ಯತ್-ಮದವನ್ನು ಹೊಂದಿದ, ದ್ವಿರೇಫೆ- ಭ್ರಮರಗಳುಳ್ಳ ಪ್ರಾಲೇಯವಾತ ಪ್ರಚಲವಿಲಸಿತೋದಾರಮಂದಾರಧಾಮ್ನಿ · ಪ್ರಾಲೇಯ-ಹಿಮಸಂಬಂಧವಾದ, ವಾತ-ಗಾಳಿಗಳಿಂದ, ಪ್ರಚಲ - ಚಂಚಲವಾದದ್ದಾದ

ಕಾರಣವೆ, ವಿಕಸಿತ-ಅರಳಿದ, ಉದಾರ-ಉತ್ಕೃಷ್ಟವಾದ, ಮಂದಾರ-ಪಾರಿಜಾತ ಪುಷ್ಪಗಳಿಗೆ, ಧಾಮ್ನಿ-ಮನೆಯಾಗಿವುಳ್ಳ, ಕಾಲೇ-ಹಿಮಂತ ರುತುಕಾಲವಲ್ಲಿ, ಯೇಷಾಂ- ಯಾವ ಯೌವನ ಪುರುಷರುಗಳಿಗೆ, ತುಹಿನಕ್ಷೋದದಕ್ಷಾ-ತುಹಿನ-ಹಿಮದ, ಕ್ಷೋದ-ನಾಶಮಾಡೋಣದರಲ್ಲಿ, ದಕ್ಷಾ-ಸಮರ್ಥವಾದ, ಮೃಗಾಕ್ಷೀ - ಜಿಂಕೆಯಕಣ್ಣಿನಂತೆ ಕಣ್ಣುಗಳುಳ್ಳ ಸುಂದರಿಯು, ಕ್ಷಣಮಪಿ-ಒಂದು ಕ್ಷಣಕಾಲವಾದರೂ, ಕಂಠಾಲಗ್ನಾ ನಭೀ-ಕುತ್ತಿಗೆಯನ್ನು ಆಲಿಂಗನೆ ಮಾಡಿಕೊಳ್ಳುವದಿಲ್ಲವೊ, ತೇಷಾಂಯೂನಾಂ-ಅಂಥಾ ಯೌವ್ವನ ಪುರುಷರಿಗೆ, ಆಯಾಮಯಾಮಾ-ಆಯಾಮ-ದೀರ್ಘವಾದ, ಯಾಮಾ-ಜಾವಗಳುಳ್ಳ, ಯಾಮಿನೀ-ರಾತ್ರಿಯು, ಯಮಸದನಸಮಾ-ಯಮಲೋಕಕ್ಕೆ ಸಮಾನವಾದದ್ದಾಗಿ, ಯಾತಿ-ಹೊಂದುತ್ತದೆ, ||೯೭||

ತಾತ್ಪರ್ಯ—ಈ ಶ್ಲೋಕದಲ್ಲಿ ಹಿಮಂತರುತುವನ್ನು ವರ್ಣಿಸುತ್ತಾನೆ ಅದು ಹೇಗೆಂದರೆ:—ಅಧಿಕವಾದ ಪ್ರಿಯಂಗುವಿನ ಕಾಂತಿಯನ್ನು ಧರಿಸಿರುವ ಜಾಲಂಧರದ ಹೂವಿನ ವಾಸನೆಯಿಂದ ಮದವನ್ನು ಹೊಂದಿದ ಭ್ರಮರಗಳುಳ್ಳ ಶೀತವಾದ ಗಾಳಿಬೀಸೋಣದರಿಂದ ಅರ್ಲ್ಲಾಡಿ ಅರಳಿದ ಅಂದವಾದ ಮಂದಾರಪುಷ್ಪಗಳಿಗೆ ಸ್ಥಾನವಾದ ಹಿಮಂತರುತುವಿನಲ್ಲಿ ಯಾವ ಯೌವ್ವನಪುರುಷರುಗಳಿಗೆ ಹಿಮದಶೀತವನ್ನು ಹೋಗಲಾಡಿಸುವದರಲ್ಲಿ ಸಮರ್ಥಳಾದ ಸುಂದರಾಕ್ಷಿಯು ಕಂಠಾಲಿಂಗನವು ಒಂದುಕ್ಷಣವಾದರೂ ಇರುವದಿಲ್ಲವೊ ಅಂಥಾ ಯೌವನಪುರುಷರಿಗೆ ದೀರ್ಘಕಾಲ ಯಾಮಗಳುಳ್ಳ ರಾತ್ರಿಕಾಲವು ಕಳೆಯುವದಕ್ಕೆ ಯಮಲೋಕವೋಪಾದಿಯಲ್ಲಿ ಕಷ್ಟವಾಗುವದು. ಆದರೆ ಹಿಮಂತರುತುವಿನಲ್ಲಿ ಉಷ್ಣವು ಸ್ತ್ರೀಯರುಗಳ ಸ್ತನದುರ್ಗದಲ್ಲಿ ವಾಸವಾಗುತ್ತಾ ಇರುತ್ತೆ ಅಂಥಾ ಸ್ತ್ರೀಯರುಗಳನ್ನು ಆಲಿಂಗನೆ ಮಾಡಿಕೊಂಡರೆ ಶೀತನಿವಾರಣೆಯಾಗಿ ಸುಖವುಂಟಾಗುವದೆಂದು ಕಾಮಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ಹಿಮಂತರುತುವಿನಲ್ಲಿ ಸ್ತ್ರೀಯರುಗಳ ಆಲಿಂಗನೆವುಳ್ಳ ಯೌವ್ವನ ಪುರುಷರಿಗೆ ಅತ್ಯಂತ ಸುಖವಾಗಿರುವದು. ಅದುಯಿಲ್ಲದ ಯೌವನ ಪುರುಷರುಗಳಿಗೆ ಹಿಮಕಾಲದ ರಾತ್ರಿಗಳು ಕಳೆಯುವಾಗ್ಯೆ ಯಮಲೋಕದ ಯಾತನೆಯಂತೆ ಇರುವದೆಂದು ತಾತ್ಪರ್ಯ (ಅತ್ರಾನುಪ್ರಾಸೋಪಮೇ ಸ್ರಗ್ಧರಾವೃತ್ತ ||) ||೯೮||

ಶ್ಲೋ॥ ಚುಂಬಂತೋ ಗಂಡಭಿತ್ತೀರಲಕವತಿಮುಖೇಸೀತ್ಕೃ
ತಾನ್ಯಾದಧಾನಾವಕ್ಷಸ್ಸೂತ್ಕಂಚುಕೇಷುಸ್ತನಭರಪು
ಲಕೋದ್ಭೇದಮಾಪಾದಯಂತಃ ॥ ಊರೂನಾಕಂಪ
ಯಂತಃಪೃಥುಜಘನತಟಾತ್ಸ್ರಂಸಯಂತೋಂಶು
ಕಾನಿವ್ಯಕ್ತಂಕಾಂತಾಜನಾನಾಂವಿಟಚರಿತಭೃತಶ್ಶೈ
ಶಿರಾವಾಂತಿವಾತಾಃ ॥೯೯॥

ಟೀಕು ॥ ಕಾಂತಾಜನಾನಾಂ-ಸ್ತ್ರೀಯರುಗಳ, ಗಂಡಭಿತ್ತೀಃ-ಭಿತ್ತಿಸದೃ
ಶವಾದ ಕಪೋಲಪ್ರದೇಶಗಳನ್ನು, ಚುಂಬಂತಃ-ಚುಂಬಿಸುತ್ತಾ ಇರುವ, ಅಲ
ಕವತಿ-ಮುಂಗುರುಳುಗಳುಳ್ಳ, ಮುಖೇ-ಮುಖದಲ್ಲಿ, ಸೀತ್ಕೃತಾನಿ-ಸೀತ್ಕಾ
ರಗಳನ್ನು, ಆದಧಾನಾಃ-ಉಂಟುಮಾಡುತ್ತಲಿರುವ, ಉತ್ಕಂಚುಕೇಷು-ತೆಗೆ
ಯಲ್ಪಟ್ಟ ರವಕೆಗಳುಳ್ಳ, ವಕ್ಷಸ್ಸು-ವಕ್ಷಸ್ಥಳಗಳಲ್ಲಿ, ಸ್ತನಭರಪುಲಕೋ
ದ್ಭೇದಂ-ಸ್ತನಭರ - ಪೀವರಗಳಾದ ಕುಚಪ್ರದೇಶಗಳಲ್ಲಿ, ಪುಲಕೋದ್ಭೇ
ದಂ-ಪುಲಕೋದ್ಗಮವನ್ನು, ಆಪಾದಯಂತಃ - ಉಂಟು ಮಾಡುತ್ತಲಿರುವ,
ಊರೂ-ತೊಡೆಗಳನ್ನು, ಆಕಂಪಯಂತಃ- ನಡುಗಿಸುತ್ತಲಿರುವ, ಪೃಥು
ಜಘನತಟಾತ್-ಪೃಥು-ವಿಸ್ತಾರವಾದ, ಜಘನ- ಕಟಿಪುರೋಭಾಗದ, ತಟಾ
ತ್-ಪ್ರದೇಶದ ದೆಸೆಯಿಂದ, ಅಂಶುಕಾನಿ-ವಸ್ತ್ರಗಳನ್ನು, ಸ್ರಂಸಯಂತಃ ಎಳೆ
ಯುತ್ತಲಿರುವ, ವಿಟಚರಿತಭೃತಃ-ವಿಟ- ವಿಟಪುರುಷರ, ಚರಿತ-ಚರಿತ್ರೆಯ
ನ್ನು, ಭೃತಃ-ಧರಿಸಿರುವ, ಶೈಶಿರಾಃ-ಶಿಶಿರ ಋತುವಿನಲ್ಲಿ ಹುಟ್ಟಿದ, ವಾತಾಃ-
ಗಾಳಿಗಳು, ವಾಂತಿ-ಬೀಸುತ್ತವೆ, ॥೯೯॥

ತಾತ್ಪರ್ಯ — ಈ ಶ್ಲೋಕದಲ್ಲಿ ಶಿಶಿರಋತುವನ್ನು ವರ್ಣಿಸುತ್ತಾನೆ
ಅದು ಹೇಗೆಂದರೆ:— ಈ ಶಿಶಿರಋತುವಿನಲ್ಲಿ ಹುಟ್ಟಿದ ಗಾಳಿಗಳು ವಿಟಪುರು
ಷರೋಪಾದಿಯಲ್ಲಿ ಚರಿತ್ರೆಯಂ ಮಾಡುತ್ತವೆ. ಹೇಗೆಂದರೆ ಗಾಳಿಯು
ಸ್ತ್ರೀಯರುಗಳ ಕೆಂನೆಯಮೇಲೆ ಬೀಸುತ್ತದೆ. ವಿಟರು ವಿಸ್ತಾರವಾಗಿ
ರುವ ಸ್ತ್ರೀಯರುಗಳ ಕಪೋಲಗಳನ್ನು ಚುಂಬಿಸುತ್ತಾರೆ ಅಥವಾ ಮು
ತ್ತಿಟ್ಟುಕೊಳ್ಳುತ್ತಾರೆ ಮತ್ತು ಮುಂಗುರುಳುಗಳಿಂದ ಕೂಡಿದ ಮುಖದಲ್ಲಿ
ಅಧರ ಪಾನಸಮಯದಲ್ಲಿ ಮಾಡುವ ದಂತಕ್ಷತಗಳಿಂದ ಸೀತ್ಕಾರವನ್ನು
ಉಂಟುಮಾಡುತ್ತವೆ ವಿಟರು ಸ್ತ್ರೀಯರುಗಳ ಕಂಚುಕವನ್ನು ತೆಗೆದು ಅದರ

ವಕ್ಷಸ್ಥಳದಲ್ಲಿ ಕೈಯಿಟ್ಟು ಕುಚಮರ್ದನ ಮಾಡೋಣದರಿಂದ ಅಕಾಲದಲ್ಲಿ ರೋಮಾಂಚಗಳು ಉಂಟಾಗುತ್ತವೆ. ಸ್ತ್ರೀಯರುಗಳಿಗೆ ರತಿಕರಯಿಲ್ಲದ ಕಾಲದಲ್ಲಿ ಈ ಗಾಳಿಯು ಬೀಸಿದರೆ ಚಳಿಗೆ ಮೈಮೇಲೆ ಕೂದಲುಗಳು ಮೇಲಕ್ಕೆ ಏಳುತ್ತವೆ. ವಿಟರು ಸ್ತ್ರೀಯರುಗಳ ತೊಡೆಗಳನ್ನು ಅಲ್ಲಾಡಿಸುತ್ತಾರೆ. ಈ ಗಾಳಿಯಿಂದ ನಡುಗುತ್ತದೆ. ಮತ್ತು ರತಿಮಾಡುವದಕ್ಕೋಸ್ಕರ ಜಘನವಸ್ತ್ರವನ್ನು ಬಿಚ್ಚುತ್ತಾರೆ. ಈ ಗಾಳಿಗಳು ಸ್ತ್ರೀಯರುಗಳು ಉಟ್ಟಸೀರೆಗಳನ್ನು ಮೇಲಕ್ಕೆ ಹಾರಿಸುತ್ತವೆ ಈರೀತಿ ವಿಟಗಾರರೋಪಾದಿಯಲ್ಲಿರುವ ಗಾಳಿಗಳು ಬೀಸುತ್ತವೆ ಎಂದು ತಾತ್ಪರ್ಯ-- ಅತ್ರವಿಟಚೇಂತಭೃತ ಇತ್ಯತ್ರ) ಉಪಮಾಲಂಕಾರಸ್ಯ ಚಮತ್ಕೃತಿತ್ವೇನ ಅಭಿವ್ಯಂಜಕೋತ್ಪ್ರೇಕ್ಷಾಯಾ ಸಂಕೀರ್ಯತೇ ಶಾರ್ದೂಲವಿಕ್ರೀಡಿತವೃತ್ತಂ

ಶ್ಲೋ|| ಕೇಶಾನಾಕುಲಯನ್ದೃಶೋಮುಕುಳಯನ್ವಾಸೋಬ
ಲಾದಾಕ್ಷಿಪನ್ನಾತನ್ವನ್ ಪುಲಕೋದ್ಗಮಂ ಪ್ರಕಟಯ
ನ್ನಾವೇಗಕಂಪಂಶನೈಃ || ವಾರಂವಾರಮುದಾರಸೀ
ತ್ಕೃತಕೃತೋ ದಂತಚ್ಛದಾನ್ಪೀಡಯನ್ಪ್ರಾಯ
ಶ್ಶೈಶಿರ ಏಷ ಸಂಪ್ರತಿ ಮರುತ್ಕಾಂತಾಸುಕಾಂತಾ
ಯತೇ ||೧೦೦||

ಟೀಕು || ಕೇಶಾನಾಕುಲಯನ್ - ಕೇಶಾನ್- ಕೂದಲುಗಳನ್ನು, ಆಕುಲಯನ್-ವ್ಯಾಕುಲಗಳಾಗಿ ಮಾಡುತ್ತಾ ಇರುವ, ಅಥವಾ ಕೆದರುತ್ತಾ ಇರುವ, ದೃಶಃ ದೃಷ್ಟಿಗಳನ್ನು, ಮುಕುಳಯನ್-ಮುಚ್ಚುತ್ತಾ ಇರುವ, ವಾಸಃ-ಜಘನವಸ್ತ್ರಗಳನ್ನು ಬಲಾತ್ - ಬಲಾತ್ಕಾರದ ದೆಸೆಯಿಂದ, ಆಕ್ಷಿಪನ್-ಎಳೆಯುತ್ತಾ ಇರುವ, ಪುಲಕೋದ್ಗಮಂ-ರೋಮಾಂಚವನ್ನು, ಆತನ್ವನ್-ಉಂಟುಮಾಡುತ್ತಲಿರುವ, ಆವೇಗಕಂಪಂ - ಆವೇಗ ಉದ್ವೇಗದಿಂದ ಕಂಪಂ-ನಡುಗೋಣವನ್ನು, ಶನೈಃ-ಮೆಲ್ಲಗೆ, ಪ್ರಕಟಯನ್- ಉಂಟುಮಾಡುತ್ತಾ ಇರುವ, ವಾರಂವಾರಂ-ಬಾರಿಬಾರಿಗೂ, ಉದಾರಸೀತ್ಕೃತಕೃತಃ-ಉದಾರ-ಹೆಚ್ಚಾಗಿ, ಸೀತ್ಕೃತ-ಸೀತ್ಕಾರವನ್ನು ಕೃತಃ-ಮಾಡುತ್ತಲಿರುವ, ದಂತಚ್ಛದಾನ್-ಅಧರೋಷ್ಠಗಳನ್ನು, ಪೀಡಿಯನ್-ಪೀಡಿಸುತ್ತಾ ಇರುವ, ಪ್ರಾಯಃ- ಬಹು

ಪ್ರಕಾರವಾಗಿ, ಸಂಪ್ರತಿ- ಈಗ, ಏಷಶೈಶಿರಃ-ಈ ಶಿಶಿರ ರುತುವಿನಲ್ಲಿ, ಹುಟ್ಟಿದ, ಮರುತ್-ವಾಯುವು, ಕಾಂತಾಸು- ಸ್ತ್ರೀಯರುಗಳಲ್ಲಿ, ಕಾಂತಾಯತೇ - ವಿಟನೋಪಾದಿಯಲ್ಲಿ ಆಚರಿಸುತ್ತದೆ, ||೧೦೦||

ತಾತ್ಪರ್ಯ—ಹಿಮದಿಂದ ಕೂಡಿದ ಶಿಶಿರುತುವಿನಲ್ಲಿ ಹುಟ್ಟಿದವಾಯುವು ಸ್ತ್ರೀಯರುಗಳಲ್ಲಿ ವಿಟಗಾರರೋಪಾದಿಯಲ್ಲಿ ಶೃಂಗಾರಕಾರ್ಯಗಳನ್ನು ಮಾಡುತ್ತೆ ವಿಟಗಾರನು ಸ್ತ್ರೀಯರುಗಳ ತಲೆಕೂದಲುಗಂಟನ್ನು ಕೆದರುತ್ತಾರೆ ರತಿಮಾಡುವಾಗ್ಯೆ ಕೂದಲುಗಂಟು ಬಿಚ್ಚಿಹೋಗುವಂತೆ ರತಿಮಾಡುತ್ತಾರೆ ಈಗಾಳಿಯುಬೀಸಿ ಗಂಟುಗಳು ಕೆದರುತ್ತೆ. ವಿಟನು ಅಧರೋಷ್ಟಪಾನದಿಂದ ಸೀತ್ಕಾರವನ್ನು ಉಂಟುಮಾಡಿ ದಂತಕ್ಷತಗಳನ್ನು ಮಾಡುತ್ತಾನೆ. ಗಾಳಿತಡೆಯಲಾರದ ಸೀತ್ಕಾರಮಾಡುತ್ತಾ ಹಲ್ಲನ್ನು ಕಡಿದು ತುಟಿಗಳನ್ನು ಗಾಯಮಾಡಿಸುತ್ತದೆ. ಚಳಿಯಿಂದ ಮೈಯಲ್ಲಿ ಗುಗ್ಗುರುನೆಸಕೊಳ್ಳುತ್ತದೆ. ವಿಟರು ಸ್ತ್ರೀಯರುಗಳಲ್ಲಿ ರತ್ಯನುಕೂಲದ ಬಾಹ್ಯಸುರತದಿಂದ ಹೇಗೆ ರೋಮಾಂಚವನ್ನುಂಟು ಮಾಡುತ್ತಾರೋ ಹಾಗೆ ಶಿಶಿರಮರುತು ಸ್ತ್ರೀಯರುಗಳಲ್ಲಿ ವಿಟಗಾರನೋ ಎಂಬುವಹಾಗೆ ಶೃಂಗಾರಚೇಷ್ಟೆಗಳನ್ನು ಮಾಡುತ್ತದೆ ಯೆಂದುಭಾವವು. ಅತ್ರ ಉಪಮಾಲಂಕಾರಗರ್ಭಿತ ಪ್ರಾಯಶ್ಶಬ್ದಾಭಿವ್ಯಂಜಿತೋ ತ್ಪ್ರೇಕ್ಷಯಾಸಂಕೀರ್ಯತೇ ತದುಕ್ತಮಾಚಾರ್ಯದಂಡಿನಾ | ಮನ್ಯೇಶಂಕೇಧ್ರುವಂನೂನಂಪ್ರಾಯಇತ್ಯೇವಮಾದಿಭಿಃ | ಉತ್ಪ್ರೇಜಾವ್ಯಂಜತೇಶಬ್ದೈರಿ ವಶಬ್ದೋಪಿತಾದೃಶ || ಇತಿ ಶಾರ್ದೂಲವಿಕ್ರೀಡಿತವೃತ್ತಂ || ||೧೦೦||

ಇತಿ ಶ್ರೀಭರ್ತೃಹರಿ ವಿರಚಿತೇ ಸಂಜೀವಿನೀ ಟೀಕಾಸಮೇತ

## ಶೃಂಗಾರ ಶತಕಂ ಸಂಪೂರ್ಣಂ.



ಶ್ರೀರಸ್ತು.

ಶ್ರೀ ಗಣೇಶಶಾರದಾ ಗುರುಭ್ಯೋನಮಃ.

ಸಂಜೀವಿನೀಟೀಕಾ ಸಮೇತ ಭರ್ತೃಹರಿ ಸುಭಾಷಿತೇ

# ವೈರಾಗ್ಯ ಶತಕ ಪ್ರಾರಂಭಃ

ತತ್ರತೃಷ್ಣಾಪ ಪದ್ಧತಿಂ ಲಿಖಿತುಮಾರಭ್ಯತೇತಸ್ಯ ನಿರ್ವಿಘ್ನಮಸ್ತು.

---

ಶ್ಲೋ॥ ಚೂಡೋತ್ತಂಸಿತ ಚಂದ್ರಚಾರುಕಲಿಕಾಚಂಚಚ್ಛಿ
ಖಾಭಾಸ್ವರೋಲೀಲಾದಗ್ಧವಿಲೋಲಕಾಮಶಲಭಶ್ಶ್ರೇ
ಯೋದಶಾಗ್ರೇಸ್ಫುರ॥ ಅಂತಸ್ಸ್ಫೂರ್ಜದಪಾರಮೋ
ಹತಿಮಿರಪ್ರಾಗ್ಭಾರಮುಚ್ಚಾಟಯಂಶ್ಚೇತಸ್ಸದ್ಮನಿ
ಯೋಗಿನಾಂವಿಜಯತೇಜ್ಞಾನಪ್ರದೀಪೋಹರಃ ॥೧॥

ಟೀಕು ॥ ಚೂಡೋತ್ತಂಸಿತ ಚಂದ್ರಚಾರುಕಲಿಕಾ ಚಂಚಚ್ಛಿಖಾಭಾಸ್ವರಃ-ಚೂಡೋತ್ತಂಸಿತ-ಶಿರೋಭೂಷಣವಾಗಿ ಮಾಡಲ್ಪಟ್ಟ, ಚಂದ್ರ-ಚಂದ್ರನ, ಚಾರು-ಸುಂದರವಾದ, ಕಲಿಕಾ-ರೇಖೆಯಿಂದ, ಅಥವಾ-ಕೋರಕದಿಂದ, ಚಂಚತ್-ಪ್ರಕಾಶಿಸುತ್ತಿರುವ, ಶಿಖಾ-ಜಟಾಭಾರದಿಂದ, ಭಾಸ್ವರಃ-ಪ್ರಕಾಶಿಸುತ್ತಲಿರುವ, ಲೀಲಾದಗ್ಧವಿಲೋಲಕಾಮಶಲಭಃ-ಲಿಲಾ- ವಿಲಾಸದಿಂದ, ದಗ್ಧ-ಸುಡಲ್ಪಟ್ಟ, ವಿಲೋಲ-ಚಂಚಲನಾದ ಮನ್ಮಥನೆಂಬುವ, ಶಲಭಃ-ಈಚಲ ಹುಳುವುಳ್ಳ, ಶ್ರೇಯೋದಶಾಗ್ರೇ-ಶ್ರೇಯಃ-ಶುಭಗಳ, ದಶಾ- ಅವಸ್ಥೆಗಳ, ಅಗ್ರೇ-ಮುಂಭಾಗದಲ್ಲಿ, ಸ್ಫುರನ್-ಪ್ರಕಾಶಿಸುತ್ತಲಿರುವ, ಅಂತಃಸ್ಫೂರ್ಜದ ಪಾರಮೋಹತಿಮಿರ ಪ್ರಾಗ್ಭಾರ ಮುಚ್ಚಾಟಯನ್ - ಅಂತಃ-ಒಳಗಡೆಯಲ್ಲಿ, ಸ್ಫೂರ್ಜತ್ - ಪ್ರಕಾಶಮಾನವಾದ, ಅಪಾರ - ಹೆಚ್ಚಾದ, ಮೋಹ-ಅಜ್ಞಾನವೆಂಬುವಂಥ, ತಿಮಿರ-ಅಂಧಕಾರದ, ಪ್ರಾಗ್ಭಾರಂ-ಹೆಚ್ಚಾದ ಭಾರವನ್ನು, ಅಥವಾ-ವ್ಯಾಪ್ತಿಯನ್ನು, ಉಚ್ಚಾಟಯನ್- ಹೋಗಲಾಡಿಸುತ್ತಲಿರುವ, ಯೋಗಿನಾಂ ಯೋಗಿ ಜನಗಳ, ಚೇತಸ್ಸದ್ಮನಿ ಚೇತಃ-ಮ

ನಸ್ಸೆಂಬುವಂಥ, ಸದ್ಮನಿ-ಮನೆಯಲ್ಲಿ, ಜ್ಞಾನಪ್ರದೀಪಃ-ಜ್ಞಾನ-ಮೋಕ್ಷೈಕ ಬುದ್ಧಿಗೆ, ಪ್ರದೀಪಃ-ದೀಪಸ್ವರೂಪನಾದ, ಅಥವಾ-ತೇಜೋರೂಪನಾದ, ಹರಃ-ಈಶ್ವರನು, ವಿಜಯತೇ-ಸರ್ವೋತ್ತಮನಾಗಿ ಪ್ರಕಾಶಿಸುತ್ತಲಿದ್ದಾನೆ ||

ತಾತ್ಪರ್ಯ.—ಈ ಶ್ಲೋಕದಲ್ಲಿ ಸಕಲ ವಿದ್ಯಾಧಿದೇವತೆಯಾದ ಪರಮೇಶ್ವರನನ್ನು ಪ್ರಥಮದಲ್ಲಿ ಸ್ತುತಿಮಾಡಿ ವೈರಾಗ್ಯಶತಕವನ್ನು ಹೇಳುತ್ತಾನೆ. ಬಾಲಚಂದ್ರನಿಂದ ಪ್ರಕಾಶಿಸುತ್ತಿರುವ ಜಟಾಭಾರವುಳ್ಳ, ಲೀಲಾಮಾತ್ರದಿಂದ ದಹಿಸಲ್ಪಟ್ಟ ಚಂಚಲನಾದ ಮನ್ಮಥನುಳ್ಳ, ಭಕ್ತರಿಗೆ ಶುಭವನ್ನುಂಟು ಮಾಡುವವರಲ್ಲಿ ಅಗ್ರೇಸರನಾದ, ಯೋಗಿಜನಗಳ ಹೃದಯಾರವಿಂದದಲ್ಲಿ ತೇಜೋರೂಪನಾದ ಪರಮೇಶ್ವರನು ಸರ್ವೋತ್ತಮನಾಗಿ ಇದ್ದಾನೆ. ಅಂದರೆ ಈ ಶ್ಲೋಕದಲ್ಲಿ ಚಾರುಚಂದ್ರ ಕಳಾಧರನೆಂಬುವದರಿಂದ ಭಕ್ತರ ಸಂತಾಪ ನಿವಾರಣೆಮಾಡುತಾನೆಂದು ಹೇಳಿದ ಹಾಗಾಯಿತು. ಲೀಲಾದಗ್ಧ ಮನ್ಮಥನೆಂಬುವದರಿಂದ ತನ್ನ ಭಕ್ತರ ದುರ್ವಿಷಯಾಸಕ್ತಿಯನ್ನು ತಪ್ಪಿಸಿ ಸುಜ್ಞಾನವನ್ನುಂಟು ಮಾಡುವನಾಗಿದ್ದಾನೆಂದು ಹೇಳಿದ ಹಾಗಾಯಿತು. ಈರೀತಿ ಮಂಗಳಾಚರಣೆಯಿಂದು ಪ್ರವಕ್ತ್ರ ಅಧ್ಯೇತೃಗಳಿಗೆ ಶ್ರೇಯಃ ಪರಂಪರೆಯುಂಟಾಗುತ್ತದೆ. ಎಂಬುತಾತ್ಪರ್ಯವು. ಸ್ವಭಾವೋಕ್ತಿರಲಂಕಾರಃ ||೧||

ಶ್ಲೋ|| ಭ್ರಾಂತಂದೇಶಮನೇಕದುರ್ಗವಿಷಮಂಪ್ರಾಪ್ತಂನಕಿಂ
ಚಿತ್ಫಲಂತ್ಯಕ್ತ್ವಾಜಾತಿಕುಲಾಭಿಮಾನಮುಚಿತಂಸೇ
ವಾಕೃತಾನಿಷ್ಫಲಾ || ಭುಕ್ತಂಮಾನವಿವರ್ಜಿತಂಪರ
ಗೃಹೇಷ್ವಾಶಂಕಯಾಕಾಕವತ್ತೃಷ್ಣೇಜೃಂಭಸಿಪಾಪ
ಕರ್ಮಪಿಶುನೇನಾದ್ಯಾಪಿಸಂತುಷ್ಯಸಿ ||೨||

ಟೀಕು || ಅನೇಕದುರ್ಗವಿಷಮಂ ಅನೇಕ-ಅಪರಿಮಿತಳಾದ, ದುರ್ಗ-ಗಂತುಮಶಕ್ಯವಾದ, ವಿಷಮಂ-ನಿಮ್ನೋನ್ನತಗಳುಳ್ಳ, ದೇಶಂಪ್ರತಿ-ದೇಶಗಳನ್ನು ಕುರಿತು, ಭ್ರಾಂತಂ-ತಿರಗೋಣವಾಯಿತು, ಫಲಂ-ಪ್ರಯೋಜನವು ಕಿಂಚಿತ್-ಸ್ವಲ್ಪವಾದರೂ, ನಪ್ರಾಪ್ತಂ-ಹೊಂದಲ್ಪಡಲಿಲ್ಲ, ಉಚಿತಂ-ಯೋಗ್ಯವಾದಂಥ, ಅಥವಾ-ಅನುರೂಪವಾದ, ಜಾತಿಕುಲಾಭಿಮಾನಂ-ಜಾತಿ-ಬ್ರಾಂ

ಹಣಾದಿ ಜಾತಿಯೇನು, ಕುಲ-ಸದ್ವಂಶವು ಇವುಗಳ, ಅಭಿಮಾನಂ - ವಿಶ್ವಾಸ ವನ್ನು, ತ್ಯಕ್ತ್ವಾಬಿಟ್ಟಾಗ್ಯದರೂ ನಿಷ್ಫಲಾ ಫಲಶೂನ್ಯವಾದ, ಸೇವಾ-ಪರಸೇವೆಯು, ಕೃತಾ- ಮಾಡಲ್ಪಟ್ಟಿತು, ಪರಗೃಹೇಷು - ಅನ್ಯರ ಮನೆಗಳ ಲ್ಲಿ, ಆಶಂಕಯಾ-ಹೆದರಿಕೆಯಿಂದ, (ಅಥವಾ ಆಸೆಯಿಂದ) ಮಾನವಿವರ್ಜಿತಂ ಯಥಾತಥಾ- ಮಾನ-ಅಭಿಮಾನವು, ವಿವರ್ಜಿತಂ ಯಥಾತಥಾ ಬಿಡಲ್ಪಡೋ ಣಾ ಹೇಗೋ ಹಾಗೆ, ಕಾಕವತ್ -ಕಾಗೆಯೋಪಾದಿಯಲ್ಲಿ, ಭುಕ್ತಂ- ಭೋಜನ ಮಾಡಲ್ಪಟ್ಟಿತು, ಪಾಪಕರ್ಮಪಿಶುನೇ-ಪಾಪಕರ್ಮ-ಪಾಪಕಾರ್ಯದಲ್ಲಿ, ಪಿಶು ನೇ-ಸೂಚಕವಾದ, ಹೇತೃಷ್ಣೇ-ಎಲೈ ಆಶೆಯೆ, ಅದ್ಯಾಪಿ ಇದುವರಿಗೂ ನಸಂ ತುಷ್ಯಸಿ-ಸಂತುಷ್ಟವಾದದ್ದಾಗಲಿಲ್ಲ, ||೨||

ತಾತ್ಪರ್ಯ—ಲೋಕದಲ್ಲಿ ಉಂಟಾಗುವ ಅನುರಾಗಕ್ಕೆ ಆಸೆಯೆಂಬು ವದೇ ಮೂಲಕಾರಣವಾಗಿರುವದರಿಂದ ಆಶಾನಿಂದನೆ ಮಾಡಿದ ಹೊರತು ವೈರಾಗ್ಯ ಹುಟ್ಟುವದಿಲ್ಲವೆಂದು ಮೊದಲು ಆಶೆಯನ್ನು ಸಂಬೋಧನೆಮಾಡಿ ಒಂಭತ್ತು ಶ್ಲೋಕಗಳಿಂದ ಹೇಳುತ್ತಾನೆ. ತೃಷ್ಣಾಕೃತ ಆಶಾಕಾರ್ಯಗ ಳು ನಿಷ್ಫಲವೆಂಬುವದನ್ನು ಮೂರುಶ್ಲೋಕದಿಂದ ಹೇಳುತ್ತಾನೆ. ದ್ರವ್ಯ ದ ಆಶೆಯಿಂದ ಬೆಟ್ಟಗುಟ್ಟಗಳುಳ್ಳ ಹಳ್ಳದಿಂಣೆಗಳುಳ್ಳ ಅನೇಕದೇಶಗಳನ್ನು ತಿರಿಗಿದ್ದಾಯಿತು. ನಿನು ತಿರುಗಿದಾಗ್ಯೂ ಪ್ರಯೋಜನವಿಲ್ಲದೆ ಹೋಯಿತು ತನ್ನ ಯೋಗ್ಯವಾದ ಜಾತಿ ಮತ್ತು ವಂಶಗಳಲ್ಲಿ ಅಭಿಮಾನವನ್ನು ಅಂದರೆ ಆಶೆಯನ್ನು ಬಿಟ್ಟು ನೀಚಜನಗಳ ಸೇವೆಮಾಡಿದ್ದಾಯಿತು. ಅದರಿಂದಲೂ ಫಲವಿಲ್ಲದೆ ಹೋಯಿತು. ಮಾನವನ್ನು ಬಿಟ್ಟು ಪರರಮನೆಯಲ್ಲಿ ಕಾಗೆಗ ಳೋಪಾದಿಯಲ್ಲಿ ತಿಂದು ಹೊಟ್ಟೆತುಂಬಿಸಿಕೊಂಡದ್ದಾಯಿತು. ಎಲೈ ಆಶೆ ಯೆ ನೀನು ಪಾಪಕಾರ್ಯದಲ್ಲಿ ವಿಜೃಂಭಿಸುತ್ತಲಿದ್ದೀಯಲ್ಲಾ ಇನ್ನಾದರೂ ಸಂತುಷ್ಟವಾಗುವದಿಲ್ಲವೆ ಇನ್ನಾದರೂ ಸಂತುಷ್ಟವಾಗಿ ಇರು ಎಂದು ತಾತ್ಪರ್ಯ. ||೨||

ಶ್ಲೋ|| ಉತ್ಖಾತಂನಿಧಿಶಂಕಯಾಕ್ಷಿತಿತಲಂಧ್ಮಾತಾಗಿರೇರ್ಧಾತ ತವೋನಿಸ್ತೀರ್ಣಸ್ಸರಿತ್ಪತಿರ್ನೃಪಪತಯೋಯ ತ್ನೇನಸಂತೋಷಿತಾಃ || ಮಂತ್ರಾರಾಧನತತ್ಪರೇಣ

ಮನಸಾನೀತಾಸ್ಸ್ಮಶಾನೇನಿಶಾಃಪ್ರಾಪ್ತಃಕಾಣವರಾ
ಟಕೋಽಪಿನಮಯಾತೃಷ್ಣೇಸಕಾಮಾಭವ ॥ ೩ ॥

**ಟೀಕು ॥** ನಿಧಿಶಂಕಯಾ-ನಿಧಿ- ನಿಕ್ಷೇಪದ, ಶಂಕಯಾ-ಆಶೆಯಿಂದ, ಕ್ಷಿತಿತಲಂ-ಕ್ಷಿತಿ- ಭೂಮಿಯು, ತಲಂ-ಪ್ರದೇಶವು, ಉತ್ಖಾತಂ- ಅಗೆಯಲ್ಪಟ್ಟಿತು, ಗಿರೇಃ-ಪರ್ವತದ, ಧಾತವಃ-ಗೈರಿಕಾದಿ ಧಾತುಗಳು, ಧ್ಮಾತಾಃ - ಸುವರ್ಣ ಮಾಡುವ ಆಸೆಯಿಂದ ಕರಗಿಸಲ್ಪಟ್ಟವು, ಸರಿತಾಂ-ನದಿಗಳಿಗೆ, ಪತಿಃ-ದೊರೆಯಾದ ಸಮುದ್ರವು, ನಿಸ್ತೀರ್ಣಃ-ದಾಟಲ್ಪಟ್ಟಿತು, ನೃಪತಯಃ-ರಾಜರುಗಳು, ಯತ್ನೇನ ಪ್ರಯತ್ನದಿಂದ- ಸಂತೋಷಿತಾಃ-ಸಂತೋಷಿಸಲ್ಪಟ್ಟರು, ಸ್ಮಶಾನೇ-ಸ್ಮಶಾನದಲ್ಲಿ, ಮಂತ್ರಾರಾಧನ ತತ್ಪರೇಣ-ಮಂತ್ರ - ಮಂತ್ರಗಳನ್ನು ಆರಾಧನ ಸೇವಿಸೋಣದರಲ್ಲಿ, ತತ್ಪರೇಣ-ಆಸಕ್ತವಾದ, ಮನಸಾ- ಬುದ್ಧಿಯಿಂದ, ನಿಶಾಃ-ರಾತ್ರಿಗಳು, ನೀತಾಃ-ಕಳೆಯಲ್ಪಟ್ಟವು, ಮಯಾ-ನನ್ನಿಂದ, ಕಾಣವರಾಟಕೋಽಪಿ-ಕಾಣ ಕುರುಡಾದ, ವರಾಟಕೋಽಪಿ-ಕವಡೆಯೂ ಕೂಡ, ನಪ್ರಾಪ್ತಂ-ಹೊಂದಲ್ಪಡಲಿಲ್ಲ, ಹೇತೃಷ್ಣೇ-ಎಲೈ ಆಶೆಯೆ, ಸಕಾಮಾ-ಇಷ್ಟಾರ್ಥ ಪೂರ್ತಿಯಾದದ್ದು, ಭವ-ಆಗು, ॥೩॥

ತಾತ್ಪರ್ಯ—ಈ ಶ್ಲೋಕದಲ್ಲೂ ಆಶೆಯನ್ನು ನಿಂದಿಸುತ್ತಾನೆ ಅದು ಹೇಗೆಂದರೆ:--ಹಣಸಿಕ್ಕುವದೆಂಬುವ ಆಶೆಯಿಂದ ಇಟ್ಟಿಗೆಯಿಂದ ಕಟ್ಟಿದ್ದ ಗೋಡೆಗಳನ್ನೆಲ್ಲಾ ಅಗೆದು ನೋಡಿದ್ದಾಯಿತು. ಹಣದಾಶೆಯಿಂದ ಸಮುದ್ರದಾಟಿಹೋಗಿ ನೋಡಿದ್ದಾಯಿತು. ದೊರೆಗಳನ್ನು ಒಳ್ಳೆಯ ಮಾತುಗಳಿಂದ ಸಂತೋಷ ಪಡಿಸಿದ್ದಾಯಿತು. ದೇವತೆಗಳನ್ನು ಸ್ವಾಧೀನಮಾಡಿಕೊಳ್ಳಬೇಕೆಂದು ರಾತ್ರಿಕಾಲಗಳಲ್ಲಿ ಸ್ಮಶಾನಗಳಲ್ಲಿ ಇದ್ದದ್ದಾಯಿತು. ಇದರಿಂದ ಅಂದರೆ ಮನೆಯನ್ನು ಅಗೆದದ್ದರಿಂದಲು ಸಮುದ್ರ ದಾಟಿಹೋಗಿ ನೋಡಿದ್ದರಿಂದಲು ಒಳ್ಳೆಮಾತುಗಳಿಂದ ದೊರೆಗಳನ್ನು ಮಂತ್ರಜಪಗಳಿಂದ ದೇವತೆಗಳನ್ನು ಸ್ವಾಧೀನಮಾಡಿಕೊಳ್ಳಲು ರಾತ್ರಿಕಾಲದಲ್ಲಿ ಸ್ಮಶಾನದಲ್ಲಿ ಇದ್ದದ್ದರಿಂದಲೂ ಸಂತೋಷಪಡಿಸಿದ್ದರಿಂದಲು ಒಂದು ಕುರುಡುಕವಡೆಮಾತ್ರವೂ ಪ್ರಯೋಜನವಿಲ್ಲದೆ ಹೋಯಿತು ಇದರಿಂದ ಎಲೈ ಆಶೆಯೇ ಈಗಲಾದರೂ ಮನಸ್ಸು ನಿಶ್ಚಿಂತವಮಾಡಿಕೊಂಡು ಇರುಎಂದು ತಾತ್ಪರ್ಯ. ॥೩॥

ಶ್ಲೋ॥ ಖಲಾಲಾಪಾಸ್ಸೋಢಾಃಕಥಮಪಿತದಾರಾಧನಪರೈರ್ನಿ
ಗೃಹ್ಯಾಂತರ್ಬಾಷ್ಪಂಹಸಿತಮಪಿಶೂನ್ಯೇನಮನಸಾ ॥

ಕೃತೋವಿತ್ತಸ್ತಂಭಪ್ರತಿಹತಧಿಯಾಮಂಜಲಿರಪಿತ್ವ
ಮಾಶೇವೆ ಮೋಘಾಶೇಕಿಮಪರಮತೋನರ್ತಯಸಿಮಾಂ॥

ಟೀಕು ॥ ಖಲಾಲಾಪಾಃ-ಖಲ- ದುರ್ಜನರ, ಆಲಾಪಾಃ-ದುಷ್ಟಭಾಷಣೆ ಗಳು, ತದಾರಾಧನಪರೈಃ-ತತ್-ಅದುಷ್ಟಮನುಷ್ಯರ, ಆರಾಧನ- ಸೇವಿಸೋಣದಲ್ಲಿ, ಪರೈಃ-ಆಸಕ್ತರಾದ, ಅಸ್ಮಾಭಿಃ-ನಮ್ಮಗಳಿಂದ, ಕಥಮಪಿ-ಅತಿ ಪ್ರಯಾಸದಿಂದ, ಸೋಢಾಃ-ಸಹಿಸುವದಕ್ಕೆ ಯೋಗ್ಯವಾದವುಗಳು ಆದವು, ತಥಾ-ಹಾಗೆ, ಶೂನ್ಯೇನ ಉತ್ಸಾಹವಿಲ್ಲದೆಯಿರುವ, ಮನಸಾಪಿ-ಮನಸ್ಸಿನಿಂದಲು, ಬಾಷ್ಪಂ-ಶೋಕಾಂಬುವನ್ನು, ಅಂತಃ- ಒಳಗೆ, ನಿಗೃಹ್ಯ- ಅಡಗಿಸಿಕೊಂಡು, ಹಸಿತಂ-ಹಾಸ್ಯವಾಡಲಾಯಿತು ವಿತ್ತಸ್ತಂಭಪ್ರತಿಹತಧಿಯಾ, ವಿತ್ತ- ಧನದಿಂದ ಉಂಟಾದ, ಸ್ತಂಭ-ಜಡತ್ವದಿಂದ, ಪ್ರತಿಹತ- ಹೊಡೆಯಲ್ಪಟ್ಟ, ಧಿಯಾ-ಬುದ್ಧಿಯಿಂದ, ಅಂಜಲಿರಪಿ - ಕೈಜೋಡಿಸಿ ಮುಗಿಯೋಣವು ಕೂಡ, ಕೃತಃ-ಮಾಡಲ್ಪಟ್ಟಿತು, ಮೋಘಾಶೇ-ಮೋಘ, ನಿರರ್ಥಕವಾದ, ಆಶೇ-ಮನೋರಥವುಳ್ಳ- ಆಶೆ ಎಲೈ ಅಪೇಕ್ಷೆಯೇ, ತ್ವಂ - ನೀನು, ಅತಃ ಪರಂ-ಇದಕಿಂತಲು, ಕಿಂ-ಯಾತಕ್ಕೋಸ್ಕರ. ಮಾಂ-ನನ್ನನ್ನು, ನರ್ತಯಸಿ ಕುಣಿಸುತ್ತಲಿದ್ದೀ, ॥ ೪ ॥

ತಾತ್ಪರ್ಯ— ಈ ಶ್ಲೋಕದಲ್ಲು ಆಶೆಯನ್ನು ನಿಂದೆಮಾಡುತಾನೆ. ಅದು ಹೇಗಂದರೆ:—ದುರ್ಜನಸೇವೆಮಾಡಿ ಅವರು ಆಡುವಂತೆ ದುಷ್ಟವಾದ ಮಾತುಗಳನ್ನು ಸಹಿಸಿಕೊಂಡದ್ದಾಯಿತು ಇದೂಅಲ್ಲದೆ ಅವರುಗಳು ಅನ್ನುವ ಮಾತುಗಳಿಂದ ಉಂಟಾದ ಕಣ್ಣೀರುಗಳನ್ನು ಸಹ ಒಳಗಡೆಯಲ್ಲಿಯೆ ಅಡಗಿಸಿಕೊಂಡು ಮನಸ್ಸಿಲ್ಲದೆ ಇದ್ದಾಗ್ಯೂ ಮೇಲುಗಡೆಯಲ್ಲಿ ಕಾರ್ಯಹಾನಿಯು ಭಯದಿಂದ ನಗುತಾ ಮಂದಹಾಸ ಮಾಡಿಕೊಂಡಿದ್ದಾಯಿತು ದ್ರವ್ಯದಿಂದ ಉಂಟಾದ ಆಶೆಯಿಂದ ಶೂನ್ಯವಾದ ಬುದ್ಧಿಯಿಂದ ಕೈಗಳ ಜೋಡಿಸಿ ಮುಗಿದದ್ದಾಯಿತು, ಇಲ್ಲಿ ಇಷ್ಟು ಮಾಡಿದಾಗ್ಯೂ ಮನೋರಥ ಪ್ರಾಪ್ತಿಯಾಗಲಿಲ್ಲ ಎಲೈ ಆಶೆಯೇ ಈ ಅವಮಾನಗಳಿಗಿಂತಲು ಇನ್ನು ಏನು ಪ್ರಯೋಜನಕ್ಕೋಸ್ಕರ ನನ್ನನ್ನು ಯಾತಕ್ಕೆ ಕೆಡಿಸುತ್ತಿ. ಕೆಡಿಸಬೇಡ ಇನ್ನಾದರು ನಿರಾಶೆಯಾಗಿರು ಎಂದು ತಾತ್ಪರ್ಯ. ಶಿಖರಿಣೀವೃತ್ತಂ ರಸ್ಯೈರುದ್ರೈಶ್ಛಿನ್ನಾ ಯಮನಸಭಲಗಶ್ಶಿಖರಿಣೀತಿಲಕ್ಷಣಾತ್. ॥೪॥

ಶ್ಲೋ ॥ ಅವಿನಾಪಾಂಪಾ ಣಾನಾಂತುಲಿತಬಿಸಿನೀಪತ್ರ ಪಯ

ಸಾಂಕೃತೇ ಕಿಂನಾಸ್ಮಾಭಿರ್ವಿಗಳಿತವಿವೇಕೈರ್ವ್ಯವ
ಸಿತಂ ॥ ಯದಾಢ್ಯಾನಾಮಗ್ರೇದ್ರವಿಣಮದನಿಸ್ಸಂ
ಜ್ಞಮನಸಾಂಕೃತಂಮನಸಾಂಕೃತಂಮಾನವಿ ಡ್ರೈ
ರ್ನಿಜಗುಣಕಥಾಪಾತಕಮಪಿ ॥ ೫ ॥

ಟೀಕು ॥ ತುಲಿತ ಬಿಸಿನೀಪತ್ರಪಯಸಾಂ-ತುಲಿತ-ಸರಿಹೋಲಿಸಲ್ಪಟ್ಟ, ಬಿಸಿನೀಪತ್ರ - ಕಮಲರೇಖೆಯಮೇಲೆಯಿರುವ ಪಯಸಾಂ ಉದಕಗಳುಳ್ಳ, ಅಮೀಷಾಂ ಈ ಪ್ರಾಣನಾಂಕೃತೆ, ಪ್ರಾಣಸಂರಕ್ಷಣಾರ್ಥವಾಗಿ - ಯತ್-ಯಾವ ಕಾರಣದ ದೆಸೆಯಿಂದ - ದ್ರವಿಣಮದನಿಸ್ಸಂಜ್ಞಮನಸಾಂ - ದ್ರವಿಣ ಮದ-ದ್ರವ್ಯಮದದಿಂದ. ನಿಸ್ಸಂಜ್ಞ-ಜಡವಾದ. ಮನಸಾಂ - ಮನಸ್ಸುಳ್ಳ, ಆಢ್ಯಾನಾಂ-ಧನಿಕರ, ಅಗ್ರೇ-ಮುಂದುಗಡೆಯಲ್ಲಿ. ಮಾನವ್ರೀಡೈಃ-ನಿರ್ಲಜ್ಜೆಯುಳ್ಳ, ಅಸ್ಮಾಭಿಃ-ನಮ್ಮಗಳಿಂದ, ನಿಜಗುಣಕಥಾಪಾತಕಮಪಿಃ ನಿಜ, ತನ್ನ-ಗುಣಕಥಾ- ಗುಣಪ್ರಶಂಸೆಯಿಂದುಂಟಾದ, ಪಾತಕ ಮಪಿ- ಪಾಪವು ಕೂಡ, ಕೃತಂ-ಮಾಡಲ್ಪಟ್ಟಿತು, ಕಿಂತು-ಮತ್ತೇನೆಂದರೋ ವಿಗಳಿತವಿವೇಕೈಃ-ವಿಗಳಿತ-ಜಾರಿಹೋದ ವಿವೇಕೈಃ-ವಿಚಾರವುಳ್ಳ, ಅಸ್ಮಾಭಿಃ-ನಮ್ಮಗಳಿಂದ, ಕಿಂ-ಯಾವ ದುಷ್ಕರ್ಮತಾನೇ, ನವ್ಯವಸಿತಂ - ಪ್ರಯತ್ನಮಾಡಲ್ಪಡಲಿಲ್ಲ, ॥೫॥

ತಾತ್ಪರ್ಯ— ತಾವರೆಹೂವಿನ ರೇಕಿನಮೇಲೆ ಇರುವ ನೀರಿನೋಪಾದಿಯಲ್ಲಿ ಅತಿಚಂಚಲವಾಗಿರುವ ಕರ್ತವ್ಯಾ ಕರ್ತವ್ಯ ವಿಚಾರಶೂನ್ಯವಾಗಿ ಕ್ಷಣಭಂಗುರವಾದ ಪ್ರಾಣಕ್ಕೋಸ್ಕರ ಯಾವಯಾವ ಕೆಲಸವನ್ನು ತಾನೆ ಮಾಡಲಿಲ್ಲ. ಎಲ್ಲಾ ನಮ್ಮ ಕೆಲಸಗಳನ್ನೂ ಮಾಡಿದ್ದಾಯಿತು ಇದೂ ಅಲ್ಲದೆ ಧನಮದದಿಂದ ಜಡೀಭೂತವಾದ ಮನಸ್ಸುಳ್ಳ ಧನವಂತರ ಮುಂದುಗಡೆ ಪಾಪವಾದದ್ದಾದರೂ ಆತ್ಮಪ್ರಶಂಸೆಯನ್ನು ಮಾಡಿಕೊಂಡದ್ದಾಯಿತು. ಏನು ಮಾಡಿದಾಗ್ಯೂ ಪ್ರಯೋಜನವಿಲ್ಲದೆ ಹೋಯಿತು. ಎಲೈ ಆಶೆಯೇ ಇನ್ನಾದರೂ ಇಂಥಾ ಕೆಲಸಗಳಿಗೆ ಹೋಗದೆ ಸ್ವಸ್ಥವಾಗಿರು ಎಂದು ತಾತ್ಪರ್ಯವು ವೃತ್ತಂಪೂರ್ವವತ್. ॥೫॥

ಶ್ಲೋ॥ ಕ್ಷಾಂತಂನಕ್ಷಮಯಾಗೃಹೋಚಿತಸುಖಂತ್ಯಕ್ತಂನ
ಸಂತೋಷತಸ್ಸೋಢಾದುಸ್ಸಹಶೀತವಾತತಪನಕ್ಲೇ

ಶಾನತಪ್ತಂತಪಃ ॥ ಧ್ಯಾತಂವಿತ್ತಮಹರ್ನಿಶಂನಿಯ
ಮಿತಪ್ರಾಣೈರ್ನಶಂಭೋಃಪದಂತತ್ತತ್ಕರ್ಮಕೃತಂ
ಯದೇವಮುನಿಭಿಸ್ತೈಸ್ತೈಃಫಲೈರ್ವಂಚಿತಾಃ ॥ ೬ ॥

ಟೀಕು ॥ ಏವಂ-ಈ ರೀತಿಯಾದ ಮಾರ್ಗದ ದುರ್ಜನಗಳು, ಕ್ಷಮಯಾ-ಶಾಂತಿ ಗುಣದಿಂದ, ನಕ್ಷಾಂತಂ - ಕ್ಷಮಿಸಲ್ಪಡಲಿಲ್ಲ, ಗೃಹೋಚಿತಸುಖಂ - ಗೃಹ-ಮನೆಯಲ್ಲಿರುವ, ಉಚಿತ-ಯೋಗ್ಯವಾದ, ಸುಖಂ-ಮೃಷ್ಟಾನ್ನಭೋಜನಾದಿ ಸುಖವು, ಸಂತೋಷತಃ-ಸಂತೋಷದ ದೆಸೆಯಿಂದ, ನತ್ಯಕ್ತಂ-ಬಿಡಲ್ಪಡಲಿಲ್ಲ, ದುಸ್ಸಹ ಶೀತವಾತತಪನಕ್ಲೇಶಾಃ-ದುಸ್ಸಹ -ಸಹಿಸುವದಕ್ಕೆ ಆಗದಂಥ, ಶೀತ-ಛಳಿ, ವಾತ-ಘಾಳಿ, ತಪನ-ಬಿಸಲು ಇವುಗಳಿಂದ ಉಂಟಾದ ಕ್ಲೇಶಾಃ-ದುಃಖಗಳ ಸೋಢಾಃ-ಸಹಿಸಲ್ಪಟ್ಟವು, ತಪಃ-ಕೃಚ್ಛ್ರಚಾಂದ್ರಾಯಣಾದಿ ತಪಸ್ಸು, ನತಪ್ತಂ-ಆಚರಿಸಲ್ಪಡಲಿಲ್ಲ, ನಿಯಮಿತಪ್ರಾಣೈಃ- ನಿಯಮಿತ-ನಿಗ್ರಹಿಸಲ್ಪಟ್ಟ, ಪ್ರಾಣೈಃ-ಪ್ರಾಣವಾಯುಗಳಿಂದ, ವಿತ್ತಂ-ದ್ರವ್ಯವು, ಅಹರ್ನಿಶಂ-ಹಗಲು ರಾತ್ರಿಗಳಲ್ಲಿಯು, ಧ್ಯಾತಂ- ಧ್ಯಾನಮಾಡಲ್ಪಟ್ಟಿತು, ಶಂಭೋಃ-ಪಶುಪತಿಯ, ಪದಂ-ಪಾದವು, ನಧ್ಯಾತಂ-ಧ್ಯಾನಮಾಡಲ್ಪಡಲಿಲ್ಲ, ಮುನಿಭಿಃ-ಋಷಿಗಳಿಂದ, ಯದ್ಯತ್ಕರ್ಮ-ಯಾವಯಾವ ಕಾರ್ಯಗಳು, ಕೃತಂ-ಮಾಡಲ್ಪಟ್ಟಿತೊ, ತತ್ತತ್ಕರ್ಮ-ಆಯಾಕೆಲಸಗಳು, ಕೃತಂ-ಮಾಡಲ್ಪಟ್ಟಿತು, ತೈಸ್ತೈಃ-ಆಯಾ, ಫಲೈಃ-ಪ್ರಯೋಜನಗಳಿಂದ, ವಂಚಿತಾಃ-ವಂಚಿಸಲ್ಪಟ್ಟವು, ಅಥವಾ ಮರೆಮಾಡಲ್ಪಟ್ಟವು. ॥೬॥

ತಾತ್ಪರ್ಯ—ಈ ಶ್ಲೋಕದಲ್ಲಿ ಋಷಿಗಳಂತೆ ಉತ್ತಮವಾದ ಕರ್ಮವನ್ನು ಆಚರಿಸಿದಾಗ್ಯೂ ಅನ್ಯಥಾ ಮನೋವೃತ್ತಿಯಿಂದ ಋಷಿಗಳು ಹೊಂದಿದಂಥ ಮಹತ್ಫಲಗಳನ್ನು ನಾವುಗಳು ಹೊಂದಿದವರಾಗಲಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ:—ಕ್ಷಮಾಗುಣವನ್ನು ಹೊಂದಿಇದ್ದದ್ದು ಪರರ ಭಯದಿಂದಲೇ ಹೊರತು ಶಾಂತಿ ಗುಣದಿಂದಲ್ಲ. ಮನೆಯಲ್ಲಿರುವ ಮೃಷ್ಟಾನ್ನ ಮೊದಲಾದ ಸುಖವನ್ನುಬಿಟ್ಟು ಅನೇಕದಿನ ಅಡವಿ ಮೊದಲಾದವುಗಳಲ್ಲಿ ಸಂಚರಿಸಿದೆವು. ಕಾಮೋಪಭೋಗಗಳೆಂಬ ವಿಷಯ ನೈರಾಸ್ಯದಿಂದ ತಿರುಗಲಿಲ್ಲ. ಶೀತವಾತಾತಪಗಳೆಂದರೆ ಛಳಿಘಾಳಿ ಬಿಸಿಲು ಇವುಗಳನ್ನು ಸಹಿಸಿದೆವು. ತಪಸ್ಸಿಗೋಸ್ಕರ ಸಹಿಸಲಿಲ್ಲ. ಆಶೆಯಿಂದಲು ಪರಸೇವಾನಿಮಿತ್ತವಾಗಿ ಈರೀತಿ ಮಾಡಿದ್ದಾಯಿತು ಮತ್ತು ದ್ರವ್ಯದ ಆಶೆ

ಯಿಂದ ಹಗಲು ರಾತ್ರಿಯಲ್ಲಿ ಪ್ರಾಣಗಳನ್ನು ಹಿಡಿದುಕೊಂಡು ಉಸುರುಬಿಡದೆ ಹಣವನ್ನು ಧ್ಯಾನಮಾಡಿದೆವು. ಈರೀತಿ ಈಶ್ವರನಪಾದವನ್ನು ಧ್ಯಾನಿಸಲಿಲ್ಲ ಹೀಗೆ ಋಷಿಗಳು ಮಾಡುವಂತೆ ಸ್ವಗೃಹಪುತ್ರಮಿತ್ರಾನ್ನಭೋಜನ ಸ್ರಕ್ಚಂದನಾದಿ ಕಾಮೋಪಭೋಗತ್ಯಾಗಶೀತವಾತಾದಿ ಸಹನೇಂದ್ರಿಯ ಗುಣ ಅಹರ್ನಿಶಧ್ಯಾನಪ್ರಾಣಾಯಾಮ ಯಮನಾದಿ ರೂಪ ಕಾರ್ಯಗಳು ಮಾಡಿದಾಗ್ಯೂ ಇವುಗಳಿಂದ ತಪಸ್ವಿಗಳಾದ ಯೋಗಿಜನಗಳಿಗೆ ಯಾವಯಾವ ಫಲಗಳು ಆಗುವವೋ ಅಂಥಾಫಲಗಳು ಮಾತ್ರ ನಮ್ಮಗಳಿಗೆ ಇಲ್ಲದೆ ಹೋಯಿತು ಅಂದರೆ ಋಷಿಗಳು ಮನಸ್ಸುಪೂರ್ತಿಯಿಂದ ಆಶಾತ್ಯಾಗಮಾಡಿದವರಾದ್ದರಿಂದ ಅವರಿಗೆ ಸ್ವರ್ಗಾಪವರ್ಗದ ಫಲಗಳು ಉಂಟಾದವು. ನಾವು ಧನದಆಶೆಯಿಂದ ಹೆಂಡತಿಮಕ್ಕಳನ್ನು ಬಿಟ್ಟು ಸೀಮೆಸೀಮೆಯನ್ನು ಸುತ್ತಿ ಬಿಸಿಲು ಮಳೆ ಗಾಳಿ ಛಳಿ ಇವುಗಳನ್ನು ನೋಡದೆ ಪರರಸೇವೆಮಾಡಿ ಪ್ರಾಣವನ್ನು ಹಿಡಿದುಕೊಂಡು ಹಗಲುರಾತ್ರಿಗಳಲ್ಲಿ ಹಣವನ್ನೇ ಧ್ಯಾನ ಮಾಡುತ್ತಾ ಇದ್ದೆವು. ನಮ್ಮಗಳಿಗೆ ತಪಸ್ವಿಗಳಿಗೆ ಆಗುವಫಲಗಳು ಆದೀತೆ? ಆಗಲಾರವು. ಆದ್ದರಿಂದ ಎಲೈಆಶೆಯೆ ಇನ್ನಾದರೂ ಸ್ತಿಮಿತವಾಗಿ ಇರು ಚಪಲಪಡಬೇಡವೆಂದು ತಾತ್ಪರ್ಯ. ||೬||

ಶ್ಲೋ|| ಭೋಗಾನಭುಕ್ತಾವಯಮೇವಭುಕ್ತಾಸ್ತಪೋನತಪ್ತಂ
ವಯಮೇವತಪ್ತಾಃ || ಕಾಲೋನಯಾತೋವಯಮೇ
ವಯಾತಾಸ್ತೃಷ್ಣಾನಜೀರ್ಣಾವಯಮೇವಜೀರ್ಣಾಃ||

ಟೀಕು || ಭೋಗಾಃ-ಸ್ರಕ್ಚಂದನವನಿತಾದಿ ಭೋಗಗಳು, ನಭುಕ್ತಾಃ - ಅನುಭವಿಸಲ್ಪಡಲಿಲ್ಲ, ವಯಮೇವ-ನಾವುಗಳೇ, ಭುಕ್ತಾಃ-ದುರಂತ ಚಿಂತನೆ ಯಿಂದ ಗ್ರಾಸಮಾಡಲ್ಪಟ್ಟೆವು. ತಪಃ-ಕೃಛ್ರಚಂದ್ರಾಯಣಾದಿ ತಪಸ್ಸನ್ನು, ನತಪ್ತಂ-ಆಚರಿಸಲ್ಪಡಲಿಲ್ಲ, ವಯಮೇವ-ನಾವುಗಳೆ, ತಪ್ತಾಃ-ದುಃಖಾಗ್ನಿ ಯಿಂದ ತಪಿಸಲ್ಪಟ್ಟೆವು, ಕಾಲಃ-ಸೂರ್ಯರಥಚಕ್ರದಿಂದ ಹುಟ್ಟಿದ ಕಲಾಕಾಷ್ಠಾ ಮುಹೂರ್ತಾದಿ ಕಾಲಗಳು (ಅಥವಾ ಕಾಲವು) ನಯಾತಃ - ಹೋಗಲಿಲ್ಲ, ವಯಮೇವ- ನಾವುಗಳೆ, ಯಾತಾಃ - ಹೋದೆವು ಅಂದರೆ ದೇಹಗೇಹಾದಿಲಂಪಟದಿಂದ-ಅಯುಃ- ಪರಿಮಿತರಾದೆವು, ತೃಷ್ಣಾ ಆಶೆಯು ನಜೀರ್ಣಾ-ಜೀರ್ಣವಾಗಲಿಲ್ಲ, ವಯಮೇವ-ನಾವುಗಳೆ, ಜೀರ್ಣಾಃ - ಜೀರ್ಣಾವಸ್ಥೆಯನ್ನು ಹೊಂದಿದ್ದೇವೆ, ||೭||

ತಾತ್ಪರ್ಯ—ಈ ಶ್ಲೋಕದಲ್ಲಿ ಭೋಗೇಚ್ಛಾವಿಷಯಾನುಭವಸ್ಪೃಹಾನಿವೃತ್ತಿರ್ನಿರ್ಗತಾ ಅತ್ರ ಜರಾದೂಷಣಾಽಭಿನಿವೇಶಪಾರವಶ್ಯೇನೇತ್ಯಮುಕ್ತಂ ಈಶ್ಲೋಕ ಮೊದಲಾಗಿ ಮೂರುಶ್ಲೋಕಗಳಿಂದ ಜರಾವಸ್ಥೆಯನ್ನು ದೂಷಿಸುವದರ ಮೂಲಕ ಆಶೆಯನ್ನು ನಿಂದಿಸುತ್ತಾನೆ ಅದು ಹೇಗಂದರೆ:-ಸ್ರಕ್ಚಂದನವಿಷಯೋಪಭೋಗಾದಿಗಳಂ ಅನುಭವಿಸುವದರ ಒಳಗಾಗಿಯೇ ನಾವೇ ಅಧ್ಯಾತ್ಮಿಕಾದಿ ತಾಪತ್ರಯಲಂಪಟದಿಂದ ನಾನಾವಿಧವ್ಯಸನ ಪರಂಪರೆಗೆ ಸಿಕ್ಕಿ ಭೋಗಿಸಿಹೋದೆವು (ಅಂದರೆ ಹಳದಾಗಿಹೋದೆವು) ಮತ್ತು ಕೃಛ್ರಚಾಂದ್ರಾಯಣಾದಿ ತಪಸ್ಸುಗಳಿಂದ ಶರೀರವನ್ನು ತಪಿಸಲಿಲ್ಲ ಅಪಾಪ್ತಮನೋರಥ ಜನ್ಯಮೋಹಾಗ್ನಿನಿಕರದಿಂದ ತಪಿಸಲ್ಪಟ್ಟೆವು. ಕಾಲವು ಪೂರ್ವದ ಹಾಗೆ ಇದೆ. ಕಾಲವೇನೂ ಹೋಗಲಿಲ್ಲ ಹೀಗೆ ನೋಡುತ್ತಲಿದ್ದಾಗ ಆಯುಸ್ಸು ಮುಗಿಯುವಪರಿಂತ ನಾವೇ ಹೋದಹಾಗೆ ಆಯಿತು. ಆಶೆಗೆ ಮುದುಕತನ ಬರಲಿಲ್ಲ ನಮಗೆ ಮುದಿತನಬಂತು ಎಲೆ ಆಶೆಯೇ ಇನ್ನು ಆಪರೂ ಸ್ವಸ್ಥವಾಗಿ ಇರು ಎಂದು ತಾತ್ಪರ್ಯ ಶಾರ್ದೂಲ ವಿಕ್ರೀಡಿತವೃತ್ತಂ. ॥೭॥

ಶ್ಲೋ॥ ವಳಿಭಿರ್ಮುಖಮಾಕ್ರಾಂತಂಪಲಿತೇನಾಂಕಿತಂಶಿರಃ ॥
ಗಾತ್ರಾಣಿಶಿಥಿಲಾಯಂತೇತೃಷ್ಣೈಕಾತರುಣಾಯತೇ

ಟೀಕು ॥ ಮುಖಂ ಮುಖವು, ವಳಿಭಿಃ ಸುಕ್ಕುಗಳಿಂದ, ಆಕ್ರಾಂತಂ-ಆಕ್ರಮಿಸಲ್ಪಟ್ಟಿತು, (ಅಥವಾ ಆಕ್ರಾಂತಂ ವ್ಯಾಪಿಸಲ್ಪಟ್ಟಿತು) ಶಿರಃ- ತಲೆಯು, ಪಲಿತೇನ-ನರೆಕೂದಲಿನಿಂದ, ಅಂಕಿತಂ-ಗುರುತಾಗಿ ಮಾಡಲ್ಪಟ್ಟಿತು, ಗಾತ್ರಾಣಿ ಶರೀರ ಅವಯವಗಳು, ಶಿಥಿಲಾಯಂತೇ - ಸಡಿಲವಾದಂತೆ ಆಚರಿಸುತ್ತವೆ, ಏಕಾ-ಕೇವಲವಾದ, ತೃಷ್ಣಾ-ಆಶೆಯು ತರುಣಾಯತೇ-ಯೌವ್ವನವುಳ್ಳದ್ದರೋಪಾದಿಯಲ್ಲಿ ಆಚರಿಸುತ್ತದೆ, ॥೮॥

ತಾತ್ಪರ್ಯ—ಈ ಶ್ಲೋಕದಲ್ಲಿ ಅಪರವಯಸ್ಸಿನಿಂದ ತಲೆನೆರೆತುಹೋದರೂ ಆಶೆಮಾತ್ರ ಬಲವಾಗಿದೆ ಎಂಬುವದನ್ನು ವ್ಯಾಜಾಂತರದಿಂದ ಹೇಳುತ್ತಾನೆ ಅದು ಹೇಗಂದರೆ ಮುದುಕತನದಿಂದ ಮುಖವೆಲ್ಲಾ ಸುಕ್ಕುಬಂತು ತಲೆಯಲ್ಲ ನೆರೆಕೂದಲಿನಿಂದ ಬೆಳ್ಳಗೆಆಯಿತು ಶರೀರದ ಅವಯವಗಳೆಲ್ಲಾ ಕೀಲುಗಳು ಸಡಿಲು ಬಿದ್ದುಹೋಯಿತು. ಮುಖ್ಯವಾಗಿ ಆಶೆಗೆಮಾತ್ರ

ವಾರ್ಧಕ್ಯವಿಲ್ಲದೆ ಒಳ್ಳೆಯ ಯೌವನ ಬಂದವನೋಪಾದಿಯಲ್ಲಿ ಕೆಲಸಮಾಡುತ್ತ ಲಿದೆ. ಅಂದರೆ ಆಶೆಗೆ ಮುದುಕತನ ಬರಲಿಲ್ಲ. ಆಶೆಯೆಂಬುವದು ದಿನೇದಿನೇ ಹೆಚ್ಚುತ್ತಾ ಇದೆಯೆಂದು ತಾತ್ಪರ್ಯ. ವೃತ್ತಮನುಷ್ಟುಪ್. ||೮||

ಶ್ಲೋ|| ನಿವೃತ್ತಾ ಭೋಗೇಚ್ಛಾ ಪುರುಷಬಹುಮಾನೋಪಿ ಗಳಿತ
ಸ್ಸಮಾನಾಸ್ಸ್ವರ್ಯಾತಾಸ್ಸಪದಿ ಸುಹೃದೋ ಜೀವಿತ
ಸಮಾಃ || ಶನೈರ್ಯಷ್ಟ್ಯುತ್ಥಾನಂ ಘನತಿಮಿರರು
ದ್ಧೇಚನಯನೇ ಅಹೋ ಮೂಢಃ ಕಾಯಸ್ತದಪಿ ಮರ
ಣಾಪಾಯಚಕಿತಃ || ೯ ||

ಟೀಕು || ಭೋಗ- ವಿಷಯಾನುಭವದ, ಇಚ್ಛಾ- ಆಶೆಯು, ನಿವೃತ್ತಾ- ಕಳೆದುಹೋಯಿತು, ಪುರುಷಬಹುಮಾನೋಪಿ- ಪುರುಷ- ಪುರುಷತನದಿಂದ ಪುಂಟಾದ, ಬಹುಮಾನೋಪಿ-ಗೌರವವು ಕೂಡ, ಗಳಿತಃ - ಹೊರಟುಹೋ ಯಿತು, ಸಮಾನಃ-ಸಮಾನವಯಸ್ಸುಳ್ಳ, ಜೀವಿತಸಮಾಃ ಜೀವಿತ-ಪ್ರಾಣಗ ಳಿಗೆ, ಸಮಾಃ-ಸಮಾನರಾದ, ಸುಹೃದೋಪಿ- ಸ್ನೇಹಿತರೂ ಕೂಡ, ಸಪದಿ- ತತ್ಕ್ಷಣದಲ್ಲಿ-ಸ್ವರ್ಯಾತಾಃ, ಸ್ವರ್- ಸ್ವರ್ಗವನ್ನು, ಯಾತಾಃ-ಹೊಂದಿದ ರು, ಶನೈಃ-ಮೆಲ್ಲಗೆ, ಯಷ್ಟ್ಯುತ್ಥಾನಂ ಯಷ್ಟಿ- ಕೋಲಿನ ಆಶ್ರಯದಿಂದ, ಅಥವಾ ಕೋಲನ್ನ ಊರಿಕೊಂಡು) ಉತ್ಥಾನಂ - ಮೇಲಕ್ಕೇಳೋಣವು, ಪ್ರಾಪ್ತಂ-ಹೊಂದಲ್ಪಟ್ಟಿತು, ತದಪಿ-ಹಾಗಾದಾಗ್ಯೂದರೂ ಕೂಡ, ನಯನೇ ಚ-ನೇತ್ರಗಳು, ಘನತಿಮಿರರುದ್ಧೇ ಘನ-ಸಾಂದ್ರವಾದ, ತಿಮಿರ ಪಾಟಲಾ ಖ್ಯ ನೇತ್ರರೋಗದಿಂದ, ರುದ್ಧೇ ಸತಿ - ಅಡ್ಡಗಟ್ಟಲ್ಪಟ್ಟದ್ದಾಗುತ್ತಿರಲಾಗಿ, ಮೂಢಃ-ಅಜ್ಞಾನವಾದ, ಕಾಯಃ-ಶರೀರವು, ಮರಣಾಪಾಯಚಕಿತಃ-ಮರ ಣಾಪಾಯ-ಜೀವವಿಶ್ಲೇಷದಿಂದ, ಚಕಿತಃ-ಭಯಪಡುವಂಥಾದ್ದು ಭವತಿ- ಆಗುತ್ತೆ, ಅಹೋ-ಆಶ್ಚರ್ಯ ||೯||

ತಾತ್ಪರ್ಯ —ಈ ಶ್ಲೋಕದಲ್ಲಿ ಅಪರವಯಸ್ಸು ಆದಾಗ್ಯೂ ಆಶೆಯಿಂ ದ ದೇಹಾಭಿಮಾನ ಬಿಡಲಿಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂ ದರೆ:-ಕಾನೋಪಭೋಗಗಳು ಕಳೆದುಹೋದವು. ಪ್ರಾಣಕ್ಕೆ ಸಮಾನರಾ ದ ಸ್ನೇಹಿತಜನಗಳು ಕೂಡ ನಾವುಗಳು ನೋಡುತ್ತಾ ಇದ್ದಹಾಗೆ ಸ್ವರ್ಗ ವನ್ನು ಹೊಂದಿದರು ಕೋಲುಗಳನ್ನು ಹಿಡಿದುಕೊಂಡು ಮೇಲಕ್ಕೆ ಏಳಬೇ

ಕಾಯಿತು. ಕೋಲಿನ ಸಹಾಯವಿಲ್ಲದೆ ನಿಳುವದಕ್ಕೆ ಆಗುವದಿಲ್ಲ. ಕಣ್ಣು ಗಳಿಗೆ ಪೊರೆಬಂದು ಕಾಣದಹಾಗೆ ಆಯಿತು ಹಾಗೆಆದಾಗ್ಯೂ ಜೀವಹೋಗುತ್ತದೆ ಯೆಂದು ಭಯಪಡುವುದರ ಮೂಲಕ ಉಂಟಾದ ಮೂ ಢನಾದ ಆಶೆಬಿಡಲಿಲ್ಲ ಆಶ್ಚರ್ಯ ಎಕ್ಕೈಆಶೆಯೇ ಇನ್ನಾದರೂ ಜ್ಞಾನವನ್ನು ತಂದುಕೊಂಡು ಇರುಎಂದು ಭಾವವು. (ಶಿಖರಿಣೀವೃತ್ತಂ) ||೯||

ಶ್ಲೋ|| ಆಶಾನಾಮನದೀಮನೋರಥಜಲಾತೃಷ್ಣಾತರಂಗಾಕ
ಲಾರಾಗಗ್ರಾಹವತೀವಿತರ್ಕವಿಹಗಾಧೈರ್ಯದ್ರುಮ
ಧ್ವಂಸಿನೀ || ಮೋಹಾವರ್ತಸುದುಸ್ತರಾತಿಗಹನಾ
ಪ್ರೋತ್ತುಂಗಚಿಂತಾತಟೀತಸ್ಯಾಃಪಾರಗತಾವಿಶುದ್ಧ
ಮನಸೋನಂದಂತಿಯೋಗೀಶ್ವರಾಃ || ೧೦ ||

ಟೀಕು || ಮನೋರಥ-ಕೋರಿಕೆಗಳೆಂಬ, ಜಲ ಉದಕವುಳ್ಳ, ತೃಷ್ಣಾ ತರಂಗಾಕುಲಾ, ತೃಷ್ಣಾ-ಆಶೆಯೆಂಬುವ, ತರಂಗ- ತೆರೆಗಳಿಂದ, ಆಕುಲಾ- ಕೂಡಿಕೊಂಡಿರುವ, ರಾಗಗ್ರಾಹವತೀ-ರಾಗ. ಅನುರಾಗವೆಂಬುವ, ಗ್ರಾಹ ವತೀ-ಮಕರಗಳುಳ್ಳ. ವಿತರ್ಕವಿಹಗಾ-ವಿತರ್ಕ-ದುರಾಲೋಚನೆಗಳೆಂಬುವ, ವಿಹಗಾ-ಪಕ್ಷಿಗಳುಳ್ಳ. ಧೈರ್ಯದ್ರುಮಧ್ವಂಸಿನೀ-ಧೈರ್ಯ- ಧೀರತ್ವವೆಂ ಬುವ, ದ್ರುಮ-ವೃಕ್ಷಗಳನ್ನು, ಧ್ವಂಸಿನೀ-ನಾಶಮಾಡುತ್ತಲಿರುವ, ಮೋ ಹಾವರ್ತಸುದುಸ್ತರಾ-ಮೋಹ-ವಿಶ್ವಾಸವೆಂಬುವ, ಅವರ್ತ- ಸುಳಿಗಳಿಂದ, ಸುದುಸ್ತರಾ-ದಾಟುವದಕ್ಕೆ, ಆಗದಂಥ, ಅತಿಗಹನಾ, ಅತಿ- ಅತ್ಯಂತವಾಗಿ, ಗಹನಾ-ದೊಡ್ಡದಾದ, ಪ್ರೋತ್ತುಂಗಚಿಂತಾತಟೀ, ಪ್ರೋತ್ತುಂಗ-ಹೆಚ್ಚಾದ, ಚಿಂತಾ-ಯೋಚನೆಯುಂಬುವ, ತಟೀ-ಗಟ್ಟುಗಳುಳ್ಳ, ಆಶಾನದೀ-ಆಶಾ-ಅಪೇ ಕ್ಷೆಯೆಂಬುವ, ನದೀ-ಪ್ರವಾಹವು, ಅಸ್ತೀ-ಇದೆ, ವಿಶುದ್ಧಮನಸಃ-ವಿಶುದ್ಧ- ನಿರ್ಮಲವಾದ, ಮನಸಃ-ಮನಸುಳ್ಳ, ಯೋಗೀಶ್ವರಾಃ-ಯೋಗಿಶ್ರೇಷ್ಠರು ತಸ್ಯಾಃ-ಆ ಆಶಾನದಿಯ, ಪಾರಂಗತಾಃ-ಗಟ್ಟನ್ನು ಹೊಂದಿ, ನಂದಂತಿ-ಸಂ ತೋಷ ಚಿತ್ತರಾಗಿರುತ್ತಾರೆ ||೧೦||

ತಾತ್ಪರ್ಯ— ಈ ಶ್ಲೋಕದಲ್ಲಿ ಆಶೆಯನ್ನು ನದೀರೂಪಕವಾಗಿ ವರ್ಣಿಸುತ್ತಾನೆ; — ಅದು ಹೇಗೆಂದರೆ ಆಶೆವೆಂಬುವನದಿಗೆ ಮನಸ್ಸಿನಲ್ಲಿ ಹುಟ್ಟುವ ಕೋರಿಕೆಯು ನೀರು ತೃಷ್ಣೆಯು ತೆರೆಗಳು ಸ್ತ್ರೀಯರುಗಳಲ್ಲಿ

ಪ್ರವಾಹವೇ ಹುಟ್ಟುವ ಮೋಹವೆ ಮೊಸಳೆ ಮೊದಲಾದ ಜಲಚರಗಳು, ಕಾಮತನ್ತ್ರಾಲೋಚನೆ ಈ ನದಿಗೆ ಪಕ್ಷಿಗಳು, ಧೈರ್ಯಧ್ವಂಸವೆ ವೃಕ್ಷನಾಶ ಕಾರಿಣಿಯಲ್ಲಿ ಹುಟ್ಟು ನಿಶ್ವಾಸವೆ ಸುಳಿಗಳು ಇದು ದುರಂತವಾದದ್ದು. ಮತ್ತು ಹೆಚ್ಚಾದ ಮನ್ಮಥನಿಂದ ಉಂಟಾಗುವ ದಶಾವಸ್ಥೆಯು ಹೆಚ್ಚಾದ ದಡಗಳು. ಇಂಥಾ ಅಶಾನಾಮಕವಾದ ನದಿ ಲೋಕದಲ್ಲಿದೆ. ಇಂಥಾ ನದಿಯನ್ನು ದಾಟಿ ಯೋಗಿಜನಗಳು ನಿರ್ಮಲಚಿತ್ತರಾದವರಾಗಿ ಸಂತೋಷವಾಗಿರುತ್ತಾರೆ. ಸ್ತ್ರೀಯರ ಮೋಹಕ್ಕೆ ಸಿಕ್ಕದೆ ಸುಖಿಗಳಾಗಿರುತ್ತಾರೆ. ತಾತ್ಪರ್ಯ:— (ಅತ್ರ ಸಮಸ್ತವಸ್ತು ಸಂಪೂರ್ಣ ಸಾವಯವರೂಪಕಾಲಂಕಾರಃ) (ವಿಷಯ ಭೇದತಾದ್ರೂಪ್ಯರಂಜನಂ ವಿಷಯಸ್ಯಯತ್) ಇತಿ ಲಕ್ಷಣಾತ್ (ಶಿಖರಿಣೀವೃತ್ತಂ) ||೧೦||

---

## ವಿಷಯಪರಿತ್ಯಾಗ ವಿಡಂಬನಾರಂಭವು.

ಶ್ಲೋ|| ನಸಂಸಾರೋತ್ಪನ್ನಂಚರಿತಮನುಪಶ್ಯಾಮಿಕುಶಲಂ
ವಿಪಾಕಃಪುಣ್ಯಾನಾಂಜನಯತಿಭಯಂಮೇವಿಮೃಶತಃ||
ಮಹದ್ಭಿಃಪುಣ್ಯೌಘೈಶ್ಚಿರಪರಿಗೃಹೀತಾಶ್ಚ ವಿಷಯಾ
ಮಹಾಂತೋ ಜಾಯಂತೇವ್ಯಸನಮಿವದಾತುಂವಿಷ
ಯಿಣಾಂ || ೧೧ ||

ಟೀಕು|| ಸಂಸಾರೋತ್ಪನ್ನಂ-ಸಂಸಾರ-ಸಂಸಾರದಲ್ಲಿ, ಉತ್ಪನ್ನಂ-ಹುಟ್ಟಿದಂಥಾ, ಚರಿತಂ-ಪುಣ್ಯಾಚರಣೆಯನ್ನು, ಕುಶಲಂ ಕ್ಷೇಮವನ್ನಾಗಿ. ನಾನುಪಶ್ಯಾಮಿ-ನೋಡುವದಿಲ್ಲ, (ಅಥವಾ ತಿಳಿಯುವದಿಲ್ಲ) ಪುಣ್ಯಾನಾಂ-ಪುರಾಕೃತ ಸುಕೃತಗಳ. ವಿಪಾಕಃ-ಫಲಪರಿಣತಿಯು, ವಿಮೃಶತಃ ವಿಚಾರದ ದೆಸೆಯಿಂದ. ಮೇ-ನನಗೆ, ಭಯಂ-ಸಾಧ್ವಸವನ್ನು, ಅಥವಾ ಭೀತಿಯನ್ನು, ಜನಯತಿ-ಉಂಟುಮಾಡುತ್ತದೆ, ಮಹದ್ಭಿಃ ಅಧಿಕಗಳಾದ, ಪುಣ್ಯೌಘೈಃ-ಪುಣ್ಯ-ಸುಕೃತದ, ಓಘೈಃ-ಸಮೂಹಗಳಿಂದ, ಚಿರಪರಿಗೃಹೀತಾಃ-ಚಿರ-ಬಹುಕಾಲಗಳಿಂದ, ಪರಿಗೃಹೀತಾಃ-ಸ್ವೀಕರಿಸಲ್ಪಟ್ಟ, ವಿಷಯಾಃ-ಶಬ್ದಾದಿ ವಿಷಯಗಳು, ಅಥವಾ ಸ್ರಕ್ಚಂದನಾದಿ ವಿಷಯಗಳು, ವಿಷಯಿಣಾಂ-ಭೋಗೇಚ್ಛ

ವುಳ್ಳ ಜನಗಳಿಗೆ, ವ್ಯಸನಂ-ದುಃಖವನ್ನು, ಧಾತುಮಿವ- ಕೊಡುವಂಥಾದ್ದೇ ಆಗುತ್ತೆ. ಮಹಾಂತಃ-ಸತ್ಪುರುಷರು, ಪ್ರವೃದ್ಧಾಜಾಯಂತೇ - ಹೆಚ್ಚಾದ ಫಲಭಾಗಿಗಳೆ ಆಗುತ್ತಾರೆ, ತುಚ್ಛಫಲಭಾಜನರಾಗುವದಿಲ್ಲ ||೧೧||

ತಾತ್ಪರ್ಯ— ಈ ಶ್ಲೋಕದಲ್ಲಿ ಯೋಗಿ ಜನಗಳು ಆಶಾನದಿಯನ್ನು ದಾಟಿಯಿದ್ದಾರೆ ಆದ್ದರಿಂದ ಸುಖವಾಗಿ ಇದ್ದಾರೆಂದು ಹೇಳಿದನಷ್ಟೆ ಅನಂತರದಲ್ಲಿ ವಿಷಯ ಪರಿತ್ಯಾಗದ ಏತಂಬನವನ್ನು ಹೇಳುತ್ತಾನೆ. ಅದು ಹೇಗೆಂದರೆ;— ಸಂಸಾರದಲ್ಲಿ ಮಾಡುವ ಪುಣ್ಯಕರ್ಮದ ಆಚರಣೆಯಿಂದ ಉಂಟಾದ ಫಲವನ್ನು ಶುಭಕ್ಕೋಸ್ಕರವಾಗುತ್ತೆಂದು ತಿಳಿಯಲಾರೆ. ಪುಣ್ಯದ ಫಲಭಾಗವನ್ನು ವಿಮರ್ಶೆಮಾಡಿ ನೋಡಿದ್ದರಲ್ಲಿ ಭಯವನ್ನೆ ಉಂಟುಮಾಡುತ್ತದೆ. ಮತ್ತು ಅಧಿಕವಾದ ಪುಣ್ಯರಾಶಿಗಳಿಂದ ಸಂಪಾದಿಸಲ್ಪಟ್ಟ ಸ್ಪರ್ಶವಿಷಯಗಳು (ಅಥವಾ ಸ್ರಕ್ಚಂದನಾದಿ ಭೋಗಗಳುಕೂಡ) ಅನರ್ಥಕಾರಿಯೇಯೆಂದು ಮಹಾತ್ಮರಾದ ಯೋಗಿಜನಗಳು ತುಚ್ಛವಾದ ಸುಖದ ಆಶೆಬಿಟ್ಟು ಪರಮಾನಂದವಾದ ಯೋಗಾನಂದವನ್ನು ಹೊಂದಿ ನಿರಾಕುಲರಾ ಇದ್ದಾರೆಂದು ತಾತ್ಪರ್ಯವು. || ಶಿಖರಿಣೀವೃತ್ತಂ || ||೧೧||

ಶ್ಲೋ|| ಅವಶ್ಯಂಯಾತಾರಶ್ಚಿರತರಮುಷಿತ್ವಾಪಿವಿಷಯಾವಿ
ಯೋಗೇಕೋಭೇದಸ್ತ್ಯಜತಿಜನೋಯತ್ಸ್ವಯಮಮೂ
ನ್ || ವ್ರಜಂತಸ್ಸ್ವಾತಂತ್ರ್ಯಾದತುಲಪರಿತಾ
ಪಾಯಮನಸಸ್ಸ್ವಯಂತ್ಯಕ್ತಾಹ್ಯೇತೇಶಮಸುಖಮ
ನಂತಂವಿದಧತಿ ||೧೨||

ಟೀಕು || ವಿಷಯಾಃ - ಸ್ರಕ್ಚಂದನವನಿತಾದಿ ಭೋಗಗಳು, ಚಿರತರಂ- ಬಹುಕಾಲವು, ಉಷಿತ್ವಾಪಿ-ಇರುವಂಥಾದಾದಾಗ್ಯಾದರೂ, ಅವಶ್ಯಂ- ಸಿದ್ಧವಾಗಿ (ಅಥವಾ) ಅವಶ್ಯಕವಾಗಿ ಯಾತಾರಏವ ಹೋಗತಕ್ಕಂಥಾವುಗಳೆ, ವಿಯೋಗೇ- ವಿಷಯಾದಿಗಳ ವಿಯೋಗದಲ್ಲಿಯು, ಭೇದಃಕಃ - ಭೇದವೇನೂ ಇಲ್ಲ, ತಥಾಹಿ-ಅದು ಯುಕ್ತವೇ ಸರಿ, ಯತ್-ಯಾವ ಕಾರಣದದೆಸೆಯಿಂದ ಯಃ-ಯಾವ, ಜನಃ-ವಿಷಯಾಸಕ್ತರಾದ ಜನರು, ಅಮೂನ್-ಈ ಸ್ರಕ್ಚಂದನವನಿತಾದಿ ವಿಷಯಗಳನ್ನು, ಸ್ವಯಂ-ತಾನೆ, ನತ ಜತಿ-ಬಿಡುವದಿಲ್ಲ, ಸ್ವಾತಂತ್ರ್ಯಾತ್-ಸ್ವಚ್ಛಂದದ ದೆಸೆಯಿಂದ, ಅಮೀವಿಷಯಾಃ-ಈ ಶಬ್ದಾದಿವಿಷಯ

ಗಳು, ತ್ಯಜಂತಸ್ಸಂತಃ-ಬಿಡಲ್ಪಟ್ಟವುಗಳಾಗಿ, ಮನಸಿ-ಮನಸ್ಸಿನಲ್ಲಿ, ಅತುಲಪರಿತಾಪಾಯ-ಅತುಲ ಹೆಚ್ಚಾದ ಪರಿತಾಪಾಯ-ಸಂತಾಪಕ್ಕೋಸ್ಕರವೆ. ಭವಂತಿ-ಆಗುತ್ತವೆ ಏತೇ-ಇವುಗಳು ಸ್ವಯಂ ತಾವೇ ತ್ಯಕ್ತಾಹಿ-ಬಿಡಲ್ಪಟ್ಟವುಗಳಾದರೆ ಅನಂತಂ-ಅಧಿಕವಾದಂಥ ಶಮಸುಖಂ-ತೃಷ್ಣೋಪತಾಪ ಶಾಂತಿಯಿಂದುಂಟಾದ ಸಂತೋಷವನ್ನು ವಿದಧತಿ-ಉಂಟುಮಾಡುತ್ತದೆ ||

ತಾತ್ಪರ್ಯ — ವಿಷಯಾದಿ ಭೋಗಗಳನ್ನು ಬಿಡುವದಕ್ಕಾಗುವದಿಲ್ಲವೆಂಬುವದನ್ನು ಹೇಳುತ್ತಾನೆ ಅದು ಹೇಗೆಂದರೆ;—ಸ್ರಕ್ಚಂದನ ವನಿತಾದಿ ಕಾಮಭೋಗಗಳು ಬಹುಕಾಲವಿದ್ದು ತಮ್ಮಿಷ್ಟಕ್ಕೆ ತಾವೇ ಬಿಟ್ಟುಹೋಗುತ್ತದೆ. ಮನುಷ್ಯನು ತನ್ನ ಸ್ವೇಚ್ಛೆಯಿಂದ ಬಿಡುವದಿಲ್ಲ. ವಿಷಯವಿಯೋಗದಲ್ಲಿ ಮನುಷ್ಯನು ಸಂತಾಪಪಡುತ್ತಾನೆ. ವಿಷಯಗಳು ತಾವಾಗಿಯೇ ಬಿಟ್ಟರೂ ಅವುಗಳೇ ಸ್ವಾತಂತ್ರ್ಯವಾಗಿ ಹೋದರೂ ವಿಯೋಗದಲ್ಲಿ ಭೇದವೇನೂ ಕಾಣಬರುವದಿಲ್ಲ. ಆದರೆ ಇಂದ್ರಿಯವ್ಯಾಪಾರಗಳು ತಾನಾಗಿಯೇ ಬಿಟ್ಟುಹೋದರೆ ಮನುಷ್ಯರಿಗೆ ಸಂತಾಪಕಾರಿಯಾಗುವದು ಮನುಷ್ಯನೇ ತನ್ನ ಸ್ವಕರ್ತೃಕದಿಂದ ಬಿಡುವದಾದರೆ ಪರಮಾನಂದ ಶಾಂತಿಸುಖವನ್ನು ಅನುಭವಿಸುವನೆಂದು ಭಾವವು. ||೧೨||

ಶ್ಲೋ|| ಬ್ರಹ್ಮಜ್ಞಾನವಿವೇಕನಿರ್ಮಲಧಿಯಃಕುರ್ವಂತ್ಯ
ಹೋದುಷ್ಕರಂಯನ್ಮುಂಚಂತ್ಯುಪಭೋಗಭಾಂಜ್ಯಪಿ
ಧನಾನ್ಯೇಕಾಂತತೋನಿಸ್ಪೃಹಾಃ || ಸಂಪ್ರಾಪ್ತಾನ್ನ
ಪುರಾನಸಂಪ್ರತಿನಚಪ್ರಾಪ್ತೌದೃಢಪ್ರತ್ಯಯಾನ್
ವಾಂಛಾಮಾತ್ರಪರಿಗ್ರಹಾನಪಿಪರಂತ್ಯಕ್ತುಂನಶಕ್ತಾ
ವಯಂ || ೧೩ ||

ಟೀಕು || ಬ್ರಹ್ಮಜ್ಞಾನವಿವೇಕನಿರ್ಮಲಧಿಯಃ- ಬ್ರಹ್ಮಜ್ಞಾನ- ಬ್ರಹ್ಮಜ್ಞಾನದಿಂದವುಂಟಾದ, ವಿವೇಕ-ವಿಚಾರದಿಂದ, ನಿರ್ಮಲ-ನಿಷ್ಕಳಂಕವಾದ, ಧಿಯಃ-ಬುದ್ಧಿಯುಳ್ಳ ಜ್ಞಾನಿಗಳು, ದುಷ್ಕರಂ-ಅಸಾಧ್ಯವಾದ ಕೆಲಸವನ್ನು, ಕುರ್ವಂತಿ ಮಾಡುತ್ತಾರೆ, ಅಹೋ-ಆಶ್ಚರ್ಯ, ಯತ್-ಯಾವ ಕಾರಣದ ದೆಸೆಯಿಂದ, ನಿಸ್ಪೃಹಾಸ್ಸಂತಃ ಆಶಾರಹಿತರಾಗಿ, ಉಪಭೋಗ-ಕಾಮೋಪ

ಭೋಗವನ್ನು, ಭಾಂಜಿ ಹೊಂದಿಯಿರುವ. (ಅಥವಾ ಕಾಮೋಪಭೋಗಸಾ
ಧನವಾದ) ಧನಾನಿ-ದ್ರವ್ಯಗಳನ್ನು, ಏಕಾಂತತಃ-ಅಂತರಂಗದಲ್ಲಿ. ತ್ಯಜಂತಿ-
ಬಿಡುತ್ತಾರೊ, ವಯಂ-ನಾವುಗಳು, ಪುರಾ - ಪೂರ್ವ್ವಕಾಲದಲ್ಲಿ, ನಸಂಪ್ರಾ
ಪ್ತಾಃ-ಹೊಂದದೆಯಿರುವ, ಸಂಪ್ರತಿ-ವರ್ತಮಾನಕಾಲದಲ್ಲಿಯೂ, ನಪ್ರಾ
ಪ್ತಾಃ-ಹೊಂದದೆಯಿರುವ, ಪ್ರಾಪ್ತಾವಪಿ-ಭವಿಷ್ಯತ್ಕಾಲದಲ್ಲಿಯೂ ಕೂಡ,
ನದೃಢಪ್ರತ್ಯಯಾಃ - ಸ್ಥಿರವಾಗಿ ಯಾಥಾರ್ಥ್ಯವಿಲ್ಲದೆಯಿರುವ, ವಾಂಛಾ
ಮಾತ್ರಪರಿಗ್ರಹಾನಪಿ-ವಾಂಛಾಮಾತ್ರ- ಇಚ್ಛಾಮಾತ್ರದಿಂದ, ಪರಿಗ್ರಹಾ
ನಪಿ-ಪರಿಗ್ರಹಿಸುವದಕ್ಕೆ ಯೋಗ್ಯವಾದ, ಮನೋರಥಾಃ-ಕೋರಿಕೆಗಳನ್ನು,
ಪರಂ-ಅತ್ಯಂತವಾಗಿ, ತ್ಯಕ್ತುಂ-ಬಿಡುವದಕ್ಕೋಸ್ಕರ, ನಶಕ್ತಾಃ-ಸಮರ್ಥ
ರಾಗುವದಿಲ್ಲ ||೧೩||

ತಾತ್ಪರ್ಯ—ಲೋಕದಲ್ಲಿ ಎಂಥಾ ಮನುಷ್ಯರು ವಿಷಯಾದಿಗಳಲ್ಲಿ ಆಶೆ
ಯಿಲ್ಲದೆ ಇರುತ್ತಾರೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ;—
ಪ್ರಪಂಚದಲ್ಲಿ ಬ್ರಹ್ಮಜ್ಞಾನದಿಂದ ನಿರ್ಮಲವಾದ ಬುದ್ಧಿಯಾರಿಗೆವುಂಟೋ
ಅವರುಗಳು ಆಶ್ಚರ್ಯವಾದ ಕೆಲಸವನ್ನು ಮಾಡುತ್ತಾರೆ. ಯಾವಕಾರಣ
ದಿಂದ ವಿಷಯಾದಿ ಭೋಗಗಳಿಗೆ ಸಾಧಕವಾದ ದ್ರವ್ಯದ ಆಶೆಯನ್ನು ಸುತ
ರಾಂಬಿಟ್ಟು ಯಿರುತ್ತಾರೆಯೋ ಆಕಾರಣದ ದೆಸೆಯಿಂದ ಅವರೆ ಸುಕೃತಶಾ
ಲಿಗಳು ನಾವುಗಳಾದರೋ ಹಿಂದಿನಕಾಲದಲ್ಲು ವರ್ತಮಾನಕಾಲದಲ್ಲುಮುಂ
ದೆ ಬರುವಕಾಲದಲ್ಲು ಸಹ ಸ್ಥಿರತರ ಪ್ರತ್ಯಯವಿಲ್ಲದೆ ಯಿರುವ ಶಬ್ದಸ್ಪರ್ಶಾ
ದಿ ವಿಷಯಗಳಲ್ಲಿಯೂ ಮತ್ತು ತದುದ್ಭೂತವಾದ ಸ್ರಕ್‌ಚಂದನಾದಿಗಳಲ್ಲಿ
ಯು ಕೋರಿಕೆಗಳನ್ನು ಬಿಡುವವರಾಗುವದಿಲ್ಲ. ಅಂದರೆ ಅಯಥಾತಥ್ಯ
ವಾದ ಪದಾರ್ಥಗಳಲ್ಲಿ ನಿಶ್ಚಯಜ್ಞಾನವನ್ನು ಯಿಟ್ಟುಕೊಂಡು ಆಶೆಯನ್ನು
ಬಿಡದೆ ಯಿದ್ದರೆಂದು ತಾತ್ಪರ್ಯ. || ಶಾರ್ದೂಲವಿಕ್ರೀಡಿತವೃತ್ತಂ|| ||೧೩||

ಶ್ಲೋ||ಧನ್ಯಾನಾಂಗಿರಿಕಂದರೇಷುವಸತಾಂಜ್ಯೋತಿಃಪರಂಧ್ಯಾ
ಯತಾಮಾನಂದಾಶ್ರುಕಣಾನ್ಪಿಬಂತಿಶಕುನಾನಿಶ್ಶಂಕ
ಮಂಕೇಶಯಾಃ || ಅಸ್ಮಾಕಂತುಮನೋರಥೋಪರಚಿತ
ಪ್ರಾಸಾದವಾಪೀತಟಕ್ರೀಡಾಕಾನನಕೇಳಿಕೌತುಕಜುಷಾ
ಮಾಯುಃ ಪರಂಕ್ಷೀಯತೇ ||೧೪||

ಟೀಕು॥ ಗಿರಿಕಂದರೇಷು-ಗಿರಿ ಪರ್ವತಗಳ, ಕಂದರೇಷು- ಗುಹೆಗಳಲ್ಲಿ, ವಸತಾಂ-ವಾಸಮಾಡುತ್ತಲಿರುವ, ಪರಂಜ್ಯೋತಿಃ-ಪರಬ್ರಹ್ಮನನ್ನು, ಧ್ಯಾಯತಾಂ -ಧ್ಯಾನಮಾಡುತ್ತಲಿರುವ, ಧನ್ಯಾನಾಂ - ಸುಕೃತಗಳ, ಅಂಕೇಶಯಾಃ ಅಂಕೇ-ತೊಡೆಗಳ ಮೇಲೆ,ಶಯನಾಃ-ಮಲಗಿಕೊಂಡಿರುವ, ಶಕುನಾಃ ಪಕ್ಷಿಗಳು,ನಿಶ್ಯಂಕಂ-ಭಯವಿಲ್ಲದೆಯುರೋಣ, ಹೇಗೋ ಹಾಗೆ, ಆನಂದಾಶ್ರುಕಣಾನ್-ಆನಂದ-ಬ್ರಹಾನಂದದಿಂದುಂಟಾದ ಅಶ್ರು-ಕಣ್ಣೀರಿನ, ಕಣಾನ್-ಬಿಂದುಗಳನ್ನು, ಪಿಬಂತಿ ಪಾನಮಾಡುತ್ತಾರೆ, ಮನೋರಥೋಪರಚಿತಪ್ರಾಸಾದವಾಪೀತಯ ಕ್ರೀಡಾಕಾನನಕೇಳಿಕೌತುಕಜುಷಾಂ- ಮನೋರಥ-ವಾಂಛಾಮಾತ್ರದಿಂದ, ಉಪರಚಿತ-ನಿರ್ಮಿಸಲ್ಪಟ್ಟಿರುವ, ಪ್ರಾಸಾದ-ಉಪ್ಪರಿಗೆಗಳಲ್ಲಿರುವ, ವಾಪೀ-ಸರಸ್ಸುಗಳ,ತಟ-ಪ್ರದೇಶದಲ್ಲಿರುವ, ಕ್ರೀಡಾ-ವಿಳಾಸಾರ್ಥವಾದ, ಕಾನನ-ಉದ್ಯಾನವನಗಳಲ್ಲಿ, ಕೇಳಿ-ಕಾಮವಿಲಾಸದಲ್ಲಿ, ಕೌತುಕ - ಕುತೂಹಲವನ್ನು, ಜುಷಾಂ ಹೊಂದಿರುವ, ಅಸ್ಮಾಕಂತು - ನಮ್ಮಗಳಿಗೆ ಅದರೂ, ಆಯುಃ-ಆಯುಸ್ಸು, ಪರಂ-ಅತ್ಯಂತವಾಗಿ, ಕ್ಷೀಯತೇ - ನಾಶವಾಗುತ್ತದೆ

ತಾತ್ಪರ್ಯ —ಮೊದಲು ಹೇಳಿದ ಅರ್ಥವನ್ನೇ ಈ ಶ್ಲೋಕದಲ್ಲಿ ಬೇರೆ ರೀತಿಯಾಗಿ ಹೇಳುತ್ತಾನೆ. ಅದು ಹೇಗಂದರೆ;—ಸುಕೃತಶಾಲಿಗಳಾದ ಯೋಗಿಜನಗಳು ಪರ್ವತಗಳ ಅರದೊಪ್ಪಲುಗಳಲ್ಲಿರುವ ಗುಹೆಗಳಲ್ಲಿ ತಪಸ್ಸನ್ನು ಮಾಡಿಕೊಂಡು ಆಯುಸ್ಸನ್ನು ಕಳೆಯುತ್ತಾರೆ. ಇವರು ನಿರ್ವೈರಗಳಾಗಿಯೂ ನಿಸ್ಪೃಹರಾಗಿಯೂ ತಪಸ್ಸನ್ನು ಮಾಡುತ್ತಾಯಿರುವದರಿಂದ ಪಕ್ಷಿಗಳು ಬಂದು ನಿಶ್ಯಂಕವಾಗಿ ತೊಡೆಯಮೇಲೆ ಕೂತುಕೊಂಡು ಯೋಗಿಜನಗಳ ನೇತ್ರದಿಂದ ಬರುವ ಬ್ರಹ್ಮಾನಂದ ಬಾಷ್ಪೋದಕಗಳನ್ನು ಪಾನಮಾಡುತ್ತವೆ. ನಮ್ಮಗಳ ಆಯುಸ್ಸಾದರೋ ಮನೋರಥದಿಂದ ಉಪ್ಪರಿಗೆಗಳನ್ನು ಕಟ್ಟಿ ಆ ಉಪ್ಪರಿಗೆಗಳಲ್ಲಿ ನಿರ್ಮಿಸಿದ ಸರಸ್ಸುಗಳ ತಟೋದ್ಯಾನಕೇಳೀತತ್ಪರರಾಗಿ ಆಯುಸ್ಸುಗಳನ್ನು ಕಳೆದುಕೊಳ್ಳುತ್ತೇವೆ. ಅಂದರೆ ಯೋಗಿಗಳ ಆಯುಸ್ಸು ಸದ್ಧರ್ಮಾಚರಣೆಯಲ್ಲಿ ಕಳೆಯುತ್ತದೆ. ನಮ್ಮಗಳ ಆಯುಸ್ಸು ಕಾಮಪರತಂತ್ರನಾಗಿ ಕಳೆಯುತ್ತದೆ. ಆದ್ದರಿಂದ ಸತ್ಯಮಾರ್ಗಚರಣೆಯನ್ನು ಮಾಡುವದು ಉತ್ತಮವೆಂದು ತಾತ್ಪರ್ಯ. ||೧೪||

ಶ್ಲೋ॥ ಭಿಕ್ಷಾಶನಂತದಪಿನೀರಸಮೇಕವಾರಂಶಯ್ಯಾಚಭೂಃ

ಪರಿಜನೋನಿಜದೇಹಮಾತ್ರಂ । ವಸ್ತ್ರಂವಿಶೀರ್ಣ

ಶತಖಂಡಮಯಾಚಕಂಥಾಹಾಹಾತಥಾಪಿವಿಷಯಾನ
ಪರಿತ್ಯಜಂತಿ ॥ ೧೫ ॥

ಟೀಕು ॥ ಭಿಕ್ಷಾಶನಂ-ಭಿಕ್ಷಾ-ಭಿಕ್ಷಾನ್ನವೆ, ಅಶನಂ-ಭೋಜನವು, ತದಪಿ ಆಭಿಕ್ಷಾನ್ನವು ಕೂಡ, ನೀರಸಂ-ಒಣಗಿಹೋಗಿರುವಂಥಾದ್ದು, ಏಕವಾರಂ-ಏಕ-ಒಂದೆ ಕಾಲದಲ್ಲಿ ಭೋಜನಮಾಡುವದು, ಭೂಃ-ಭೂಮಿಯು, ಶಯ್ಯಾ-ಹಾಸಿಗೆಯು, ಪರಿಜನಃ-ಪರಿಚಾರಕ ಜನಗಳು ಕೂಡ, ನಿಜ-ತನ್ನ, ದೇಹಮಾತ್ರಂ-ಶರೀರಮಾತ್ರವೆ, ವಸ್ತ್ರಂ-ವಸ್ತ್ರವು, ವಿಶೀರ್ಣಶತಖಂಡಮಯೀ ವಿಶೀರ್ಣ ಹರಿದುಜೀರ್ಣವಾಗಿ, ಶತ-ನೂರುಪ್ರಕಾರವಾಗಿ, ಖಂಡಮಯೀ-ತುಂಡುಗಳಾದ, ಕಂಥಾ-ಕಂತೆಸ್ವರೂಪವಾದದ್ದು, ತಥಾಪಿ-ಹಾಗಿದ್ದಾಗ್ಯೂದರೂ ವಿಷಯಾಃ-ಸ್ರಕ್‌ಚಂದನಾದಿ ವಿಷಯೇಚ್ಛೆಗಳು, ನಪರಿತ್ಯಜಂತಿ-ಬಿಡುವದಿಲ್ಲ ಹಾ ಹಾ-ಆಶ್ಚರ್ಯ ॥೧೫॥

ತಾತ್ಪರ್ಯ— ಈ ಶ್ಲೋಕದಲ್ಲಿ ಮನುಷ್ಯರಿಗೆ ಎಷ್ಟರ ಅನನುಕೂಲವಿದ್ದಾಗ್ಯೂ ಮನ್ಮಥನ ಸಂಬಂಧವಾದ ಕಾಮವಿಚಾರವು ತಪ್ಪುವದಿಲ್ಲವೆಂಬುವುದನ್ನು ಹೇಳುತ್ತಾನೆ. ಅದು ಹೇಗೆಂದರೆ;—ಭಿಕ್ಷಮಾಡಿಕೊಂಡು ಪ್ರೊಣಗಿದ ಅನ್ನವನ್ನು ಒಂದುಹೊತ್ತು ತಿಂದುಕೊಂಡು ನೆಲಕ್ಕೆ ಹಾಸಿಕೊಳ್ಳುವದಕ್ಕೆ ಬಟ್ಟೆಯಿಲ್ಲದೆ ನೆಲದಮೇಲೆ ಮಲಗಿಕೊಳ್ಳುತ್ತಾ ತನಗೆ ಪೋಷಕರಿಲ್ಲದೆ ಶತಛಿದ್ರವಾದ ಕಂತೆಯನ್ನು ಹೊದ್ದುಕೊಳ್ಳುತ್ತಾ ಈರೀತಿ ದುರವಸ್ಥೆಯನ್ನು ಪಡತ್ತಾ ಇದ್ದಾಗ್ಯೂ ಕಾಮವ್ಯಾಪಾರದಲ್ಲಿ ಆಸಕ್ತಿ ತಪ್ಪಲಿಲ್ಲ ಇದು ಆಶ್ಚರ್ಯವೆಂದು ತಾತ್ಪರ್ಯ. ॥ ವಸಂತ ತಿಲಕಾವೃತ್ತಂ ॥೧೫॥

ಶ್ಲೋ॥ ಸ್ತನೌಮಾಂಸಗ್ರಂಥೀಕನಕ ಕಲಶಾವಿತ್ಯುಪಮಿತೌ
ಮುಖಂಶ್ಲೇಷ್ಮಾಗಾರಂತದಪಿಚಶಶಾಂಕೇನತುಲಿತಂ ।
ಸ್ರವನ್ಮೂತ್ರಕ್ಲಿನ್ನಂ ಕರಿವರಶಿರಸ್ಪರ್ಧಿಜಘನಂಮುಹುರ್ನಿಂದ್ಯಂರೂಪಂಕವಿಜನವಿಶೇಷೈರ್ಗುರುಕೃತಂ ॥

ಟೀಕು ॥ ಸ್ತನೌ-ಕುಚಗಳು, ಮಾಂಸಗ್ರಂಥೀ-ಮಾಂಸ - ಮಾಂಸದ, ಗ್ರಂಥೀ-ಗಂಟುಗಳು, ಉಪಮಿತೌ ಉಪಮಾನದಲ್ಲಿ, ಕವಿಜನವಿಶೇಷೈಃ - ಕವಿಶ್ರೇಷ್ಠರಿಂದ, ಹೇಳಲ್ಪಟ್ಟಿದೆ. ಕನಕಕಲಶಾವಿತಿ- ಕನಕ- ಚಿನ್ನದ, ಕಲಶಾವಿತಿ ಹರಿವಾಣಗಳಾಗಿ, ಉಚ್ಯೇತೇ - ಶ್ಲೇಷ್ಮ -ಶ್ಲೇಷ್ಮಕ್ಕೆ, ಅಗಾರಂ-

ಮನೋಜ್ಞರೂಪವಾದ, ಮುಖಂ - ವದನವು, ಶಶಾಂಕೇನ - ಚಂದ್ರನೊಡನೆ, ತುಲಿತಂ - ಸರಿಹೋಲಿಸಲ್ಪಟ್ಟಿತು, ಸ್ರವನ್ಮೂತ್ರಕ್ಲಿನ್ನಂ - ಸ್ರವತ್- ಜಾರುದಂಥ, ಮೂತ್ರ - ಮೂತ್ರದಿಂದ, ಕ್ಲಿನ್ನಂ - ನೆನೆಯಿಸಲ್ಪಟ್ಟ, ಜಘನಂ - ಕಟಿಪುರೋಭಾಗವು, ಕರಿವರಶಿರಸ್ಪರ್ಧಿ - ಕರಿವರ - ಗಜಶ್ರೇಷ್ಠದ- ಶಿರಃ - ತಲೆಯನ್ನು, ಸ್ಪರ್ಧಿ - ತಿರಸ್ಕರಿಸತಕ್ಕದ್ದಾಗಿ, ಉಕ್ತಂ - ಹೇಳಲ್ಪಟ್ಟಿತು, ರೂಪಂ- ಆಕಾರವು, ಮುಹುಃ - ಬಾರಿ ಬಾರಿಗು, ನಿಂದ್ಯಂ - ತಿರಸ್ಕರಿಸುವದಕ್ಕೆ ಯೋಗ್ಯವಾದದ್ದು, ಕವಿಜನವಿಶೇಷೈಃ - ಕವಿಶ್ರೇಷ್ಠರಿಂದ, ಗುರುಕೃತಂ- ದೊಡ್ಡದಾಗಿ ಮಾಡಲ್ಪಟ್ಟಿತು. ॥ ೧೬ ॥

ತಾತ್ಪರ್ಯ—ಈ ಶ್ಲೋಕದಲ್ಲಿ ಸ್ತ್ರೀಯರುಗಳ ಅವಯವಗಳನ್ನು ಮತ್ತು ಅವರ ರೂಪವನ್ನು ಸಹ ನಿಂದನೆಮಾಡುತ್ತಾನೆ. ಅದುಹೇಗೆಂದರೆ:- ಕವಿಶ್ರೇಷ್ಠರು ಮಾಂಸದ ಗಂಟಾಗಿರುವ ಸ್ತ್ರೀಯರುಗಳ ಕುಚಗಳನ್ನು ನೋಡಿ ಚಿನ್ನದ ಕಲಶವನ್ನಾಗಿ ಹೇಳುತ್ತಾರೆ. ಶ್ಲೇಷ್ಮಕ್ಕೆ ಮನೆಯಾದ ಕಾಮಿನೀವದನವನ್ನು ಚಂದ್ರಬಿಂಬಕ್ಕೆ ಸರಿಹೋಲಿಸುತ್ತಾರೆ. ಮೂತ್ರ ಹೋಗುವಕಾಲದಲ್ಲಿ ಮೂತ್ರ ಜಾರಿನೆನೆದು ಇರುವ ಅಂಗನೆಯರ ಜಘನವನ್ನು ಗಜರಾಜನ ಶಿರಸ್ಸಿನಹಾಗೆ ವಿಸ್ತಾರವಾಗಿಯು ಅಂದವಾಗಿಯೂ ಇರುವದೆಂದು ಹೇಳುತ್ತಾರೆ. ಭಾಮಿನಿಯರ ರೂಪವು ಬಹಳ ನಿಂದ್ಯವಾದದ್ದು ಇಂಥಾದ್ದನ್ನು ಕವಿಶ್ರೇಷ್ಠರು ಸರ್ವೋತ್ತಮವಾಗಿ ವರ್ಣಿಸಿರುತ್ತಾರೆ. ಇದು ಬಹಳ ಹೇಯವಾದುದೆಂದು ತಿಳಿಯಬೇಕೆಂದು ತಾತ್ಪರ್ಯ. (ಉಪಮಾಲಂಕಾರಃ) ॥ ವೃತ್ತಂ ಪೂರ್ವವತ್ ॥ ॥೧೭॥

ಶ್ಲೋ॥ ಏಕೋರಾಗಿಷುರಾಜತೇಪ್ರಿಯತಮಾದೇಹಾರ್ಧಹಾರೀಹರೋ
ನೀರಾಗೇಷುಜನೋ ವಿಮುಕ್ತಲಲನಾಸಂಗೋನ
ಯಸ್ಮಾತ್ಪರಃ ॥ ದುರ್ವಾರಸ್ಮರಬಾಣಪನ್ನಗವಿಷ
ವ್ಯಾವಿದ್ಧಮುಗ್ಧೋಜನಶ್ಶೇಷಃಕಾಮವಿಡಂಬಿತಾನ್ನ
ವಿಷಯಾನ್ಭೋಕ್ತುಂನಮೋಕ್ತುಂಕ್ಷಮಃ ॥ ೧೭ ॥

ಟೀಕಾ॥ ರಾಗಿಷು - ಕಾಮುಕಜನಗಳಲ್ಲಿ, ಏಕಃ - ಒಬ್ಬನಾದ, ಪ್ರಿಯತಮಾದೇಹಾರ್ಧಧಾರೀ ಪ್ರಿಯತಮಾ, ಪ್ರಾಣಪ್ರೀಯಸಿಯಾದ ಪಾರ್ವತಿಯ ದೇಹಾರ್ಧ- ಅರ್ಧ ಶರೀರನನ್ನು, ಧಾರೀ- ಧರಿಸಿಕೊಂಡಿರುವ, ಹರಃ-ಈಶ್ವ

ರನು, ರಾಜತಿ - ಪ್ರಕಾಶಿಸುತ್ತಲಿದ್ದಾನೆ, ನೀರಾಗೇಷು, ವಿರಕ್ತರಾದ ಜನ ರಲ್ಲಿ, ಯಸ್ಮಾತ್ = ಯಾವ ಶಂಭುವಿಗಿಂತಲು, ವಿಮುಕ್ತಲಲನಾಸಂಗಃ - ವಿ ಮುಕ್ತ- ಬಿಡಲ್ಪಟ್ಟ, ಲಲನಾ - ಸ್ತ್ರೀಯ, ಸಂಗಃ - ಸಂಬಂಧವುಳ್ಳ, ಪರಃ- ಇತರನಾದದುರ್ವಾರಸ್ಮರಬಾಣಪನ್ನಗವಿಷವ್ಯಾವಿದ್ಧಮುಗ್ಧಃ- ದುರ್ವಾರ- ಮತ್ತೊಬ್ಬ ಪುರುಷನು ನಿವಾರಣಮಾಡುವದಕ್ಕೆ ಆಗದ, ಸ್ಮರ- ಮಾರನ ಬಾಣಪನ್ನ, ಗ-ಬಾಣಗಳೆಂಬುವ ಸರ್ಪಗಳ, ವಿಷ- ವಿಷವೆಂಬುವ ಮೋಹ ದಿಂದ, ವ್ಯಾವಿದ್ಧ, ಮುಗ್ಧಃ - ಮೂಢನಾದ, ಶೇಷಃ - ಮಿಕ್ಕಂಥ, (ಅಥ ವಾ ಜನವು) ಕಾಮವಿಡಂಬಿತಾನ್- ಕಾಮ-ಸ್ಮರನಿಂದ, ವಿಡಂಬಿತಾನ್-ಹೊಡೆ ಯಲ್ಪಟ್ಟ, ಸ್ವೀಕರಿಸಲ್ಪಟ್ಟ, ವಿಷಯಾನ್- ಸ್ರಕ್ಚಂದನಾದಿ ಭೋಗಗಳನ್ನು, ಭೋಕ್ತುಂ- ಅನುಭವಿಸುವದಕ್ಕು, ಕ್ಷಮಃ- ಸಮರ್ಥರ. ನ- ಆಗುವುದಿಲ್ಲ

ತಾತ್ಪರ್ಯ— ಈ ಶ್ಲೋಕದಲ್ಲಿ ವಿರಕ್ತರನು ರಕ್ತಿಗಳಲ್ಲಿ ಪರಮೇಶ್ವ ರನು ಒಬ್ಬನು ವಿನಾ ಯಾರೂ ಇಲ್ಲ ಎಂಬುವದನ್ನು ಹೇಳುತ್ತಾನೆ. ಹೇ ಗಂದರೆ; — ಈಶ್ವರನು ಪಾರ್ವತಿಯು ಅರ್ಧ ಶರೀರವನ್ನು ಆಲಿಂಗನೆ ಮಾ ಡಿಕೊಂಡು ಯಾವಾಗಲು ಕಾಮಕೇಳಿರಸ ಪಾರವಶ್ಯವನ್ನು ಹೊಂದಿ ಯಿ ದ್ದಾನೆ. ನಿರಕ್ತಿಭಾವದಲ್ಲಿ ಕಾಮಬಾಣನ ಶರಘಾತಕ್ಕೆ ವಶನಾಗದೆ ನಿರ್ದ ಯನಾಗಿ ಮದನನನ್ನು ತನ್ನ ಫಾಲನೇತ್ರಾಗ್ನಿಯಿಂದ ದಹಿಸಿದನು. ಮನ್ಮ ಥ ಬಾಣಸರ್ಪಗಳ ವಿಷವೇರಿ ವಿಷಯಾದಿ ಭೋಗಗಳನ್ನು ಅನುಭವಿಸುವದ ಕ್ಕೆ ಸಾಮರ್ಥ್ಯವಿಲ್ಲದೆಇರುವ ಮೂಢಜನಗಳು ಸ್ತ್ರೀಜನಗಳಲ್ಲಿ ಸುಖವನ್ನು ಅನುಭವಿಸಲಾರರು. ವಿರಕ್ತರಾಗಿ ತಪಸ್ಸುಮಾಡಿಕೊಂಡು ನಿಶ್ಚಿಂತರಾ ಗಿ ಯೂ ಇರಲಾರರು. ಸುಮ್ಮನೆ ಚಪಲಪಡುತ್ತಾ ಉಭಯ ಭ್ರಷ್ಟರಾ ಗಿ ಇದ್ದಾರೆ ಆದ್ದರಿಂದ ಚಪಲವನ್ನು ಬಿಟ್ಟು ನಿಶ್ಚಿಂತರಾಗಿ ಇರಬೇ ಕೆಂದು ತಾತ್ಪರ್ಯ. ಅತ್ರಬಾಣ ಪನ್ನಗವೆಂಬುವದರಿಂದ ರೂಪಕಾಲಂ ಕಾರಃ. || ಶಾರ್ದೂಲ ವಿಕ್ರೀಡಿತವೃತ್ತಂ || ||೧೮||

ಶ್ಲೋ|| ಅಜಾನನ್ದಾಹಾತ್ಮ್ಯಂಪತತುಶಲಭಸ್ತೀವ್ರದಹನೇ
ಸಮೀನೋಪ್ಯಜ್ಞಾನಾದ್ಬಡಿಶಯುತಮಶ್ನಾತುಪಿ
ಶಿತಂ | ವಿಜಾನಂತೋಪ್ಯೇತೇವಯಮಿಹವಿಪಜ್ಜಾಲ
ಜಟಿಲಾನ್ನಮುಂಚಾಮಃ ಕಾಮಾನಹಹಗಹನೋಮೋ
ಹಮಹಿಮಾ || ೧೮ ||

ಟೀಕು ॥ ಶಲಭಃ-ಈಚಲಹುಳವು, ದಹನೇ ಅಗ್ನಿಯಲ್ಲಿ ದಾಹಾತ್ಮ್ಯಂ-ದಹಿಸೋಣವನ್ನು ಅಥವಾ ಸುಡೋಣವನ್ನು, ಅಜ್ಞಾನನ್-ತಿಳಿಯದೆ, ಪತತು-ಬೀಳಲಿ, ಸಃ-ಆ ಪ್ರಸಿದ್ಧನಾದ, ಮೀನಃ-ಮತ್ಸ್ಯವು ಅಜ್ಞಾನಾತ್-ತಿಳಿಯದ ಇರೋಣದರ ದಸೆಯಿಂದ, ಬಡಿಶಯುತಂ-ಬಡಿಶ ಗಾಳದಿಂದ, ಯುತಂ-ಕೂಡಿಕೊಂಡಿರುವ, ಪಿಶಿತಂ ಮಾಂಸವನ್ನು, ಅಶ್ನಾತು ತಿನ್ನಲಿ, ವಿಜಾನಂತಃ-ತಿಳಿದಿರುವ, ಏತೇ ವಯಮಪಿ ಈ ನಾವುಗಳು ಕೂಡ ವಿಪಜ್ಜಾಲಜಟಿಲಾನ್ ವಿಪಜ್ಜಾಲ-ದುಃಖಪರಂಪರೆಯಿಂದ, ಜಟಿಲಾನ್-ಕೂಡಿಕೊಂಡಿರುವ, ಕಾಮಾನ್ ಮೋಹಜನಕವಾದ ಕೋರಿಕೆಗಳನ್ನು, ನಮುಂಚಾಮಃ-ಬಿಡಲಿಲ್ಲ, ಮೋಹಮಹಿಮಾ, ಮೋಹ-ಅಜ್ಞಾನದ, ಮಹಿಮಾ-ಮಹಾತ್ಮ್ಯವು, ಗಹನಃ ಅಗಾಧವಾದದ್ದು (ಅಥವಾ ದಾಟುವದಕ್ಕೆ ಅಸಾಧ್ಯವಾದದ್ದು) ಅಹಹ-ಆಶ್ಚರ್ಯ, ॥೧೮॥

ತಾತ್ಪರ್ಯ—ವಿಷಯದೋಷ ಪರಿಜ್ಞಾನದಲ್ಲೂ ಕೂಡ ಬಿಡದೆ ಯಿರುವದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗಂದರೆ; — ಈಚಲು ಹುಳಗಳು ಬೆಂಕಿಯಲ್ಲಿ ಬಿದ್ದರೆ ತಾವು ಸುಟ್ಟುಹೋಗುತ್ತೇವೆ, ಎಂಬುವದನ್ನು ತಿಳಿಯದೆ ಉರಿಯನ್ನು ನೋಡಿ ಇದು ತಿನ್ನತಕ್ಕಪದಾರ್ಥವೆಂಬುವಭ್ರಮೆಯಿಂದ ಬೆಂಕಿ ಅಥವಾ ಉರಿ ಇವುಗಳಲ್ಲಿಬಿದ್ದುಪ್ರಾಣವನ್ನುಬಿಡುತ್ತವೆ. ಪ್ರಸಿದ್ಧವಾದ ಮೀನು ಗಾಳದ ಕೊನೆಮುಳ್ಳಿಗೆ ಚುಚ್ಚಿಯಿರುವ ಮಾಂಸವನ್ನು ತಿನ್ನುವದಕ್ಕೆ ಹೋಗುತ್ತಾ ಸಾಯುತ್ತದೆ. ಇವುಗಳು ರೂಪಸ್ಪರ್ಶಾದಿಗಳಿಂದುಂಟಾಗುವ ಉಪಾಯಗಳು ತಿಳಿಯದೆ ಮಾಡಿವವು. ನಾವುಗಳಾದರೊ ಶಬ್ದಸ್ಪರ್ಶರೂಪರಸ ಗಂಧಾದಿಗಳಿಂದ ಅಂದರೆ ಈ ಪಂಚವಿಷಯಾನುಭವದಿಂದ ಉಂಟಾಗುವ ಅನರ್ಥಗಳನ್ನು ತಿಳಿದು ಇದ್ದೇವೆ. ಹಾಗಾದರೂ ಬಿಡದೆ ಪುನಃ ಅನುಭವಿಸುವದಕ್ಕೆ ಹೋಗುತ್ತೇವೆ. ನಮ್ಮಗಳಿಗೆ ಉಂಟಾಗಿರುವ ಅಜ್ಞಾನವು ಬಹಳ ದೊಡ್ಡದು ಇದನ್ನು ದಾಟಹೋಗುವದಕ್ಕೆ ಆಗುವದಿಲ್ಲ. ಆಶ್ಚರ್ಯವೆಂದು ತಾತ್ಪರ್ಯ. ॥ ಶಿಖರಿಣೀವೃತ್ತಂ ॥ ॥೧೮॥

ಶ್ಲೋ॥ ತೃಷಾಶುಷ್ಯತ್ಯಾಸ್ಯೇಪಿಬತಿಸಲಿಲಂ ಶೀತಮಧುರಂಕ್ಷು
ಧಾರ್ತಶ್ಶಾಲ್ಯನ್ನಂಕಬಳಯತಿಮಾಂಸಾದಿಕಲಿತಂ ।

ಪ್ರದೀಪ್ತೇ ಕಾಮಾಗ್ನೌ ಸುದೃಢತರಮಾಲಿಂಗತಿ ವಧೂಂ
ಪ್ರತೀಕಾರಂ ವ್ಯಾಧೇಸ್ಸುಖಮಿತಿ ವಿಪರ್ಯಸ್ಯತಿ ಜನಃ

ಟೀಕು । ಜನಃ-ಮನುಷ್ಯನು, ಆಸ್ಯೇ-ಮುಖವು, ತೃಷಾ- ಬಾಯಾರಿಕೆಯಿಂದ, ಶುಷ್ಯತಿ ಸತಿ-ಒಣಗಿದಂಥಾದ್ದಾಗುತ್ತಿರಲಾಗಿ, ಶೀತಮಧುರಂ-ಶೀತ ತಂಡಿಯಾಗಿಯೂ, ಮಧುರಂ ಮನೋಹರವಾಗಿಯೂ ಇರುವ, ಸಲಿಲಂ-ಉದಕವನ್ನು, ಪಿಬತಿ - ಪಾನಮಾಡುತ್ತಾನೆ, ಕ್ಷುಧಾ - ಹಸಿವಿನಿಂದ, ಆರ್ತಃ-ಬಳಲಿದ, ಜನಃ-ಮನುಷ್ಯನು, ಮಾಂಸಾದಿ ಕಲಿತಂ-ಮಾಂಸ, ಮಾಂಸವೆ ಆದಿ, ಮೊದಲಾದವುಗಳಿಂದ - ಕಲಿತಂ, ಕೂಡಿಕೊಂಡಿರುವ ಶಾಲ್ಯಾನ್ನಂ, ಷಡ್ರಸೋಪೇತವಾದ ಅನ್ನವನ್ನು-ಅಥವಾ, ಮೃಷ್ಟಾನ್ನವನ್ನು, ಕಬಳಯತಿ-ತಿನ್ನುತ್ತಾನೆ, ಕಾಮಾಗ್ನೌ-ಮದನಾಗ್ನಿಯು, ಪ್ರದೀಪ್ತೇ ಸತಿ-ಪ್ರಜ್ವಲವಾಗುತ್ತಿರಲಾಗಿ, ವಧೂಂ-ಸ್ತ್ರೀಯನ್ನು, ಸುದೃಢತರಂ- ಅತಿ ಘಟ್ಟಿಯಾಗಿ, ಆಲಿಂಗತಿ ಪರಿರಂಭವನ್ನು ಮಾಡಿಕೊಳ್ಳುತ್ತಾನೆ, ವ್ಯಾಧೇಃ-ರೋಗಕ್ಕೆ, ಪ್ರತೀಕಾರಂ-ಪ್ರತಿಕ್ರಿಯೆಯು, ಸುಖವತಿ-ಸುಖವೆಂದು, ವಿಪರ್ಯಸ್ಯತಿ-ವಿಪರ್ಯಾಸವಾದ ಬುದ್ಧಿಯನ್ನು ಮಾಡುತ್ತಾನೆ ॥ ೯॥

ತಾತ್ಪರ್ಯ—ಅಜ್ಞಾನಮಹಿಮೆಯಿಂದ ಸುಖಾಭಾಸವಾದ ಅನ್ನಪಾನಾದಿಗಳಲ್ಲಿ ಅಂದರೆ ಅನ್ನಪಾನಾದಿ ವಿಷಯಗಳಲ್ಲಿ ಜನವು ಸುಖ ಬುದ್ಧಿಯನ್ನು ಮಾಡುತ್ತಾರೆಂಬುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗೆಂದರೆ;—ಮನುಷ್ಯರು ಬಾಯಾರಿಕೆಯಾದರೆ ಒಳ್ಳೆ ತಂಣಗೆ ಮಧುರವಾಗಿ ಇರುವ ನೀರನ್ನು ಕುಡಿಯುತ್ತಾರೆ. ಹಸಿವಾದರೆ ಮಾಂಸವೆ ಮೊದಲಾದ ಮೃಷ್ಟಾನ್ನವನ್ನು ಭೋಜನಮಾಡುತ್ತಾರೆ. ಮದನಾಗ್ನಿ ಪ್ರಜ್ವಲವಾದರೆ ಅಂದರೆ ಕಾಮವುಂಟಾದ ಕಾಲದಲ್ಲಿ ಸ್ತ್ರೀಯನ್ನು ಆಲಿಂಗನೆ ಮಾಡಿಕೊಂಡು ಬಾಹ್ಯಾಭ್ಯಂತರ ಸುರತವನ್ನು ಮಾಡುತ್ತಾರೆ. ಇದು ಇಂದ್ರಿಯ ಸಂಬಂಧವಾದ ವಿಷಯಾಪೇಕ್ಷೆಗಳು ಅವಿದ್ಯಾಕಾರ್ಯಗಳು ದುಃಖಹೇತುಗಳೆಂದು ತಿಳಿಯದೆ ಕ್ಷುತ್ ತೃಟ್ ಮದನರೋಗಜಾಲ ಅದಕ್ಕೆ ಶೀತಲಮಧುರ ಜಲಪಾನಾನ್ನ ಭೋಜನ ಕಾಮಿನೀಪರಿಷ್ವಂಗ ರೂಪವಾದವುಗಳು ಸುಖೌಷಧಗಳೆಂದು ಆಚರಿಸುತ್ತಾರೆ. ಇದು ಅಜ್ಞಾನಕಾರ್ಯಗಳು ಹೀಗೆಮಾಡದೆ ವಿಷಯಾದಿಗಳಲ್ಲಿ ವಿರಾಗಿಗಳಾಗಿದ್ದು ಶಾಶ್ವತವಾದ ಮೋಕ್ಷ ಸಾಮ್ರಾಜ್ಯವನ್ನು ಹೊಂದಬೇಕೆಂಬ ತಾತ್ಪರ್ಯ. ॥೧೯॥

ಶ್ಲೋ॥ ತುಂಗಂವೇಶ್ಮಸುತಾಸ್ಸತಾಮಭಿಮತಾಸ್ಸಂಖ್ಯಾತಿಗಾ ಸ್ಸಂಪದಃಕಲ್ಯಾಣೀದಯಿತಾವಯಶ್ಚನವಮಿತ್ಯಜ್ಞಾ ನಮೂಢೋಜನಃ ॥ ಮತ್ವಾವಿಶ್ವಮನಶ್ವರಂನಿವಿಶ ತೇಸಂಸಾರಕಾರಾಗೃಹೇಸಂದೃಶ್ಯಕ್ಷಣಭಂಗುರಂತದ ಖಿಲಂಧನ್ಯಸ್ತುಸಂನ್ಯಸ್ಯತಿ ॥ ೨೦ ॥

ಟೀಕು ॥ ತುಂಗಂ-ಉನ್ನತವಾದ, ವೇಶ್ಮ-ಮನೆಯು, ಸತಾಂ- ಸಜ್ಜ ನರಿಗೆ, ಅಭಿಮತಾಃ-ಸಂಮತರಾದ, ಸುತಾಃ - ಮಕ್ಕಳು, ಸಂಖ್ಯಾತಿಗಾಃ- ಲೆಕ್ಕಿಸುವದಕ್ಕೆ ಆಗದಂಥಾ, ಸಂಪದಃ-ಐಶ್ವರ್ಯಗಳು, ಕಲ್ಯಾಣೀ ಮಂಗ ಳಕರವಾದ, ದಯಿತಾ - ಹೆಂಡತಿಯು, ವಯಶ್ಚ - ಯೌವನವಯಸ್ಸುಕೂಡ, ನವಂ- ನೂತನವಾದದ್ದು, ಇತಿ- ಹೀಗೆಂಬುವಂಥ, ಅಜ್ಞಾನಮೂಢಃ ಅವಿ ವೇಕ ಮೋಹಿತವಾದ, ಜನಃ-ಜನವು, ವಿಶ್ವಂ-ಪ್ರಪಂಚವನ್ನು, ಅನಶ್ವರಂ ಶಾಶ್ವತವಾಗಿಯಿರುವವನ್ನಾಗಿ, ಮತ್ವಾ- ತಿಳಿದು, ಸಂಸಾರಕಾರಾಗೃಹೇ- ಸಂಸಾರ-ಸಂಸಾರವೆಂಬುವ, ಕಾರಾಗೃಹೇ-ಬಂದೀಕಾನೆ ಮನೆಯಲ್ಲಿ, ನಿವಿಶ ತಿ-ಪ್ರವೇಶಮಾಡುತ್ತಾನೆ, ಧನ್ಯಸ್ತು - ಯೋಗಿಗಳಾದರೋ, ತದಖಿಲಂ- ಆ ಸಮಸ್ತ, ಪ್ರಪಂಚವನ್ನು ಕ್ಷಣಭಂಗುರಂ-ಕ್ಷಣ-ಕ್ಷಣಕಾಲದಲ್ಲಿ, ಭಂಗು ರಂ-ನಾಶವಾಗುವದನ್ನಾಗಿ-ಸಂದೃಶ್ಯ-ಚನ್ನಾಗಿ ಆಲೋಚಿಸಿನೋಡಿ, ಸಂನ್ಯ ಸ್ಯತಿ-ತ್ಯಾಗಮಾಡುವಂಥಾವರಾಗುತ್ತಾರೆ ।೨೦॥

ತಾತ್ಪರ್ಯ—ಅಜ್ಞಾನಿಗಳಾದ ಸಂಸಾರಿಗಳು ವಿಷಯಾಸಕ್ತರಾಗಿ ದುಃಖಭಾಜನರಾಗುತ್ತಾರೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದ ರೆ:-ಒಳ್ಳೆ ಉಪ್ಪರಿಗೆ ಮನೆ ಇದೆ ಎಂದೂ, ಮಕ್ಕಳು ಸಜ್ಜನರಿಗೆ ಸಂಮ ತರಾದ ಯೋಗ್ಯರಾಗಿ ಇದ್ದಾರೆಂದೂ, ಹೆಂಡತಿ ಅನುಕೂಲವತಿಯಾಗಿ ಯೂ, ಸೌಂದರ್ಯಶಾಲಿನಿಯಾಗಿಯೂ ಇದ್ದಾಳೆಂದೂ, ಅಜ್ಞಾನಿಗಳಾದ ಮೂಢಜನಗಳು ತಮಗೆ ಹೆಚ್ಚು ಐಶ್ವರ್ಯವೂ ಯೌವನ ವಯಸ್ಸು ಇವು ಗಳೆಲ್ಲಾ ನಾಶವಿಲ್ಲದೆ ಯಾವಾಗ್ಯೂ ಶಾಶ್ವತವಾಗಿರುತ್ತೆಂದೂ ಸಂಸಾರವೆಂ ಬುವ ಸೆರೆಮನೆಗೆ ಹೋಗುತ್ತಾರೆ. ಯೋಗಿಜನಗಳು ಈ ಸಂಸಾರವೆಂ ಬುವದು ವಿದ್ಯುತ್ ಪ್ರಭೆಯೋಪಾದಿಯಲ್ಲಿ ಕ್ಷಣಭಂಗುರವೆಂದು ತಿಳಿದು ಈ

ಸಂಸಾರದ ಆಶೆಯನ್ನು ಬಿಟ್ಟು ವಿಷಯಾಸಿಗಳಿಂದ ಉಂಟಾಗುವ ದುಃಖಕ್ಕೆ ಸಿಕ್ಕದೆ ನಿತ್ಯಾನಂದದಲ್ಲಿ ಇರುತ್ತಾರೆ. ಆದ್ದರಿಂದ ಶಬ್ದಾದಿ ವಿಷಯುಗಳಿಗೆ ಆಶೆಪಡದೆ ಯೋಗಾನಂದ ಸುಖವನ್ನು ಅನುಭವಿಸಬೇಕೆಂದು ತಾತ್ಪರ್ಯ. ವೈರಾಗ್ಯಶತಕೇ ವಿಷಯುಪರಿತ್ಯಾಗ ವಿಡಂಬನ ಪದ್ಧತಿಃ ||೨೦||

ಇತಿ ಶ್ರೀ ಭರ್ತೃಹರಿಸುಭಾಷಿತೇ ವೈರಾಗ್ಯ ಶತಕೇ ವಿಷಯುಪರಿತ್ಯಾಗ ವಿಡಂಬನ ಪದ್ಧತಿಃ

ಭರ್ತೃಹರಿಸುಭಾಷಿತೇ ವೈರಾಗ್ಯ ಶತಕೇ ಯಾಚ್ಞಾದೈನ್ಯದೂಷಣ ಪದ್ಧತಿ ಪ್ರಾರಂಭಃ.



ಶ್ಲೋ|| ದೀನಾದೀನಮುಖೈಸ್ಸದೈವಶಿಶುಕೈ ರಾಕೃಷ್ಟಜೀರ್ಣಾಂಬರಾ ಕ್ರೋಶದ್ಭಿಃಕ್ಷುಧಿತೈರ್ನಿರನ್ನವಿಧುರಾ ದೃಶ್ಯಾನಚೇದ್ಗೇಹಿನೀ || ಯಾಚ್ಞಾಭಂಗಭಯೇನ ಗದ್ಗದಗಳತ್ತ್ರುಟ್ಯದ್ವಿಲೀನಾಕ್ಷರಂ ಕೋದೇಹೀತಿವದೇತ್ಸ್ವದಗ್ಧಜಠರಸ್ಯಾರ್ಥೇ ಮನಸ್ವೀಪುಮಾನ್ ||೨೧

ಟೀಕು | ದೀನಾದೀನಮುಖೈಃ- ದೀನಾಃ-ದರಿದ್ರರಾಗಿರೋಣದರಿಂದಲೆ ದೀನ-ಬಗ್ಗಿದಂಥ, ಮುಖೈಃ-ಮುಖಗಳುಳ್ಳಂಥಾ, ಸದೈವಕ್ರೋಶದ್ಭಿಃ ಯಾವಾಗಲೂ ಅಳುತಲಿರುವ. ಕ್ಷುಧಿತೈಃ ಹಸಿವುಗಳುಳ್ಳ, ಶಿಶುಕೈಃ - ಮಕ್ಕಳಗಳಿಂದ, ಆಕೃಷ್ಟಜೀರ್ಣಾಂಬರಾ-ಆಕೃಷ್ಟ. ಎಳೆಯಲ್ಪಟ್ಟ, ಜೀರ್ಣ-ಶಿಥಿಲವಾಗಿರುವ, ಅಂಬರಾ ವಸ್ತ್ರವುಳ್ಳ, ನಿರನ್ನವಿಧುರಾ-ನಿರಂನ ಅನ್ನಪಾನಾದಿಗಳಿಂದ ರಹಿತಳಾದ ಕಾರಣವೆ, ವಿಧುರಾ-ವಿಹ್ವಲಳಾದ (ಅಥವಾ ದುಃಖಿತಳಾದ) ಗೇಹಿನೀ ಹೆಂಡತಿಯು, ದೃಶ್ಯಾ-ದೃಷ್ಟಿಗೋಚರಳು, ನಚೇದ್ಯದಿ-ಆಗದೆಹೋದರೆ, ಸ್ವಜಠರಸ್ಯಾರ್ಥೇ-ತನ್ನ ಹೊಟ್ಟೆಯನ್ನು ತುಂಬುವದಕ್ಕೋಸ್ಕರ, ಕಃ-ಯಾವ. ಮನಸ್ವೀ-ಮಾನವಂತನಾದ, ಪುಮಾನ್-ಮನುಷ್ಯನು, ಯಾಚ್ಞಾಭಂಗಭಯೇನ-ಯಾಚ್ಞಾ-ಬೇಡೋಣದರ, ಭಂಗ ನಾಶದ-ಭಯೇನ-ಭೀತಿಯಿಂದ, ಗದ್ಗದಗಳತ್ತ್ರುಟ್ಯದ್ವಿಲೀನಾಕ್ಷರಂ - ಗದ್ಗದ, ಗದ್ಗದಧ್ವನಿಯಿಂದ ಕೂಡಿದ, ಗಳ-ಕಂಠನಾಳದಲ್ಲಿ, ತ್ರುಟ್ಯತ್- ಸೀಳಿಹೊದಂಥಾವಾದ

ಕಾರಣವೆ, ವಿಲೀನ-ಅಡಗಿಹೋದ ಅಕ್ಷರವುಳ್ಳಂತೆ ಹೇಗೋ ಹಾಗೆ ವದೇತ್-ಕೇಳಿಯಾನು, ಅಥವಾ ಯಾಚನೆಮಾಡಿಯಾನು, ನೋ ವದೇತ್-ಕೇಳುವದೇ ಇಲ್ಲ. ||೨೧||

ತಾತ್ಪರ್ಯ—ಯಾಚನೆಯು ಬಹುಕಷ್ಟದ್ದು ಇದು ಸಂಸಾರ ಮೂಲದಿಂದ ಉಂಟಾಗುವವೆಂದು ಹೇಳುತ್ತಾನೆ. ಅದು ಹೇಗೆಂದರೆ;-ದರಿದ್ರತನದಿಂದ ಮುಖಬಾಡಿ ತಲೆಬಗ್ಗಿಸಿಕೊಂಡು ಹಸಿವಿನಿಂದ ಅಳುತ್ತಾ ಇರುವ ಮಕ್ಕಳುಗಳು ಹಳೆಯದಾಗಿಯೂ ಜೀರ್ಣವಾಗಿಯೂ ಇರುವ ತಾಯಿಯು ಉಟ್ಟಿರುವ ವಸ್ತ್ರಗಳನ್ನು ಹಿಡಿದು ಅನ್ನಕ್ಕೋಸ್ಕರ ಎಳೆಯುತ್ತಲಿರುವಮಕ್ಕಳಿಂದಕೂಡಿದ ಹೆಂಡತಿ ಗಂಡನಿಗೆ ಈತೊಂದರೆಪಡುವ ಹೆಂಡತಿಯ ಆಗದೆ ಇಲ್ಲದೆ ಇದ್ದರೆ ಯೋಗ್ಯನಾದ ಯಾವಮನುಷ್ಯ ತಾನೆ ತನ್ನ ಒಬ್ಬನಹೊಟ್ಟೆಗೋಸ್ಕರ ಪರರಲ್ಲಿ ಹೋಗಿ ಕೇವಲದೈನ್ಯದಿಂದಲು ಗದ್ಗದಧ್ವನಿಯಿಂದಲೂ ಕೇಳುವಕಾಲದಲ್ಲಿ ಭಯದಡೆಸೆಯಿಂದ ಸಂವಿಗ್ನಾಕ್ಷರವುಳ್ಳಂತೆ ಹೇಗೋ ಹಾಗೆ ಯಾಚನೆಮಾಡಿಯಾನು? ಮಾಡುವದಿಲ್ಲ. ಆದ್ದರಿಂದ ಯಾಚನಾವೃತ್ತಿಯು ಬಹಳ ಕಷ್ಟದ್ದೆಂದು ತಾತ್ಪರ್ಯ. ||೨೧||

ಶ್ಲೋ|| ಅಭಿಮತಮಹಾಮಾನಗ್ರಂಥಿಪ್ರಭೇದಪಟೀಯಸೀ
ಗುರುತರಗುಣಗ್ರಾಮಾಂಭೋಜಸ್ಫುಟೋಜ್ವಲ
ಚಂದ್ರಿಕಾ || ವಿಪುಲವಿಲಸಲ್ಲಜ್ಜಾವಲ್ಲೀವಿತಾನಕುಠಾರಿ
ಕಾಜಠರಪಿಠರೀದುಷ್ಪೂರೇಯಂಕರೋತಿವಿಡಂಬನಾಂ

ಟೀಕು | ಅಭಿಮತಮಹಾಮಾನಗ್ರಂಥಿಪ್ರಭೇದಪಟೀಯಸೀ-ಅಭಿಮತ ಸಮ್ಮತವಾದ, ಮಹಾ-ಅಧಿಕವಾದ, ಮಾನ- ಅಭಿಮಾನವೆಂಬುವ, ಗ್ರಂಥಿ-ಕಟ್ಟನ್ನು, ಪ್ರಭೇದ ಸೀಳೋಣದರಲ್ಲಿ, ಪಟೀಯಸೀ - ಸಮರ್ಥವಾದ ಗುರುತರಗುಣಗಣಗ್ರಾಮಾಂಭೋಜಸ್ಫುಟೋಜ್ವಲಚಂದ್ರಿಕಾ-ಗುರುತರ-ಅತ್ಯಂತವಾದ, ಗುಣ - ಶೌರ್ಯ ದಾಯಾರ್ದಿ ಗುಣಗಳ ಗ್ರಾಮ - ಸಮುದಾಯುವೆಂಬುವ, ಅಂಭೋಜ-ಕಮಲಕ್ಕೆ ಸ್ಫುಟ ಚೆನ್ನಾಗಿ, ಉಜ್ವಲ - ಪ್ರಕಾಶಿಸುತ್ತಿರುವ ಚಂದ್ರಿಕಾ-ಕೌಮುದೀ ಸ್ವರೂಪವಾದ ವಿಪುಲವಿಲಸಲ್ಲಜ್ಜಾವಲ್ಲೀವಿತಾನಕುಠಾರಿಕಾ-ವಿಪುಲ-ಹೆಚ್ಚಾಗಿ, ವಿಲಸತ್ ಪ್ರಕಾಶಮಾನವಾದ, ಲಜ್ಜಾವಲ್ಲೀ ನಾಚಿಕೆಯೆಂಬುವ ಬಳ್ಳಿಗಳ, ವಿತಾನ-ಸಮೂಹಕ್ಕೆ, ಕುಠಾರಿಕಾ-ಕೊ

ಡಲಿಯು ಪ್ರಾಯವಾದ, ಇಯಂ-ಈ, ದುಷ್ಪೂರಾ-ತುಂಬುವದಕ್ಕೆ ಆಗದೆ ಇರುವ, ಜಠರಪಿಠರೀ-ಜಠರ-ಹೊಟ್ಟೆಯೆಂಬುವ, ಪಿಠರೀ-ಪೆಟ್ಟಿಗೆಯು, ವಿಡಂಬನಾಂ-ಯಾಚ್ಞಾನುಕೂಲವನ್ನು, ಕರೋತಿ ಉಂಟುಮಾಡುತ್ತೆ ॥೨೬॥

ತಾತ್ಪರ್ಯ—ಈ ಶ್ಲೋಕದಲ್ಲಿ ಹೊಟ್ಟೆಯನ್ನು ತುಂಬಿಸಿಕೊಳ್ಳುವದಕ್ಕೋಸ್ಕರ ತಶೆಯುಂಬುವದು ಮನುಷ್ಯನನ್ನು ಯಾಚನೆಯನ್ನು ಮಾಡಿಸುತ್ತೆ ಎಂದು ಹೇಳುತ್ತಾನೆ. ಅದು ಹೇಗಂದರೆ;—ಮನುಷ್ಯನ ಮಾನವನ್ನು ಹೋಗಲಾಡಿಸುತ್ತದೆ. ಮತ್ತು ತನ್ನಲ್ಲಿ ಎಷ್ಟು ಸುಗುಣಗಳು ಇದ್ದಾಗ್ಯೂ ಅರಳಿದಕಮಲಕ್ಕೆ ಬೆಳದಿಂಗಳಹಾಗೆ ಮುಚ್ಚುತ್ತದೆ. ಲಜ್ಜಾ ಎಂಬ ಬಳ್ಳಿಗೆ ಕೊಡಲಿಯೋಪಾದಿಯಲ್ಲಿ ಆಚರಿಸುತ್ತದೆ. ಹೊಟ್ಟೆಯೆಂಬುವ ಪೆಟ್ಟಿಗೆ ತುಂಬುವದಕ್ಕೆ ಯಾಚನೆಮಾಡಿಸುತ್ತಾ ಅಂದರೆ ಯಾಚಕನಿಗೆ ತನ್ನ ಗುಣಗಳನ್ನು ಹೇಳಿಕೊಳ್ಳುವದಕ್ಕೆ ಆಗುವದಿಲ್ಲ. ಮಾನವಿಲ್ಲ. ನಾಚಿಕೆ ಎಂಬುವದು ಸುತರಾಂ ಇರುವದಿಲ್ಲ. ಮಾನಹಾನಿ ಲಜ್ಜಾತ್ಯಾಗ ಈರೀತಿಯಿಂದ ಹೊಟ್ಟೆಗೋಸ್ಕರ ಯಾಚನಾವೃತ್ತಿಯನ್ನು ಮಾಡಬೇಕಾಗುತ್ತೆಂದು ತಾತ್ಪರ್ಯ. ಉಪಮಾಲಂಕಾರಃ ಹರಿಣೀವೃತ್ತಂ. ॥೨೬॥

ಶ್ಲೋ॥ ಪುಣ್ಯೇಗ್ರಾಮೇವನೇವಾಮಹತಿಸಿತಪಟಚ್ಛನ್ನಪಾಲಿಂ
ಕಪಾಲಂಹ್ಯಾದಾಯನ್ಯಾಯಗರ್ಭ ದ್ವಿಜಹುತಹುತ
ಭುಗ್ಧೂಮಧೂಮ್ರೋಪಕಂಠೇ । ದ್ವಾರಂದ್ವಾರಂ
ಪ್ರವಿಷ್ಟೋವರಮುದರದರೀಪೂರಣಾಯಕ್ಷುಧಾರ್ತೋ
ಮಾನೀಪ್ರಾಣೈಸ್ಸನಾಥೋನಪುನರನುದಿನಂತುಲ್ಯ
ಕುಲ್ಯೇಷುದೀನಃ ॥ ೨೭ ॥

ಟೀಕಾ ॥ ನ್ಯಾಯಗರ್ಭದ್ವಿಜಹುತಹುತಭುಕ್ ಧೂಮಧೂಮ್ರೋಪಕಂಠೇ-ನ್ಯಾಯಗರ್ಭ-ನ್ಯಾಯ-ಮೀಮಾಂಸಾದಿ ನ್ಯಾಯಗಳನ್ನು, ಗರ್ಭ-ಗರ್ಭದಲ್ಲಿವುಳ್ಳ, ದ್ವಿಜ-ಬ್ರಾಹ್ಮಣರುಗಳಿಂದ, ಹುತ-ಹೋಮ ಮಾಡಲ್ಪಟ್ಟ, ಹುತಭುಕ್-ಯಜ್ಞೇಶ್ವರನ ಧೂಮ-ಹೊಗೆಯಿಂದ, ಧೂಮ್ರ-ಕೃಷ್ಣಲೋಹಿತಗಳಾದ, ಉಪಕಂಠೇ-ಸಮೀಪಪ್ರದೇಶವುಳ್ಳ, ಮಹತಿ-ವಿಸ್ತಾರವಾದ,

ಪುಣ್ಯಗ್ರಾಮೇ-ಪುಣ್ಯ-ಪವಿತ್ರಕರವಾದ, ಗ್ರಾಮೇ ಊರಿನಲ್ಲಿಯಾಗಲಿ, ವನೇ ವಾ-ಅರಣ್ಯದಲ್ಲಿಯಾಗಲಿ, ಸಿತಪಟಚ್ಛನ್ನಪಾಲಿಂ-ಸಿತ ಶುಭ್ರವಾದ, ಪಟ ವಸ್ತ್ರದಿಂದ, ಛನ್ನ-ಮುಚ್ಚಲ್ಪಟ್ಟ, ಪಾಲಿಂ-ಅಂಚುಗಳುಳ್ಳ, ಕಪಾಲಂ ಭಿಕ್ಷಾಪಾತ್ರೆಯನ್ನು, (ಅಥವಾ ಶರಾವವನ್ನು) ಆದಾಯ ತೆಗೆದುಕೊಂಡು ಕ್ಷುಧಾರ್ತಃ-ಕ್ಷುತ್-ಹಸಿವಿನಿಂದ, ಆರ್ತಃ ಪೀಡಿತನಾದ, ಮಾನೀ-ಮಾನವಂತನಾದ, ಪುರುಷಃ-ಮನುಷ್ಯನು, ಉದರದರೀ ಪೂರಣಾಯ- ಉದರ- ಹೊಟ್ಟೆಯೆಂಬುವ, ದರೀ-ಗುಹೆಯ, ಪೂರಣಾಯ-ತುಂಬಿಸುವದಕ್ಕೋಸ್ಕರ, ದ್ವಾರಂದ್ವಾರಂ-ಪ್ರತಿಬಾಗಿಲುಗಳನ್ನು, ಪ್ರವಿಷ್ಟಃ-ಭಿಕ್ಷಾರ್ಥವಾಗಿ ಪ್ರವೇಶಮಾಡಿದಂಥಾವನು ಆಗುತ್ತಾನೆ, ಪ್ರಾಣೈಸ್ಸನಾಥಃ, ಪ್ರಾಣೈಃ-ಪ್ರಾಣಗಳಿಂದ, ಸನಾಥಃ-ಕೂಡಿದವನಾಗಿರುವದು, ವರಂ-ಯೋಗ್ಯವಾದದ್ದು, ತುಲ್ಯಕುಲ್ಯೇಷು ದಿನೇಷು-ತುಲ್ಯ- ಸಮಾನವಾದ, ಕುಲ್ಯೇಷು ಮನಃ - ಕುಲಜನಗಳಲ್ಲಿ ಆದರೇನೋ, ದೀನಃ- ದೈನ್ಯವಾಗಿ ಯೋಚಿಸಿಯು, ನವರಂಹಿ - ಯೋಗ್ಯವಾದದ್ದಲ್ಲವಷ್ಟೆ ॥೨೩॥

ತಾತ್ಪರ್ಯ—ಲೋಕದಲ್ಲಿ ಮಾನವಂತರಾದ ದರಿದ್ರರು ಸ್ವಜನದಲ್ಲಿ ಯಾಚ್ಞಾವೃತ್ತಿಯಿಂದ ಜೀವನ ಮಾಡುವದಕ್ಕಿಂತಲೂ ಬೇರೆ ಗ್ರಾಮದಲ್ಲಿ ಹೋಗಿ ಭಿಕ್ಷಾಟನವನ್ನಾದರೂ ಮಾಡುವದು ಉತ್ತಮವೆಂದು ಆರೀತಿಯಾಗಿ ಮಾಡುತ್ತಾರೆ. ವೇದಶಾಸ್ತ್ರಗಳ ಗರ್ಜನದಲ್ಲಿವುಳ್ಳ ಅಂದರೆ ವೇದಶಾಸ್ತ್ರಗಳನ್ನು ಓದಿಯಿರುವ ಬ್ರಾಹ್ಮಣರಿಂದ ಹೋಮಮಾಡಲ್ಪಟ್ಟಗಾರ್ಹಪತ್ಯ ಆ ಹವನೀಯ ದಕ್ಷಿಣಾಗ್ನಿಗಳ ಧೂಮೋಪ ಕಂಠನಾದ ಗ್ರಾಮದಲ್ಲಿಯಾಗಲಿ ಅಥವಾ ಅವಧೂತರೆ ಮೊದಲಾದ ಋಷಿಗಳ ಪುಣ್ಯಾಶ್ರಮಗಳಲ್ಲಿಯೆ ಆಗಲಿ ಕಪಾಲ ಭಿಕ್ಷವನ್ನು ಮಾಡಿ ಹೊಟ್ಟೆತುಂಬಿಸಿಕೊಂಡು ಇರುವದು ಉತ್ತಮ. ಸಮಾನ ಕುಲೀನರಾದ ಜನಗಳಲ್ಲಿ ಅಂದರೆ ತಮ್ಮ ಸ್ವಜನದಲ್ಲಿ ಯಾಚನೆಮಾಡಿ ದೈನ್ಯದಿಂದ ಜೀವನ ಮಾಡುವನು ಉತ್ತಮವಲ್ಲವೆಂದು ತಾತ್ಪರ್ಯವು. ॥ ಸ್ರಗ್ಧರಾವೃತ್ತಂ ॥ ಮ್ರಭ್ನೈರ್ಯಾನಾಂತ್ರಯೇಣತ್ರಿಮುನಿಯುತಾಸ್ರಗ್ಧರಾ ಕೀರ್ತಿತೇಯಮಿ ತಿಲಕ್ಷಣಾತ್ ॥೨೪॥

ಶ್ಲೋ॥ ಗಂಗಾತರಂಗಕಣಶೀಕರಶೀತಲಾನಿ ವಿದ್ಯಾಧರಾಧ್ಯುಷಿತಚಾರುಶಿಲಾತಲಾನಿ ॥ ಸ್ಥಾನಾನಿಕಿಂಹಿಮವತಃ

ಪ್ರಳಯಂಗತಾನಿ ಯತ್ಸಾವಮಾನಪರಪಿಂಡರತಾ ಮನುಷ್ಯಾಃ ॥೨೪॥

ಟೀಕಾ ॥ ಗಂಗಾತರಂಗಕಣಶೀಕರಶೀತಲಾನಿ - ಗಂಗಾ - ಮಂದಾಕಿನೀ ನದಿಯ, ತರಂಗ-ತೆರೆಗಳ, ಕಣ ಉದಕಬಿಂದುಗಳ ಸಂಬಂಧಿಯಾದ, ಶೀಕರ- ತುಂತುರುಗಳಿಂದ ಶೀತಲಾನಿ- ತಣ್ಣಗಿರುವ ವಿದ್ಯಾಧರಾಧ್ಯುಷಿತ ಚಾರುಶಿಲಾತಲಾನಿ- ವಿದ್ಯಾಧರರಿಂದ ಕೂತುತಂಣಗೆ ಇರುವಂಥ ಸುಂದರಶಿಲಾತಲಗಳುಳ್ಳ- ಹಿಮವತಃ- ಹಿಮವತ್ಪರ್ವತದ ಸ್ಥಾನಾನಿ, ಸ್ಥಳಗಳು, ಪ್ರಳಯಂ-ನಾಶವನ್ನು, ಗತಾನಿಕಿಂ- ಹೊಂದಿದವೆ ಏನು - ಯತ್ ಯಾವ ಕಾರಣದೆಸೆಯಿಂದ, ಮನುಷ್ಯಾಃ - ಮನುಷ್ಯರು, ಸಾವಮಾನಪರ ಪಿಂಡರತಾಃ ಸಾವಮಾನ - ಅವಮಾನದಿಂದ ಕೂಡಿದ, ಪರಾನ್ನವನ್ನು -ತಿನ್ನುವದರಲ್ಲಿ ರತಾಃ - ಆಸಕ್ತರಾಗುತ್ತಾರೋ, ತೇನೇತಿಪೂರ್ವೇಣಾನ್ವಯಃ ॥೨೪॥

ತಾತ್ಪರ್ಯ—ಈ ಶ್ಲೋಕದಲ್ಲಿ ಮನುಷ್ಯನು ಅವಮಾನದಿಂದ ಪರಾನ್ನವನ್ನು ತಿನ್ನುವದಕ್ಕಿಂತ ಹಿಮವತ್ಪರ್ವತದಲ್ಲಿ ತಪಸ್ಸು ಮಾಡಬಾರದೆ ಎನ್ನುವದನ್ನು, ಜನಗಳನ್ನು ಕುರಿತು ಹೇಳುತ್ತಾನೆ. ಅದು ಹೇಗಂದರೆ:- ಗಂಗಾನದಿಯ ತೆರೆಗಳ ಉದಕ ಬಿಂದುಗಳ ತುಂತುರುಗಳು ಬಿದ್ದು ತಣ್ಣಗಿರುವ ಮತ್ತು ವಿದ್ಯಾಧರರು ತಪಸ್ಸುಮಾಡುತ್ತಾ ಇದ್ದ ಹಿಮವತ್ಪರ್ವತದ ಸ್ಥಳಗಳು ನಾಶವಾಗಿ ಹೋದವೆ ಏನು! ಅವುಗಳು ಇದ್ದರೆ ಅವಮಾನದಿಂ ಪರಾನ್ನವನ್ನಾದರೂ ತಿಂದು ಏಕೆ ಮನುಷ್ಯನು ಬದುಕಿರಬೇಕು ಈರೀತಿ ಅಪಮಾನದಿಂದ ಜೀವನ ಮಾಡುವದಕ್ಕಿಂತ ಎಲ್ಲಿಯಾದರೂ ಹೋಗಿ ಬೆಟ್ಟದಲ್ಲಿ ತಪಸ್ಸು ಮಾಡುವದು ಉತ್ತಮವೆಂದು ತಾತ್ಪರ್ಯ. ॥ ವಸಂತ ತಿಲಕಾವೃತ್ತಂ ॥ ಉಕ್ತಾ ವಸಂತತಿಲಕಾ ತಭಜಾಜಗೌಗಃ ॥ ॥೨೪॥

ಶ್ಲೋ॥ ಕಿಂ ಕಂದಾಃ ಕಂದರೇಭ್ಯಃ ಪ್ರಳಯಮುಪಗತಾ ನಿರ್ಝರಾ ವಾ ಗಿರಿಭ್ಯಃ ಪ್ರಧ್ವಸ್ತಾ ವಾ ತರುಭ್ಯಃ ಸರಸ ಫಲಭೃತೋ ವಲ್ಕಲಿನ್ಯಶ್ಚ ಶಾಖಾಃ ॥ ವೀಕ್ಷ್ಯಂತೇ ಯನ್ಮುಖಾನಿ ಪ್ರಸಭಮಪಗತಪ್ರಶ್ರಯಾಣಾಂ ಖಲಾನಾಂ ದುಃಖಾಪ್ತಸ್ವಲ್ಪವಿತ್ತಸ್ಮಯಪವನವಶಾನರ್ತಿತಭ್ರೂಲತಾನಿ

ಟೀಕಾ ॥ ಕಂದರೇಭ್ಯಃ- ಗಿರಿ-ಗುಹೆಗಳ ದೆಸೆಯಿಂದ, ಕಂದಾಃ - ಕಂದ ಮೂಲಗಳು ಪ್ರಳಯಂ ನಾಶವನ್ನು, ಉಪಗತಾಃಕಿಂ-ಹೊಂದಿದವೇಯೇನು ಗಿರಿಭ್ಯಃ-ಪರ್ವತಗಳ ದೆಸೆಯಿಂದ, ನಿರ್ಝರಾವಾ-ನದೀಪ್ರವಾಹಗಳು ಆದ ರೂ, ಪ್ರಳಯಂ-ನಾಶವನ್ನು, ಉಪಗತಾಃಕಿಂ-ಹೊಂದಿದವೆಯೇನು. ಸರಸ ಫಲಭೃತಃ-ಸರಸ-ಮಧುರರಸದಿಂದ ಕೂಡಿ ಇರುವ, ಫಲ - ಹಣ್ಣುಗಳನ್ನು, ಭೃತಃ-ಧರಿಸಿಕೊಂಡಿರುವ, ವಲ್ಕಲಿನ್ಯಃ-ನಾರುವಸ್ತ್ರಗಳುಳ್ಳ, ಶಾಖಾಃ-ಕೊಂ ಬೆಗಳು, ತರುಭ್ಯಃ ವೃಕ್ಷಗಳ ದೆಸೆಯಿಂದ, ಪ್ರಧ್ವಸ್ತಾಃಕಿಂ - ಮುರಿದು ಬಿದ್ದುಹೋದವೆ ಏನು, ಯತಃ-ಯಾವ ಕಾರಣದಿಂದ, ಪ್ರಸಭಂ-ಅತ್ಯಂತ ವಾಗಿ ಅಪಗತ ಪ್ರಶ್ರಯಾಣಾಂ-ಹೋದ ವಿನಯವುಳ್ಳಂಥ, ಖಲಾನಾಂ ದು ಷ್ಟಜನರ ದುಃಖಾಪ್ತ ಸ್ವಲ್ಪವಿತ್ತಸ್ಮಯಪವನವಶಾತ್, ದುಃಖ- ಅತಿಕ್ಲೇಶ ದಿಂದ, ಆಪ್ತ-ಹೊಂದಲ್ಪಟ್ಟ, ಸ್ವಲ್ಪ-ಕೊಂಚವಾದ, ವಿತ್ತ- ದ್ರವ್ಯದಿಂದುಂ ಟಾದ, ಸ್ಮಯ ಗರ್ವವೆಂಬುವ, ಪವನ-ವಾಯುವಿನ ದೆಸೆಯಿಂದ, ನರ್ತಿತ- ಕುಣಿಸಲ್ಪಟ್ಟ, ಭ್ರೂಲತಾನಿ-ಲತಾಸದೃಶವಾದ ಹುಬ್ಬುಗಳುಳ್ಳ, ಮುಖಾನಿ- ಆನನಗಳು ಯಾಚಕಜನಗಳಿಂದ, ವೀಕ್ಷ್ಯಂತೇ-ನೋಡಲ್ಪಡುತ್ತವೆ? ॥೨೫॥

ತಾತ್ಪರ್ಯ— ಯಾಚನಾವೃತ್ತಿಗಿಂತಲೂ ಜೀವನೋಪಾಯವಿಲ್ಲವೆ ಎಂಬುವನ್ನು ವಿತರ್ಕದಿಂದ ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇ ಗಂದರೆ;— ಪರ್ವತದ ಗುಹೆಯಲ್ಲಿ ಅಂದರೆ ಯಾವತ್ತು ಬೆಟ್ಟಗಳಲ್ಲಿಯೂ ಆಹಾರಕ್ಕೆ ಯೋಗ್ಯವಾದ ಕಂದಮೂಲಗಳಿಲ್ಲವೆ? ಮತ್ತು ಬಾಯಾರಿದರೆ ಗಿರಿನದಿಗಳು ಇಲ್ಲವೆ ಅವು ಒಣಗಿಹೋದವೆ ಪುಣ್ಯಾಶ್ರಮಗಳಲ್ಲಿ ಋಷಿಗಳು ನಾರುಮಡಿಗಳನ್ನು ಒಣಗಿಹಾಕುವ ಮರದ ಕೊಂಬೆಗಳಲ್ಲಿ ಬಿಡತಕ್ಕ ಒಳ್ಳೆ ರಸವತ್ತಾದ ಹಣ್ಣುಗಳು ನಾಶವಾಗಿ ಹೋದವೆ? ಏನು? ಕೇವಲ ಕಷ್ಟದಿಂ ದ ಸ್ವಲ್ಪ ದ್ರವ್ಯವನ್ನು ಸಂಪಾದಿಸಿಕೊಂಡು ಅದರಿಂದ ಉಂಟಾದ ಅಹಂ ಕಾರವಾಯುವಿನಿಂದ ಅಲ್ಲಾಡಿಸುತ್ತಿರುವ ಹುಬ್ಬುಗಳುಳ್ಳ ದುರ್ವಿನೀತರ ಮುಖಗಳನ್ನು ಏಕೆ ಯಾಚಕಜನರು ನೋಡುತ್ತಾರೆ ಇಂಥಾವರ ಮುಖ ವನ್ನು ನೋಡುವದಕ್ಕಿಂತ ಅರಣ್ಯದಲ್ಲಿ ತಪಸ್ಸುಮಾಡುವದು ಒಳ್ಳೆಯದು ಉಪಮಾರೂಪಕಯೋಸ್ಸಂಸೃಷ್ಟಿಃ ॥೨೫॥

ಶ್ಲೋ॥ ಪುಣ್ಯೈರ್ಮೂಲಫಲೈಸ್ತಥಾಪ್ರಣಯಿನೀಂವೃತ್ತಿಂ
ಕುರುಷ್ವಾಧುನಾಭೂಶಯ್ಯಾಂನವಪಲ್ಲವೈರಕೃಪಣೈ

ರುತ್ತಿಷ್ಠ ಯಾವೋ ವನಂ ॥ ಕ್ಷುದ್ರಾಣಾಮವಿವೇಕ
ಮೂಢಮನಸಾಂ ಯತ್ರೇಶ್ವರಾಣಾಂ ಸದಾ ವಿತ್ತವ್ಯಾ
ಧಿವಿಕಾರವಿಹ್ವಲಗಿರಾಂ ನಾಮಾಪಿ ನ ಶ್ರೂಯತೇ ॥೨೬॥

ಟೀಕು ॥ ಪುಣ್ಯೈಃ-ಪರಿಶುದ್ಧಗಳಾದ, ಮೂಲಫಲೈಃ-ಕಂದಮೂಲಾ ದಿಫಲಗಳಿಂದ, ಪ್ರಣಯಿನೀಂ ಯೋಗ್ಯವಾದ, ವೃತ್ತಿಂ-ಜೀವನವನ್ನು, ಅಧುನಾ-ಈಗ, ಕುರುಷ್ವ-ಮಾಡು, ಅರ್ಭ್ಯಕೈಃ ಬಾಲ ಮೃದುಗಳಾಗಿರುವಂಥ, ನವಪಲ್ಲವೈಃ- ನೂತನಗಳಾದ ಚಿಗರುಗಳಿಂದ, ಭೂಶಯ್ಯಾಂ-ಭೂ- ಭೂಮಿಯಲ್ಲಿ, ಶಯ್ಯಾಂ-ಹಾಸಿಗೆಯನ್ನು, ಕುರುಷ್ವ-ಮಾಡು, ವನಂ ಅರಣ್ಯವನ್ನು ಕುರಿತು, ಯಾವಃ- ಹೋಗೋಣ. ಉತ್ತಿಷ್ಠ-ಏಳು, ಯತ್ರ-ಯಾವ ಅರಣ್ಯದಲ್ಲಿ, ಸದಾ-ಯಾವಾಗಲು, ಕ್ಷುದ್ರಾಣಾಂ-ದುರ್ಜನರಾದ, ಅವಿವೇಕಮೂಢಮನಸಾಂ-ಅವಿವೇಕ-ಅಜ್ಞಾನದಿಂದ, ಮೂಢ - ಕರ್ತವ್ಯಾಕರ್ತವ್ಯವಿಚಾರ ಶೂನ್ಯವಾದ, ಮನಸಾಂ ಮನಸ್ಸುಳ್ಳ, ವಿತ್ತವ್ಯಾಧಿವಿಕಾರವಿಹ್ವಲಗಿರಾಂ-ದ್ರವ್ಯರೋಗದಿಂದ ಚಪಲವಾಕ್ಕುಳ್ಳ, ಈಶ್ವರಾಣಾಂ-ಪ್ರಭುಗಳ, ನಾಮಾಪಿ-ಹೆಸರೂ ಕೂಡ, ನಶ್ರೂಯತೇ-ಕೇಳಲ್ಪಡುವುದಿಲ್ಲವೊ ॥೨೬॥

ತಾತ್ಪರ್ಯ—ಈಶ್ಲೋಕದಲ್ಲಿ ದುಷ್ಟರಾದವರ ಮುಖವನ್ನು ನೋಡದೆ ಅಡವಿಯಲ್ಲಿ ತಪಸ್ಸು ಮಾಡುವದಕ್ಕೆ ಹೋಗೋಣ ಏಳು ಎಂದು ಹೇಳುತ್ತಾನೆ. ಅದು ಹೇಗಂದರೆ:—ಒಬ್ಬ ಮನುಷ್ಯನು ತನ್ನ ಸ್ನೇಹಿತನಂ ಕುರಿತು ಎಲೈ ಸ್ನೇಹಿತನೆ! ಅರಣ್ಯದಲ್ಲಿ ಮೃದುಗಳಾಗಿಯೂ ರುಚಿಕರಗಳಾಗಿಯೂ ಯೋಗ್ಯವಾಗಿಯೂ ಇರುವ ಕಂದಮೂಲಗಳಿಲ್ಲವೆ? ಅದನ್ನು ಆಹಾರಮಾಡಿಕೊಂಡು ಮೃದುಗಳಾಗಿ ಕೋಮಲಗಳಾದ ಚಿಗುರುಗಳ ಹಾಸಿಗೆ ಮಾಡಿಕೊಂಡು ಪುಣ್ಯಕರವಾದವೃತ್ತಿಯಿಂದ ವನಗಳಲ್ಲಿ ತಪಸ್ಸುಮಾಡೋಣವೆಳು ಯಾಕಂದರೆ ದ್ರವ್ಯಜಾಡ್ಯದಿಂದ ಗರ್ವಿಷ್ಠರಾಗಿ ಕರ್ತವ್ಯಾಕರ್ತವ್ಯ ಶೂನ್ಯರಾದ ದುಷ್ಟರಾದ ರಾಜರ ಮುಖಗಳನ್ನು ನೋಡದೆ ಅಡವಿಯಲ್ಲಿ ತಪಸ್ಸುಮಾಡುತ್ತಲಿದ್ದರೆ ಇಂಥಾ ದುಷ್ಟರ ಹೆಸರುಗಳೂಕೂಡ ಕೇಳಬರುವದಿಲ್ಲ ಆದರೆ ಅವರಲ್ಲಿ ಯಾಚನಾವೃತ್ತಿ ಮಾಡುವದಕ್ಕೆ ಹೋಗಿ ಅವರ ಅಹಂಕಾರದ ಮಾತುಗಳಕೇಳಿ ಈ ದುರಾತ್ಮರ ಮುಖಗಳನ್ನು ನೋಡುವದಕ್ಕಿಂತ ವನದಲ್ಲಿ ಮುನಿವೃತ್ತಿಯನ್ನು ಆಶ್ರಯಿಸಿಕೊಂಡಿದ್ದರೆ ಇಂಥಾ ದುರಾತ್ಮರ ಹೆಸರೂ ಕೂಡ ಕಿವಿಗೆ ಬೀಳುವದಿಲ್ಲವೆಂದು ತಾತ್ಪರ್ಯ. ॥೨೬॥

ಶ್ಲೋ॥ ಫಲಂಸ್ವೇಚ್ಛಾಲಭ್ಯಂಪ್ರತಿವನಮಖೇದಂಕ್ಷಿತಿರುಹಾಂ
ಪಯಸ್ಸ್ಥಾನೇ ಸ್ಥಾನೇಶಿಶಿರಮಧುರಂಪುಣ್ಯಸರಿತಾಂ
ಮೃದುಸ್ಪರ್ಶಾಶಯ್ಯಾಸುಲಲಿತಪಲ್ಲವಮಯೀಸಹಂ
ತೇಸಂತಾಪಂತದಪಿಧನಿನಾಂದ್ವಾರಿಕೃಪಣಾಃ ॥ ೨೭ ॥

ಟೀಕು ॥ ಪ್ರತಿವನಂ - ವನವನಗಳಲ್ಲಿಯೂ, ಅಖೇದಂ- ಕಷ್ಟವಿಲ್ಲದೆ, ಸ್ವೇಚ್ಛಾಲಭ್ಯಂ, ಸ. ತನ್ನ, ಇಚ್ಛಾ-ಅಪೇಕ್ಷೆಯಮಾತ್ರದಿಂದಲೆ, ಲಭ್ಯಂ-ಲಭಿಸುವದಕ್ಕೆ ಯೋಗ್ಯವಾದ, ಕ್ಷಿತಿರುಹಾಂ- ವೃಕ್ಷಗಳ, ಫಲಂ- ಫಲವು, ಅಸ್ತಿ-ಇದೆ, ಸ್ಥಾನೇ ಸ್ಥಾನೇ ಪ್ರತಿಸ್ಥಳಗಳಲ್ಲಿಯೂ, ಪುಣ್ಯಸರಿತಾಂ-ಗಂಗಾದಿಪುಣ್ಯನದಿಗಳ, ಪಯಃ ಉದಕವು, ಅಸ್ತಿ-ಇದೆ, ಸುಲಲಿತಲತಾಪಲ್ಲವಮಯೀ-ಸುಲಲಿತ-ಕೋಮಲಗಳಾದ, ಲತಾ-ಬಳ್ಳಿಗಳ. ಪಲ್ಲವಮಯೀ- ಚಿಗುರುಗಳ ರೂಪವಾದ, ಮೃದುಸ್ಪರ್ಶಾ-ಮೃದುವಾದ ಸ್ಪರ್ಶವುಳ್ಳ. ಶಯ್ಯಾ- ಹಾಸಿಗೆಯು, (ಇದೆ ಯಾಚಕಜನರು) ತದಪಿ ಹಾಗಾದಾಗ್ಯೂ, ಧನಿನಾಂ ಧನವಂತರ, ದ್ವಾರಿ-ಬಾಗಿಲಲ್ಲಿ, ಕೃಪಣಾಃಸಂತಃ ದೀನರಾಗಿ, ಸಂತಾಪಂ-ಸಂಜ್ವರವನ್ನು ಸಹಂತೆ-ಸಹಿಸುತ್ತಾರೆ ॥೨೭॥

ತಾತ್ಪರ್ಯ—ಈ ಶ್ಲೋಕದಲ್ಲಿ ಯಾಚಕಜನಗಳು ಧನಗರ್ವದಿಂದ ದುಷ್ಟವಾತುಗಳನ್ನಾಡುವರು. ದುಷ್ಟರಾದ ಜನರ ಮನೆಯಬಾಗಿಲಿನಲ್ಲಿ ದೀನರಾಗಿ ಕಾಯುತ್ತಾರೆ. ಅದರಿಂದ ಅರಣ್ಯದಲ್ಲಿ ತಪಸ್ಸುಮಾಡುವದು ಒಳ್ಳೆಯದೆಂದು ಹೇಳುತ್ತಾನೆ ಅದು ಹೇಗೆಂದರೆ;—ಯಾವ ಯಾವ ವನದಲ್ಲಿ ನೋಡಿದಾಗ್ಯೂ ವೃಕ್ಷಗಳ ಫಲಗಳು ಕಷ್ಟವಿಲ್ಲದೆ ಸ್ವೇಚ್ಛೆಯಿಂದಲೆ ದೊರಕುತ್ತಲಿವೆ. ಗಂಗಾದಿ ಪುಣ್ಯನದಿಗಳಲ್ಲಿ ಮಧುರ ಶೀತಲವಾದ ಉದಕವು ಸುಲಭವಾಗಿ ದೊರೆಯುತ್ತದೆ. ಮೃದುವಾದ ಚಿಗುರುಗಳ ಹಾಸಿಗೆಯೂ ಮನುಷ್ಯರ ಸಂತಾಪಪರಿಹಾರವನ್ನು ಮಾಡುತ್ತದೆ. ಇಂಥಾ ಅನುಕೂಲಗಳು ಇದ್ದಾಗ್ಯೂ ಯಾಚಕಜನಗಳು ಧನದಆಶೆಯಿಂದ ದೀನರಾಗಿ ಗರ್ವಿಷ್ಠರಾದ ಧನಿಕರ ಬಾಗಿಲನ್ನು ದ್ವಾರಪಾಲಕರಂತೆ ಕಾದುಯಿರುತ್ತಾರೆ. ಅಂದರೆ ಧನವಂತರ ಮನೆಯ ಬಾಗಿಲು ಕಾಯುವದಕ್ಕೆ ಬದಲಾಗಿ ಅಡವಿಯಲ್ಲಿ ಫಲಾದಿಗಳನ್ನು ಭಕ್ಷಣೆ ಮಾಡಿಕೊಂಡು ನದೀ ನದಗಳನೀರನ್ನು

ದಾನವಾದಿ ತೃಣ ಪಲ್ಲವಾದಿಗಳಲ್ಲಿ ಶಯನ ಮಾಡಿಕೊಂಡು ವಾಸಮಾಡುವ
ದು ಉತ್ತಮವೆಂದು ತಾತ್ಪರ್ಯ. || ಶಿಖರಿಣೀವೃತ್ತಂ || ||೨೭||

ಶ್ಲೋ|| ಯೇ ವರ್ತಂತೇ ಧನಪತಿಪುರಃ ಪ್ರಾರ್ಥನಾ ದುಃಖಭಾಜೋ
ಯೇ ಚಾಲ್ಪತ್ವಂ ದಧತಿ ವಿಷಯಾಕ್ಷೇಪಪರ್ಯಾಪ್ತ
ಬುದ್ಧೇಃ | ತೇಷಾಮಂತಸ್ಸ್ಫುರಿತಹಸಿತಂ ವಾಸರಾಣಿ
ಸ್ಮರೇಯಂ ಧ್ಯಾನಚ್ಛೇದೇ ಶಿಖರಿಕುಹರಗ್ರಾವಶಯ್ಯಾ
ನಿಷಣ್ಣಃ || ೨೮ ||

ಟೀಕು | ಧನಪತಿಪುರಃ - ಧನಪತಿ-ಧನವಂತನ, ಪುರಃ-ಮುಂದುಗಡೆ
ಯಲ್ಲಿ, ಪ್ರಾರ್ಥನಾ, ದುಃಖಭಾಜಃ ಪ್ರಾರ್ಥನಾ ಧನಯೋಚನೆಯಿಂದ ಉಂ
ಟಾದ, ದುಃಖ- ಸಂಕಟವನ್ನು, ಭಾಜಃ- ಹೊಂದಿರುವವರು, ಯೇ ಪುರುಷಾಃ-
ಯಾವ ಮನುಷ್ಯರು, ವರ್ತಂತೇ- ಇದ್ದಾರೋ, ಯೇಚ ಯಾರುಗಳು, ವಿಷ
ಯಾಕ್ಷೇಪಪರ್ಯಾಪ್ತಬುದ್ಧೇಃ-ವಿಷಯ- ಶಬ್ದಾದಿವಿಷಯಗಳ ಅಪೇಕ್ಷೆಯು,
ಭೋಗ-ಸಂಗ್ರಹದಲ್ಲಿ, ಬುದ್ಧೇಃ-ಬುದ್ಧಿಯ ದೆಸೆಯಿಂದ, ಅಲ್ಪತ್ವಂ-ನೀಚ
ತ್ವವನ್ನು, ದಧತಿ- ಹೊಂದುತ್ತಾರೊ, ತೇಷಾಂ- ಅಂಥವರುಗಳ, ವಾಸರಾ
ಣಿ-ದಿನಗಳನ್ನು, ಧ್ಯಾನಚ್ಛೇದೇ ಧ್ಯಾನ-ಪರಮೇಶ್ವರನ ಧ್ಯಾನಯೋಗದ,
ಛೇದೇ- ವಿಶ್ರಾಂತಿಕಾಲವಲ್ಲಿ, ಶಿಖರಿಕುಹರಗ್ರಾವಶಯ್ಯಾನಿಷಣ್ಣಃ- ಶಿಖರಿ-
ಬೆಟ್ಟದ, ಕುಹರ- ಗುಹೆಯಲ್ಲಿರುವ, ಗ್ರಾವ-ಕಲ್ಲಿನ, ಶಯ್ಯಾ ಹಾಸಿಗೆಯಲ್ಲಿ,
ನಿಷಣ್ಣಃ- ಕೂತುಕೊಂಡು ಇರುವವನಾಗಿ, ಅಂತಃಸ್ಫುರಿತಹಸಿತಂಯಥಾತಥಾ-
ಅಂತಃ ಅಂತಃಕರಣದಲ್ಲಿ, ಸ್ಫುರಿತ-ಸ್ಫುರಿಸಲ್ಪಟ್ಟ, ಹಸಿತಂಯಥಾತಥಾ ಹಾ
ಸ್ಯವಾಗೋಣ, ಹೇಗೋ-ಹಾಗೆ, ಸ್ಮರೇಯಂ-ಸ್ಮರಣೆಮಾಡುವೆನು. ||೨೮||

ತಾತ್ಪರ್ಯ—ಈ ಶ್ಲೋಕದಲ್ಲಿ ಯಾಚ್ಞಾದೈನ್ಯ ದುಃಖವನ್ನು
ಅನುಭವಿಸಿ ಜನಗಳನ್ನು ಕುರಿತು ವೈರಾಗ್ಯವನ್ನು ಬೋಧಿಸುತ್ತಾನೆ.
ಅದು ಹೇಗೆಂದರೆ;—ಲೋಕದಲ್ಲಿ ಯಾರಾದರೂ ಧನವಂತರ ಮುಂದುಗಡೆ
ಯಲ್ಲಿ ಯೋಚನೆಯನ್ನು ಮಾಡುವ ಕಾಲದಲ್ಲಿ ಅವರುಗಳು ಆಡುವ ಗರ್ವದ
ಮಾತುಗಳನ್ನು ಕೇಳಿ ಸಂತಾಪವನ್ನು ಹೊಂದುವ ಮನುಷ್ಯರು ಯಾರು
ಇದ್ದಾರೋ ಮತ್ತು ವಿಷಯಾದಿಗಳಲ್ಲಿ ಮನವನ್ನು ಇಡೋಣದರಿಂದ ಯಾ

ರಾಏವರೂ ಲಘುತ್ವವನ್ನು ಹೊಂದುತ್ತಾರೋ ಇವರುಗಳು ಬೆಟ್ಟಗಳ ಗುಹೆ
ಗಳಲ್ಲಿ ಇರುವ ಕಲ್ಲುಗಳಮೇಲೆ ಶಯನಮಾಡಿ, ಅಂದರೆ ತಪಸ್ಸುಮಾಡಿ ವಿ
ಶ್ರಾಂತಿಯನ್ನು ಹೊಂದಿ ಸುಖವಾಸ ಮಾಡಿಸ ಕಾಲದಲ್ಲಿ ಆಡಿದ ಗರ್ವದ
ಮಾತುಗಳ ದಿನಗಳನ್ನು ಸ್ಮರಣೆ ಮಾಡಿಕೊಳ್ಳರಿ ಅಂಥಾ ದುರ್ದಿನಗಳನ್ನು
ಜ್ಞಾಪಕ ಮಾಡಿಕೊಳ್ಳುತ್ತಾ ಸುಖವಾಗಿ ತಪಸ್ಸು ಮಾಡಿಕೊಂಡು ಇರುವ
ದುತ್ತಮವೆಂದು ತಾತ್ಪರ್ಯ. ॥ ಶಿಖರಿಣೀವೃತ್ತಂ ॥ ॥೨೮॥

ಶ್ಲೋ॥ ಯೇಸಂತೋಷನಿರಂತರ ಪ್ರಮುದಿತಾಸ್ತೇಷಾಂನ
ಭಿನ್ನಾಮುದಃ ಯೇತ್ವನ್ಯೇಧನಲುಬ್ಧಸಂಕುಲಧಿ
ಯಸ್ತೇಷಾಂನತೃಷ್ಣಾಹತಾ । ಇತ್ಥಂಕಸ್ಯಕೃತೇ
ಕೃತಸ್ಸವಿಧಿನಾತಾದೃಕ್ಪದಂಸಂಪದಾಂಸ್ವಾತ್ಮನ್ಯೇವ
ಸಮಾಪ್ತಹೇಮಮಹಿಮಾಮೇರುರ್ನಮೇರೋಚತೇ ॥

**ಟೀಕು॥** ಯೇ- ಯಾರುಗಳು, ಸಂತೋಷನಿರಂತರಪ್ರಮುದಿತಾಃ- ಸಂ
ತೋಷ-ದೈವಾಧೀನದಿಂದ ಲಬ್ಧವಾದ ವಸ್ತುವಿನಿಂದ ಉಂಟಾದ ಸಂತೋ
ಷದಿಂದ, ನಿರಂತರ-ಯಾವಾಗಲು ಪ್ರಮುದಿತಾಃ-ಹರುಷಿತರಾಗಿರುತ್ತಾರೊ,
ತೇಷಾಂ- ಅವರುಗಳಿಗೆ, ಮುದಃ- ಸಂತೋಷಗಳು, ಅಭಿನ್ನಾಃ ಶಾಶ್ವತವಾದ
ವುಗಳು, ಕಿಂತು-ಮತ್ತೇನಂದರೋ ಅನ್ಯೇ- ಇತರರಾದ. ಯೇತು- ಯಾರಾದ
ರೋ, ಧನಲುಬ್ಧಸಂಕುಲಧಿಯಃ- ಧನ- ದ್ರವ್ಯದ, ಲುಬ್ಧ- ಆಶೆಯಿಂದ, ಸಂ
ಕುಲ- ವ್ಯಾಪ್ತವಾದ, ಧಿಯಃ- ಬುದ್ಧಿವುಳ್ಳವರಾಗಿರುವಕಾರಣವೇ, ತೇಷಾಂ-
ಅವರುಗಳಿಗೆ, ತೃಷ್ಣಾ- ಆಶೆಯು, ನಹತಾ ಹೊಡಿಯಲ್ಪಡುವದಿಲ್ಲ, ಇತ್ಥಂ-
ಈ ಪ್ರಕಾರವಾಗಿ, ವ್ಯವಸ್ಥಿತೇಸತಿ- ವ್ಯವಸ್ಥೆಯಾಗುತಿರಲಾಗಿ, ಸಂಪದಾಂ-
ಐಶ್ವರ್ಯಗಳ, ತಾದೃಕ್- ಇಂಥಾದೆಂದು ಹೇಳುವುದಕ್ಕೆ ಅನಿರ್ವಾಚ್ಯವಾದ,
ಪದಂ- ಸ್ಥಾನವು, ಸ್ವಾತ್ಮನ್ಯೇವ - ತನ್ನಲ್ಲಿಯೇ. ಸಮಾಪ್ತ-ಪರ್ಯಾಪ್ತ
ವಾದ ಹೇಮಮಹಿಮಾ- ಹೇಮ ಸುವರ್ಣದ, ಮಹಿಮಾ- ಸಂಪತ್ತುವುಳ್ಳ,
ಮೇರುಃ- ಮೇರುಪರ್ವತವು, ವಿಧಿನಾ- ಬ್ರಹ್ಮದೇವರಿಂದ, ಕಸ್ಯಕೃತೇ-ಯಾ
ರಿಗೋಸ್ಕರ, ಕೃತಃ - ಮಾಡಲ್ಪಟ್ಟತೋ, ಮೇ- ನನಗೆ, ನರೋಚತೇ- ತಿಳಿ
ಯಲಿಲ್ಲ, ॥೨೯॥

ತಾತ್ಪರ್ಯ—ಈಶ್ಲೋಕದಲ್ಲಿ ಆಸೆಯೆನ್ನುವದಕ್ಕೆ ಸಾರವಿಲ್ಲ, ಯಾಚನಾ ದೈನ್ಯವನ್ನು ಬಿಟ್ಟು ಸಂತುಷ್ಟಾಂತರಂಗನಾಗಿ ಆಶಾದಿಗಳನ್ನು ಬಿಟ್ಟು ಸುಖವಾಗಿರಬೇಕೆಂದು ಹೇಳುತ್ತಾನೆ. ಅದು ಹೇಗೆಂದರೆ;—ಕಲವು ಜನಗಳಿಗೆ ಅಂದರೆ ದೇವರು ಎಷ್ಟುಕೊಡುತ್ತಾನೋ ಅಷ್ಟರಲ್ಲಿ ತೃಪ್ತರಾಗಿರುವವರಿಗೆ ಯಾವಾಗಲೂ ಸಂತೋಷವೆ. ಧನದ ಆಸೆಯಿಂದಕೂಡಿ ಶ್ರಮಪಡುತ್ತಿರುವ ಅವರಿಗೆ ಎಷ್ಟಾದರೆ ಆಸೆ ಪೂರ್ತಿಯಾಗುತ್ತಿಂಬುವದೇ ಇಲ್ಲ. ಹೀಗಿರುವವರಲ್ಲಿ ಬ್ರಹ್ಮದೇವರು ಯಾರಿಗೋಸ್ಕರ ಚಿನ್ನದ ಬೆಟ್ಟವಾದ ಮೇರುಪರ್ವತವನ್ನು ಸೃಷ್ಟಿಮಾಡಿದನೊ ತಿಳಿಯದು, ಅಂದರೆ ಆಸೆಯಿಲ್ಲದವರಿಗೆ ಮೇರುಪರ್ವತದಿಂದ ಪ್ರಯೋಜನವಿಲ್ಲ, ಆಸೆಯಿರುವವರಿಗೆ ಇಂಥಾ ಮೇರುಪರ್ವತಗಳು ಎಷ್ಟುಆದರೂ ಸಾಕಾಗುವದೇಯಿಲ್ಲ. ಆದ್ದರಿಂದ ಸುವರ್ಣ ಮೇರುಪರ್ವತವನ್ನು ಬ್ರಹ್ಮದೇವರು ನಿರ್ಮಾಣಮಾಡಿದುದು ಯಾತಕ್ಕೋ ನನಗೆ ತಿಳಿಯದು ಹೀಗೆ ಹೇಳುವವರಿಂದ ಆಶಾತ್ಯಾಗಮಾಡಿ ಸುಖದಲ್ಲಿರಬೇಕೆಂದು ತಾತ್ಪರ್ಯ. ॥ ಶಾರ್ದೂಲ ವಿಕ್ರೀಡಿತವೃತ್ತಂ ॥೨೯॥

ಶ್ಲೋ॥ ಭಿಕ್ಷಾಹಾರಮದೈನ್ಯಮಪ್ರತಿಸುಖಂಭೀತಿಚ್ಛಿದಂ
ಸರ್ವತೋದುರ್ಮಾತ್ಸರ್ಯಮದಾಭಿಮಾನಮಥನಂ
ದುಃಖೌಘವಿಧ್ವಂಸನಂ । ಸರ್ವತ್ರಾನ್ವಹಮಪ್ರಯ
ತ್ನಸುಲಭಂ ಸಾಧುಪ್ರಿಯಂಪಾವನಂಶಂಭೋಸ್ಸತ್ರ
ಮವಾರ್ಯಮಕ್ಷಯನಿಧಿಂಶಂಸಂತಿಯೋಗೀಶ್ವರಾಃ ॥

ಟೀಕು॥ ಯೋಗೀಶ್ವರಾಃ-ಯೋಗಿಶ್ರೇಷ್ಠರು ಅದೈನ್ಯಂ-ದೀನತ್ವವಿಲ್ಲದೆಯಿರುವ ಅಪ್ರತಿಸುಖಂ-ಅಸದೃಶವಾದಸುಖವುಳ್ಳ ಭೀತಿಚ್ಛಿದಂ-ಭೀತಿ-ಭಯವನ್ನು, ಛಿದಂ- ಹೋಗಲಾಡಿಸುತ್ತಲಿರುವ, ಸರ್ವತಃ- ಎಲ್ಲಾಕಡೆಯಲ್ಲಿಯೂ, ದುರ್ಮಾತ್ಸರ್ಯಮದಾಭಿಮಾನಮಥನಂ, ದುರ್ಮಾತ್ಸರ್ಯ- ಕೆಟ್ಟಮಾತ್ಸರದಿಂಹುಟ್ಟಿದ, ಮದ-ಗರ್ವದ, ಅಭಿಮಾನ-ಅಹಂಕಾರವನ್ನು, ಮಥನಂ- ಕಡೆಯುವಂಥ, ಅಥವಾ- ಹೋಗಲಾಡಿಸುವಂಥ, ದುಃಖೌಘವಿಧ್ವಂಸನಂ-ದುಃಖ-ಸಂಕಟದ, ಓಘ- ಸಮೂಹವನ್ನು, ವಿಧ್ವಂಸನಂ- ಹೋಗಲಾಡಿಸುತ್ತಲಿರುವ, ಸರ್ವತ್ರ- ಎಲ್ಲಾಕಡೆಯಲ್ಲಿಯೂ, ಅನ್ವಹಂ- ಪ್ರತಿದಿವಸ

ದಲ್ಲು, ಪಾವನಂ-ಪರಿಶುದ್ಧವಾದ, ಸಾಧುಪ್ರಿಯಂ- ಸಾಧು-ಸಜ್ಜನರಿಗೆ, ಪ್ರಿಯಂ-ಇಷ್ಟವಾದ, ಅಯತ್ನಸುಲಭಂ-ಅಯತ್ನ- ಪ್ರಯತ್ನವಿಲ್ಲದೆ, ಸುಲಭಂ-ಸುಖಲಭ್ಯವಾದ, ಭಿಕ್ಷಾಹಾರಂ-ಭಿಕ್ಷಾವೃತ್ತಿ ಜೀವನವುಳ್ಳ, ಶಂಭೋಃ-ಈಶ್ವರನ, ಸತ್ರಂ- ಅನ್ನಸತ್ರವನ್ನು, ಅಕ್ಷಯನಿಧಿಂ- ಅಕ್ಷಯ- ನಾಶರಹಿತವಾದ, ನಿಧಿಂ-ನಿಕ್ಷೇಪವುಳ್ಳದ್ದನ್ನಾಗಿ, ಶಂಸಂತಿ ಹೇಳುತ್ತಾರೆ, ||೩೬||

ತಾತ್ಪರ್ಯ—ಈಶ್ಲೋಕದಲ್ಲಿ ಯಾಚನೆಯು ದೈನ್ಯವೆಂತಲೂ ಭಿಕ್ಷಾಟನ ಜೀವನವು ಅತಿ ಪರಿಶುದ್ಧವಾದುದೆಂಬುವದನ್ನೂ ಹೇಳುತ್ತಾನೆ. ಅದು ಹೇಗೆಂದರೆ:—ಸುಲಭವಾದ ಯತ್ನದಿಂದ ಲಭ್ಯವಾಗಿಯೂ ದುಃಖನಾಶಕರವಾಗಿಯೂ ಸಜ್ಜನರಿಗೆ ಪ್ರೀತಿಕರವಾಗಿಯೂ ದುಷ್ಟಸೇವಾದಿ ಭಯರಹಿತವಾಗಿಯೂ ಇರುವ ಭಿಕ್ಷಾಹಾರರೂಪಕವಾದ ವೃತ್ತಿಯು ಈಶ್ವರನ ಧರ್ಮಸತ್ರದಲ್ಲಿ ಅಕ್ಷಯನಿಧಿಯುಳ್ಳವನ್ನಾಗಿದೆ ಎಂದು ಯೋಗೀಶ್ವರರು ಹೇಳುತ್ತಾರೆ ಆದ್ದರಿಂದ ಯಾಚನಾದೈನ್ಯವನ್ನು ಬಿಟ್ಟು ಪರಿಶುದ್ಧವಾದ ಭಿಕ್ಷಾವೃತ್ತಿಯನ್ನು ಆಶ್ರಯಿಸಿ ಇರುವದು ಉತ್ತಮವೆಂದು ತಾತ್ಪರ್ಯ. ||೩೬||

## ಭೋಗಾಸ್ಥಿರ್ಯವರ್ಣನಾರಂಭವು

ಶ್ಲೋ|| ಭೋಗೇರೋಗಭಯಂಕುಲೇಚ್ಯುತಿಭಯಂವಿತ್ತೇನೃಪಾಲಾದ್ಭಯಂ ಮಾನೇದೈನ್ಯಭಯಂ ಬಲೇರಿಪುಭಯಂರೂಪೇಜರಾಯಾಭಯಂ| ಶಾಸ್ತ್ರೇವಾದಿಭಯಂ ಗುಣೇಖಲಭಯಂಕಾಯೇಕೃತಾಂತಾದ್ಭಯಂಸರ್ವಂ ವಸ್ತುಭಯಾನ್ವಿತಂಭುವಿನೃಣಾಂವೈರಾಗ್ಯಮೇವಾಭಯಂ ||೩೭||

ಟೀಕು|| ಭುವಿ- ಭವಲೋಕದಲ್ಲಿ, ನೃಣಾಂ- ಮನುಷ್ಯರಿಗೆ, ಭೋಗೇ-ವಿಷಯಾದಿಭೋಗದಲ್ಲಿ, ರೋಗಭಯಂ-ರೋಗ - ಆ ಮಯದ ದೆಸೆಯಿಂದ, ಭಯಂ-ಭಯವು, ಕುಲೇ- ಒಳ್ಳೆವಂಶದಲ್ಲಿ, ಚ್ಯುತಿಭಯಂ- ಚ್ಯುತಿ- ಜಾರೋಣಾದರದೆಸ್ನೆಯಿಂದವುಂಟಾದ, ಭಯಂ-ಭೀತಿಯು, ವಿತ್ತೇ-ದ್ರವ್ಯದಲ್ಲಿ, ನೃಪಾಲಾತ್- ರಾಜನದೆಸೆಯಿಂದ, ಭಯಂ- ಭೀತಿಯು, ಮಾನೇ-ಪೂಜ್ಯತ್ವದಲ್ಲಿ,

ದೈನ್ಯಭಯಂ- ದೈನ್ಯ- ದೀನತ್ವದ ದೆಸೆಯಿಂದ, ಭಯಂ- ಭೀತಿಯು, ಬಲೇ- ಸಾಮರ್ಥ್ಯದಲ್ಲಿ, ರಿಪುಭಯಂ- ರಿಪು- ಶತ್ರುಗಳ ದೆಸೆಯಿಂದ, ಭಯಂ- ಭೀತಿಯು, ರೂಪೇ- ಸೌಂದರ್ಯದಲ್ಲಿ, ಜರಾಯಾಃ- ವಾರ್ಧಕ್ಯದ ದೆಸೆಯಿಂದ ಭಯಂ-ಭೀತಿಯು, ಶಾಸ್ತ್ರೇ- ತರ್ಕವ್ಯಾಕರಣಾದಿ ಶಾಸ್ತ್ರದಲ್ಲಿ, ವಾದಿಭಯಂ- ವಾದಿ ಪ್ರತಿವಾದಿಗಳ ದೆಸೆಯಿಂದ, ಭಯಂ- ಸಾಧ್ವಸವು, ಗುಣೇ- ಸುಗುಣದಲ್ಲಿ, ಖಲಭಯಂ- ಖಲ- ದುಷ್ಟಮನುಷ್ಯರ ದೆಸೆಯಿಂದ, ಭಯಂ ಭಯವು, ಕಾಯೆ -ಶರೀರದಲ್ಲಿ, ಕೃತಾಂತಾದ್ಭಯಂ- ಕೃತಾಂತಾತ್- ಯಮನ ದೆಸೆಯಿಂದ, ಭಯಂ ಭೀತಿಯು, ಸರ್ವಂ-ಸಮಸ್ತವಾದ, ವಸ್ತು-ವಸ್ತುವು, ಭಯಾನ್ವಿತಂ ಭಯ-ಭಯದ ದೆಸೆಯಿಂದ, ಅನ್ವಿತಂ-ಕೂಡಿಯಿರುವದು, ವೈರಾಗ್ಯಮೇವ-ವೈರಾಗ್ಯಮಾತ್ರವೆ, ಅಂಬರೆ- ವಿರಾಗಭಾವಮಾತ್ರವೆ, ಅಭಯಂ- ಭಯರಹಿತವಾದದ್ದು ||೩೧||

ತಾತ್ಪರ್ಯ—ಈ ಶ್ಲೋಕದಲ್ಲಿ ಪರ್ಯಾಲೋಚನೆ ಮಾಡಿ ನೋಡಲ ಜಗದಲ್ಲಿ ಭಯವಿಲ್ಲದೆ ಇರುವದು ಯಾವದೂ ಇಲ್ಲ ವೈರಾಗ್ಯಕ್ಕೆ ಮಾತ್ರ ಯಾವ ಭಯವೂ ಇಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ;—ಸ್ರಕ್ಚಂದನ ವಿಷಯಾದಿ ಕಾಮೋಪಭೋಗಗಳನ್ನು ಅನುಭವಿಸುವದರಲ್ಲಿ ರೋಗಗಳು ಉಂಟಾಗುವುದರ ದೆಸೆಯಿಂದ ಭಯ. ಒಳ್ಳೆ ವಂಶದಲ್ಲಿ ಯಾವಾಗ ಚ್ಯುತಿಯುಂಟಾದೀತೋ ಯೆಂಬ ಭಯವು, ದ್ರವ್ಯಕ್ಕೆ ರಾಜರ ದೆಸೆಯಿಂದ ಭಯವು. ಪ್ರಾಜ್ಞತ್ವದಲ್ಲಿ ಯಾವಾಗ ದೈನ್ಯಬರುವದೋ ಎಂಬುವ ಭಯವು ಸೌಂದರ್ಯಕ್ಕೆ ಮುದುಕತನದ ಭಯವು. ಶಾಸ್ತ್ರಾಧ್ಯಯನದಲ್ಲಿ ವಾದಿ-ಅಂದರೆ ಪ್ರತಿಯಾಗಿ ವಾದಿಸುವರೆಂಬ ಭಯ ಸುಗುಣದಲ್ಲಿ ದುಷ್ಟಜನಗಳ ಭಯವು. ಶರೀರದಲ್ಲಿ ಯಮನಭಯ ಇವೆ ಎಲ್ಲವನ್ನೂ ನೋಡಿದರೆ ಮನುಷ್ಯರಿಗೆ ಒಂದೊಂದರಲ್ಲಿ ಒಂದೊಂದು ಭಯವಿದೆ. ವೈರಾಗ್ಯವನ್ನಾಶ್ರಯಿಸಿದವನಿಗೆ ಯಾವಭಯವೂ ಇಲ್ಲ. ವಿರಾಗಿಗೆಯಾವವಿಧವಾದ ಭಯವೂ ಇಲ್ಲ. ಜನಗಳು ಎಲ್ಲರೂ ವೈರಾಗ್ಯವನ್ನು ಆಶ್ರಯಿಸಬೇಕೆಂದು ತಾತ್ಪರ್ಯ. || ಶಾರ್ದೂಲ ವಿಕ್ರೀಡಿತ ವೃತ್ತಂ || ||೩೧||

ಶ್ಲೋ|| ಆಕ್ರಾಂತಂಮರಣೇನಜನ್ಮ ಜರಸಾಚಾತ್ಯುಜ್ಜ್ವಲಂ
ಯೌವನಂಸಂತೋಷೋ ಧನಲಿಪ್ಸಯಾಶಮಸುಖಂ

ಪ್ರೌಢಾಂಗನಾವಿಭ್ರಮೈಃ। ಲೋಕೈರ್ಮತ್ಸರಿಭಿ
ರ್ಗುಣಾವನಭುವೋವ್ಯಾಲೈರ್ನೃಪಾದುರ್ಜನೈ
ರಸ್ಥೈರ್ಯೇಣವಿಭೂತಯೋಽಪ್ಯುಪಹತಾಗ್ರಸ್ತಂನ
ಕಿಂಕೇನವಾ ॥೩೨॥

ಟೀಕಾ॥ ಜನ್ಮ ಉತ್ಪತ್ತಿಯು, ಮರಣೇನ ಮರಣದಿಂದ, ಆಕ್ರಾಂತಂ- ಆಕ್ರಮಿಸಲ್ಪಟ್ಟಿತು, ಅತ್ಯುಜ್ವಲಂ-ಅತಿ- ಅತ್ಯಂತವಾಗಿ, ಉಜ್ವಲಂ- ಪ್ರಕಾಶವಾದ, ಯೌವನಂಚ-ಪ್ರಾಯವು ಕೂಡ, ಜರಸಾ-ಜರಾವಸ್ಥೆಯಿಂದ, ಆಕ್ರಾಂತಂ- ಆಕ್ರಮಿಸಲ್ಪಟ್ಟಿತು, ಸಂತೋಷಃ- ಹರುಷವು, ಧನಲಿಪ್ಸಯಾ ಧನ-ದ್ರವ್ಯದ, ಲಿಪ್ಸಯಾ- ಆಶೆಯಿಂದ, ಆಕ್ರಾಂತಂ- ಆಕ್ರಮಿಸಲ್ಪಟ್ಟಿತು, ಶಮಸುಖಂ- ಇಂದ್ರಿಯವ್ಯಾಪಾರೋಪರಮಾಪಾದಿತಾನಂದವು, ಪ್ರೌಢಾಂಗನಾವಿಭ್ರಮೈಃ- ಪ್ರೌಢ-ಚತುರಳಾದ, ಅಂಗನಾ-ಸ್ತ್ರೀಯು, ವಿಭ್ರಮೈಃ- ವಿಲಾಸಗಳಿಂದ, ಆಕ್ರಾಂತಂ- ಆಕ್ರಮಿಸಲ್ಪಟ್ಟಿತು ಗುಣಾಃ ಸೌಶೀಲ್ಯಾದಿಗುಣಗಳು, ಮತ್ಸರಿಭಿಃ-ಅಸೂಯಾಪರರಾದ, ಲೋಕೈಃ- ಜನಗಳಿಂದ, ಆಕ್ರಾಂತಾಃ-ಆಕ್ರಮಿಸಲ್ಪಟ್ಟವು, ವನಭುವಃ-ಅರಣ್ಯಭೂಮಿಗಳು, ವ್ಯಾಳೈಃ- ದುಷ್ಟಗಜಾದಿಗಳಿಂದ, ಅಥವಾ-ಸರ್ಪಾದಿಗಳಿಂದ, ಉಪಹತಾಃ-ಆಕ್ರಮಿಸಲ್ಪಟ್ಟವು, ನೃಪಾಃ- ರಾಜರು, ದುರ್ಜನೈಃ- ದುಷ್ಟಮನುಷ್ಯರಿಂದ, ಉಪಹತಾಃ ಆಕ್ರಮಿಸಲ್ಪಟ್ಟರು, ವಿಭೂತಯಃ- ಐಶ್ವರ್ಯಗಳು, ಅಸ್ಥೈರ್ಯೇಣ- ಚಂಚಲತ್ವದಿಂದ, ಆಕ್ರಾಂತಾಃ- ಆಕ್ರಮಿಸಲ್ಪಟ್ಟವು, ಇತಃ- ಇದಕ್ಕಿಂತಲು, ಕಿಂ- ಯಾವವಸ್ತುತಾನೆ, ಕೇನವಾ-ಯಾತರಿಂದತಾನೆ, ನಾಕ್ರಾಂತಂ-ಆಕ್ರಮಿಸಲ್ಪಡಲಿಲ್ಲ? ॥೩೨॥

ತಾತ್ಪರ್ಯ—ಈ ಶ್ಲೋಕದಲ್ಲಿ ಉಪಕ್ರಾಂತವಾದ ವಿಷಯವನ್ನು ಭಂಗ್ಯಂತರದಿಂದ ಹೇಳುತ್ತಾನೆ. ಅದು ಹೇಗಂದರೆ;—ಮನುಷ್ಯನ ಜನ್ಮವನ್ನು ನೋಡಿದರೆ ಮರಣದಿಂದ ಆಕ್ರಮಿಸಲ್ಪಟ್ಟದೆ ಯೌವನವನ್ನು ನೋಡಿದರೆ ಜರಾವಸ್ಥೆಯಿಂದ ಕೂಡಿದೆ ಇದು ಮನುಷ್ಯನಿಗೆ ಶಾಶ್ವತವಾದದ್ದಲ್ಲ ಸಂತೋಷವಾಗಿರೋಣವೆಂದರೆ ಧನದ ಆಶೆಯಿಂದ ಸಂತೋಷವಾಗಿ ಇರುವದಕ್ಕೆ ಅವಕಾಶವಿಲ್ಲ ಶಾಂತಿಯಾಗಿರೋಣವೆಂದರೆ ಪ್ರೌಢಾಂಗನಾವಿಲಾಸಗಳಿಂದ ಆಕ್ರಾಂತವಾಗಿ ಶಾಂತಿಯಿಂದ ಇರುವದಕ್ಕೆ ಆಗುವದಿಲ್ಲ. ರಾಜರುಗಳನ್ನು ನೋಡಿದರೆ ಕ್ಷುದ್ರ ಜನಗಳಿಂದ ಕೂಡಿಯುದ್ದಾರೆ ಸದ್ಗುಣದಲ್ಲಿ

ಇರೋಣವೆಂದರೆ ಮಾತ್ಸರವನ್ನು ಮಾಡುವ ಜನಗಳಿಂದ ಅಭಿಭೂತವಾಗಿ
ಇದೆ. ವನಭೂಮಿಗಳಾದರೆ ದುಷ್ಟ ಗಜಸರ್ಪಾದಿಗಳಿಂದ ವ್ಯಾಪ್ತವಾಗಿವೆ
ಇದೆಲ್ಲವನ್ನು ನೋಡುವದರಲ್ಲಿ ಯಾವದಕ್ಕೆ ತಾನೇ ತೊಂದರೆಇಲ್ಲ ಎಲ್ಲಕ್ಕೂ
ತೊಂದರೆಯುಂಟು ವೈರಾಗ್ಯಕ್ಕೆಮಾತ್ರ ಯಾವಭಯವೂ ಇಲ್ಲವೆಂದು
ತಾತ್ಪರ್ಯ. ||೩೨||

ಶ್ಲೋ|| ಆಧಿವ್ಯಾಧಿಶತೈರ್ಜನಸ್ಯವಿವಿಧೈರಾರೋಗ್ಯಮುನ್ಮೂ
ಲ್ಯತೇಲಕ್ಷ್ಮೀರ್ಯತ್ರಪತಂತಿತತ್ರವಿವೃತದ್ವಾರಾಇವ
ವ್ಯಾಪದಃ || ಜಾತಂಜಾತಮವಶ್ಯಮಾಶುವಿವಶಂಮೃ
ತ್ಯುಃಕರೋತ್ಯಾತ್ಮಸಾತ್ತತ್ಕಿಂತೇನನಿರಂಕುಶೇನವಿಧಿ
ನಾಯನ್ನಿರ್ಮಿತಂಸುಸ್ಥಿರಂ || ೩೩ ||

ಟೀಕು|| ವಿವಿಧೈಃ- ನಾನಾಪ್ರಕಾರಗಳಾದ, ಆಧಿವ್ಯಾಧಿಶತೈಃ- ಆಧಿ-ಮ
ನೋವ್ಯಥೆಗಳ, ವ್ಯಾಧಿ-ರೋಗಗಳ, ಶತೈಃ- ನೂರುಗಳಿಂದ, ಜನಸ್ಯ-ಜನದ
ಆರೋಗ್ಯಂ-ದೇಹಸ್ವಾಸ್ಥ್ಯವು, ಉನ್ಮೂಲ್ಯತೇ-ಹೋಗಲಾಡಿಸುತ್ತದೆ (ಅಥ
ವಾ ಮುಚ್ಚುತ್ತದೆ) ಯತ್ರ-ಯಾರಲ್ಲಿ, ಲಕ್ಷ್ಮೀಃ- ಐಶ್ವರ್ಯವು ಇದೆಯೋ,
ತತ್ರ- ಆಸ್ಥಳದಲ್ಲಿ ವಿವೃತದ್ವಾರಾಇವ, ವಿವೃತ- ತೆರೆಯಲ್ಪಟ್ಟದ್ವಾರಾಇವ-
ಬಾಗಿಲಗಳುಳ್ಳದ್ದರೋಪಾದಿಯಲ್ಲಿ, ಪದಃ-ರೋಗಗಳು, ಅಥವಾ ಆಪತ್ತು
ಗಳು, (ಪಾಠಾಂತರ) ಪತಂತಿ-ಬೀಳುತ್ತವೆ, ಮೃತ್ಯುಃ- ಮೃತ್ಯುವು, ಆಶು-
ಜಾಗ್ರತೆಯಾಗಿ, ವಿವಶಂ- ಪ್ರಾರಬ್ಧಕರ್ಮದ ದೆಸೆಯಿಂದ, ಜಾತಂ ಜಾತ
ಪ್ರಾಣಿಗಳನ್ನು, ಆತ್ಮಸಾತ್-ತನ್ನಅಧೀನವನ್ನಾಗಿ ಕರೋತಿ ಮಾಡುತ್ತದೆ,
ತತ್-ಆಕಾರಣದದೆಸೆಯಿಂದ, ತೇನ-ಅಪ್ರಸಿದ್ಧವಾದ, ನಿರಂತರೇಣ-ನಿರಂ
ಳವಾದ, ವಿಧಿನಾ-ವಿಧಿಯಿಂದ ಅಥವಾ ದೈವದಿಂದ, ಸುಸ್ಥಿರಂ-ಸ್ಥೈರ್ಯವು,
ನಿರ್ಮಿತಂಕಿಂ-ನಿರ್ಮಾಣಮಾಡಲ್ಪಟ್ಟಿತೇ ಏನು? ನಿರ್ಮಾಣಮಾಡಲ್ಪಡಲೇಯಿಲ್ಲ,

ತಾತ್ಪರ್ಯ—ಮೊದಲು ಹೇಳಿದ ಅರ್ಥವನ್ನೇ ಈಶ್ಲೋಕದಲ್ಲಿ ರೀತ್ಯಂ
ತರವಾಗಿ ಹೇಳುತ್ತಾನೆ. ಅದು ಹೇಗಂದರೆ;-ಜನಕ್ಕೆ ನೂರುವಿಧಗಳಾ
ದ ಆಧಿವ್ಯಾಧಿಗಳಿಂದ ಆರೋಗ್ಯವು ಮುಚ್ಚಲ್ಪಡುತ್ತದೆ ಎಂದರೆ ಆರೋ
ಗ್ಯವು ತಪ್ಪಿಹೋಗುತ್ತದೆ ಎಲ್ಲಿ ಐಶ್ವರ್ಯಗಳು ಇರುವವೋ ಆಸ್ಥಳವ

ಲ್ಲಿ ರೋಗಾದಿ ಆಪತ್ಪರಂಪರೆಗಳು ತೆರೆದ ಬಾಗಿಲುಗಳುಳ್ಳದ್ದರೋಪಾದಿಯಲ್ಲಿ ಅಂದರೆ ತಡೆಯಿಲ್ಲದೆ ಬಂದು ಒದಗುವವು ಪರತಂತ್ರನಾಗಿ ಹುಟ್ಟಿದವನನ್ನು ಮೃತ್ಯುವು ಜಾಗ್ರತೆಯಾಗಿ ತನ್ನ ಅಧೀನವನ್ನು ಮಾಡಿಕೊಳ್ಳುತ್ತದೆ. ಅಂದರೆ ಹುಟ್ಟಿದ ಮನುಷ್ಯನಿಗೆ ಸ್ಥಿರವಿಲ್ಲ ಮರಣವುಂಟಾಗುವದು ವಿಧಿಯು ವ್ಯಾಪಾರವು ನಿರರ್ಗಳವಾಗಿ ಇರುತ್ತಿರಲಾಗಿ ಯಾವದು ತಾನೆ ಉಪಹತಿಯಿಲ್ಲದೆ ಸ್ವಸ್ಥವಾಗಿಯಿದೆ? ಎಲ್ಲಕ್ಕೂ ಉಪದ್ರವಗಳು ಇವೆ ಆದ್ದರಿಂದ ವೈರಾಗ್ಯವನ್ನು ಆಶ್ರಯಿಸುವದು ಮೇಲೆಂದು ಜನಗಳಿಗೆ ಸಂಭೋಧಿಸಿ ಹೇಳಿದನೆಂದು ತಾತ್ಪರ್ಯ. ॥೩೩॥

ಶ್ಲೋ॥ ಭೋಗಾಸ್ತುಂಗತರಂಗಭಂಗತರಳಾಃ ಪ್ರಾಣಾಃ ಕ್ಷಣ
ಧ್ವಂಸಿನಸ್ತೋಕಾನ್ಯೇವದಿನಾನಿಯೌವನಸುಖಸ್ಫೂ
ರ್ತಿಃ ಪ್ರಿಯಾಸುಸ್ಥಿತಾ ॥ ತತ್ಸಂಸಾರಮಸಾರಮೇವ
ನಿಖಿಲಂ ಬುಧ್ವಾಬುಧಾಬೋಧಕಾಲೋಕಾನುಗ್ರಹ
ಪೇಶಲೇನಮನಸಾಯತ್ನಸ್ಸಮಾಧೀಯತಾಂ ॥೩೪॥

ಟೀಕು॥ ಭೋಗಾಃ ಸ್ರಕ್ಚಂದನಾದಿ ವಿಷಯೋಪಭೋಗಗಳು. ತುಂಗತರಂಗಭಂಗತರಳಾಃ-ತುಂಗತರಂಗ-ದೊಡ್ಡದಾದ ತೆರೆಗಳು, ಭಂಗ-ಕಿರುತೆರೆಗಳು ಇವುಗಳೋಪಾದಿಯಲ್ಲಿ, ತರಳಾಃ ಚಂಚಲಗಳಾದಂಥಾವುಗಳು, ಪ್ರಾಣಾಃ- ಪ್ರಾಣವಾಯುಗಳು, ಕ್ಷಣಧ್ವಂಸಿನಃ-ಕ್ಷಣ-ಕ್ಷಣಕಾಲದಲ್ಲಿ, ಧ್ವಂಸಿನಃ-ನಾಶವಾಗತಕ್ಕವುಗಳು, ದಿನಾನಿ- ಯೌವ್ವನದಿನಗಳಲ್ಲಿ, ಪ್ರಿಯಾಸು- ಪ್ರಾಣಪ್ರೇಯಸಿಯರಲ್ಲಿ, ಸ್ಥಿತಾ- ಇರುವ, ಯೌವನಸುಖಸ್ಫೂರ್ತಿಃ- ಯವ್ವನ-ಯೌವನವಯಸ್ಸಿನಲ್ಲಿವುಂಟಾಗುವ, ಸುಖ-ವೈಷಯಿಕಾನಂದದ, ಸ್ಫೂರ್ತಿಃ-ಸ್ಮರಣವು - ಅಥವಾ ಸಂತೋಷವು, ಸ್ತೋಕಾಏವ - ಕ್ಷಣಿಕವಾದದ್ದೇನೆ, ತತ್-ಆಕಾರಣದದೆಸೆಯಿಂದ, ಅಖಿಲಂ-ಸಮಸ್ತವಾದ, ಸಂಸಾರಂ-ಸಂಸಾರವನ್ನು, ಅಸಾರಂ- ನಿಸ್ಸಾರವಾದದ್ದನ್ನಾಗಿ, ಬುಧ್ವಾ- ತಿಳಿದು, ಬೋಧಕಾಃ-ತಿಳಿದಂಥ, ಹೇಬುಧಾಃ-ಎಲೈ ವಿದ್ವಾಂಸರುಗಳಿರಾ, ಲೋಕಾನುಗ್ರಹಪೇಶಲೇನ-ಲೋಕ ಜನಗಳಿಗೆ, ಅನುಗ್ರಹ- ಅನುಗ್ರಹಮಾಡುವದರಲ್ಲಿ, ಪೇಶಲೇನ-ಸಮರ್ಥವಾದ, ಮನಸಾ-ಮನಸ್ಸಿನಿಂದ, ಯತ್ನಃ-ಪರಬ್ರಹ್ಮಸಮಾಧಿಪ್ರಯತ್ನವು, ಯುಷ್ಮಾಭಿಃ ನಿಮಗಳಿಂದ, ಸಮಾಧೀಯತಾಂ-ಸಾಧಿಸಲ್ಪಡಲಿ,

ತಾತ್ಪರ್ಯ—ಅಸಾರ ಸಂಸಾರದಲ್ಲಿ ಏನು ಮಾಡಬೇಕೆಂದರೆ ಇದಕ್ಕೆ ಉಪಾಯಾಂತರವನ್ನು ಈ ಶ್ಲೋಕದ ಮೊದಲು ಮೂರು ಶ್ಲೋಕದಿಂದ ಹೇಳುತ್ತಾನೆ. ಅದು ಹೇಗಂದರೆ;—ಮನುಷ್ಯನಿಗೆ ಉಂಟಾಗುವ ಪಂಚ ಭೂತಗಳೆಂಬುವ ಶಬ್ದಸ್ಪರ್ಶಾದಿಗಳಿಂದ ಉಂಟಾಗುವ ವಿಷಯಾದಿ ಭೋಗಗಳು ಜಲತರಂಗದೋಪಾದಿಯಲ್ಲಿ ಕ್ಷಣಭಂಗುರವಾದದ್ದು ಪ್ರಾಣಗಳಾದರೂ ನಶ್ವರಗಳಾದವುಗಳು ಯೌವನಕಾಲದ ದಿನದಲ್ಲಿ ಸ್ತ್ರೀಯರುಗಳಲ್ಲಿ ಹುಟ್ಟುವ ಮೋಹಜನ್ಯಸುಖಗಳಾದರೋ ಕೊಂಚಕಾಲ ವಿರತಕ್ಕದ್ದು ಈ ಕಾರಣದ ದೆಸೆಯಿಂದ ಬುದ್ಧಿಶಾಲಿಗಳಾದ ಪಂಡಿತರುಗಳಿರಾ ಈ ಸಂಸಾರವನ್ನು ನಿಸ್ಸಾರವೆಂದು ತಿಳಿದು ಲೋಕಗಳಿಗೆ ಅನುಗ್ರಹ ಮಾಡುವುದರ ಉದ್ದಿಶ್ಯ ನಿಮ್ಮಗಳಿಂದ ಪರಬ್ರಹ್ಮಾನುಸಂಧಾನವು ಮಾಡಲ್ಪಡಲಿ ಅಂದರೆ ನೀವುಗಳು ಪರಬ್ರಹ್ಮಾನುಸಂಧಾನವನ್ನು ಮಾಡಿದರೆ ತಮ್ಮಂಥಾ ಮಹನೀಯರನ್ನು ನೋಡಿ ಲೋಕದ ಜನರು ತಾವು ಆರೀತಿ ಮಾಡಿ ಕೃತಾರ್ಥರಾಗುವರು ಎಂದು ಅಭಿಪ್ರಾಯ. ||೩೪||

ಶ್ಲೋ|| ಭೋಗಾಮೇಘವಿತಾನಮಧ್ಯವಿಲಸತ್ಸೌದಾಮಿನೀ
ಚಂಚಲಾಆಯುರ್ವಾಯುವಿಘಟ್ಟಿತಾಬ್ಜಪಟಲೀಲೀ
ನಾಂಬುವದ್ಭಂಗುರಂ || ಲೀಲಾಯೌವನಲಾಲಸಾ
ಸ್ತನುಭೃತಾಮಿತ್ಯಾಕಲಯ್ಯದ್ರುತಂಯೋಗೇಧೈರ್ಯ
ಸಮಾಧಿಸಿದ್ಧಿಸುಲಭೇಬುದ್ಧಿಂವಿದಧ್ವಂಬುಧಾಃ||೩೫||

ಟೀಕು|| ಭೋಗಾಃ-ವಿಷಯಾದಿ ಭೋಗಗಳು, ಮೇಘವಿತಾನಮಧ್ಯವಿಲಸತ್ಸೌದಾಮಿನೀಚಂಚಲಾಃ- ಮೇಘ- ಬಲಾಹಕಗಳ, ವಿತಾನ- ಗುಂಪಿನ, ಮಧ್ಯ-ಮಧ್ಯಭಾಗದಲ್ಲಿ, ವಿಲಸತ್-ಪ್ರಕಾಶಿಸುವ, ಸೌದಾಮಿನೀ- ಮಿಂಚುಗಳೋಪಾದಿಯಲ್ಲಿ, ಚಂಚಲಾಃ-ತರಳಗಳಾದವುಗಳು, ಆಯುಃ-ಆಯುಸ್ಸು, ವಾಯುವಿಘಟ್ಟಿತಾಬ್ಜಪಟಲೀಲೀನಾಂಬುವದ್ಭಂಗುರಂ-ವಾಯು-ಗಾಳಿಯಿಂದ, ವಿಘಟ್ಟಿತ ಹೊಡೆಯಲ್ಪಟ್ಟ, ಅಬ್ಜ- ಕಮಲದ, ಪಟಲೀ- ಸಮೂಹದಲ್ಲಿ, ಲೀನ-ಅಡಗಿದ, ಅಂಬುವತ್ ಉದಕಗಳೋಪಾದಿಯಲ್ಲಿ, ಭಂಗುರಂ- ಕ್ಷಣಿಕವಾದದ್ದು, ತನುಭೃತಾಂ-ಮನುಷ್ಯರಿಗೆ ಮತ್ತು ಇತರ ಪ್ರಾಣಿಗಳಿಗೆ ಯೌ

ವನಲಾಲಸಾಃ- ಯೌವನ- ಯೌವನದ, ಲಾಲಸಾಃ - ಕೋರಿಕೆಗಳು, ಚಲಾಃ-ಚಂಚಲವಾದವುಗಳು, ಇತಿ- ಹೀಗೆಂದು, ಆಕಲಯ್ಯ- ತಿಳಿದು, ಹೇಬುಧಾಃ-ಎಲೈ ವಿದ್ವಾಂಸರುಗಳಿರಾ, ದೃತಂ-ಜಾಗ್ರತೆಯಾಗಿ, ಧೈರ್ಯಸಮಾಧಿಸಿದ್ಧಿಸುಲಭೇ-ಧೈರ್ಯ-ಧೈರ್ಯದ, ಸಮಾಧಿಸಿದ್ಧಿ-ಪ್ರಾಪ್ತಿಯಿಂದ, ಸುಲಭೇ- ಸುಲಭದಿಂದ ಲಭಿಸುವದಕ್ಕೆ ಯೋಗ್ಯವಾದ, ಯೋಗೇ ಯೋಗಾಭ್ಯಾಸದಲ್ಲಿ, ಬುದ್ಧಿಂ-ಮತಿಯನ್ನು, ವಿದಧ್ವಂ-ಮಾಡಿರಿ ।೩೫।

ತಾತ್ಪರ್ಯ—ಮೊದಲು ಹೇಳಿದ ಅರ್ಥವನ್ನೆ ಭಂಗ್ಯಂತರದಿಂದ ಹೇಳುತ್ತಾನೆ. ಅದು ಹೇಗಂದರೆ:—ಎಲೈ ವಿದ್ವಾಂಸರುಗಳಿರಾ ಕೇಳಿರಿ-ಸ್ರಕ್ಚಂದನಾದಿ ವಿಷಯೋಪಭೋಗಗಳು ಮಳೆಕಾಲದಲ್ಲಿ ಹುಟ್ಟುವ ಮಿಂಚುಗಳ ಹಾಗೆ ಅತಿ ಚಂಚಲವಾದವುಗಳು ಮತ್ತು ಆಯುಸ್ಸು ಅದರೋ ಗಾಳಿಯಿಂದ ಹೊಡೆಯಲ್ಪಟ್ಟ ಕಮಲಗಳು ನೀರಿನಲ್ಲಿ ಮುಳುಗಿದ್ದ ಕಾಲದಲ್ಲಿ ಅವರಮೇಲೆ ಇರುವ ನೀರುಹೇಗೆ ಉತ್ತರಕ್ಷಣದಲ್ಲಿ ನೀರಿನಲ್ಲಿ ಸೇರುವವೋ ಹಾಗೆ ಅತಿತರಳವಾದದ್ದು ಯೌವನಕಾಲದಲ್ಲಿ ಉಂಟಾಗುವ ಮದಾಲಸಗಳಾದ ಮನ್ಮಥಕಾರ್ಯಗಳೂ ಕೂಡ ಕ್ಷಣ ಭಂಗುರಗಳಾದವುಗಳು ಧೈರ್ಯಸಮಾಧಿಸಿದ್ಧಿಯಿಂದ ಯೋಗಶಾಸ್ತ್ರದಲ್ಲಿ ಬುದ್ಧಿಯನ್ನು ಮಾಡಿ ಸುಖಪಡಿರಿ ಎಂದು ತಾತ್ಪರ್ಯ. ಭೋಗಗಳು ವಿದ್ಯುಚ್ಚಂಚಲವೆಂತಲೂ ಆಯುಸ್ಸುವಾಯುವಿಘಟ್ಟಿತ ನಳಿನೀದಳಗತ ಜಲಚಂಚಲವೆಂತಲೂ ಮತ್ತು ಕಾಮುಕಾಲಾತಂತ್ರವು ಕ್ಷಣ ಭಂಗುರವೆಂದು ಹೇಳಿದ್ದರಿಂದ ಪಾದತ್ರಯದಲ್ಲಿಯೂ ಉಪಮಾಲಂಕಾರಃ ॥ ॥೩೫॥

ಶ್ಲೋ॥ ಆಯುಃಕಲ್ಲೋಲಲೋಲಂ ಕತಿಪಯದಿವಸಸ್ಥಾಯಿ
ನೀಯೌವನಶ್ರೀರರ್ಥಾಸಂಕಲ್ಪಕಲ್ಪಾಘನ ಸಮ
ಯತಟಿದ್ವಿಭ್ರಮಾಭೋಗಪೂಗಾಃ ॥ ಕಂಠಾಶ್ಲೇಷೋ
ಪಗೂಢಂತದಪಿಚನಚಿರಂಯತ್ಪ್ರಿಯಾಭಿಃಪ್ರಣೀತಂ
ಬ್ರಹ್ಮಣ್ಯಾಸಕ್ತಚಿತ್ತಾಭವತಭವಭಯಾಂಭೋಧಿ
ಪಾರಂತರೀತುಂ ॥ ೩೬ ॥

ಟೀಕು॥ ಆಯುಃ-ಆಯುಸ್ಸು, ಕಲ್ಲೋಲಲೋಲಂ- ಕಲ್ಲೋಲ- ಜಲತರಂಗದೋಪಾದಿಯಲ್ಲಿ ಲೋಲಂ ಚಂಚಲವಾದದ್ದು, ಯೌವನಶ್ರೀಃ-ಯೌವನಸಂಪತ್ತು, ಕತಿಪಯದಿವಸಸ್ಥಾಯಿನೀ ಕತಿಪಯದಿವಸ-ಕೆಲವು ದಿವಸಗಳಲ್ಲಿ, ಸ್ಥಾಯಿನೀ ಇರುವಂಥಾದ್ದು, ಅರ್ಥಾಃ-ದ್ರವ್ಯಗಳು, ಸಂಕಲ್ಪಕಲ್ಪಾಃ-ಮನೋರಥಕಲ್ಪಗಳು, ಅಂದರೆ ತಾದೃಶಗಳು, ಭೋಗಪೂಗಾಃ- ಭೋಗ-ಶಬ್ದಾದಿವಿಷಯೋಪಭೋಗಗಳ, ಪೂಗಾಃ- ಗುಂಪುಗಳು, ಘನಸಮಯತಟಿದ್ವಿಭ್ರಮಾಃ-ಘನಸಮಯ-ಮೇಘೋದಯಕಾಲದಲ್ಲಿ, ತಟಿತ್-ಮಿಂಚುಗಳ ವಿಭ್ರಮಾಃ-ವಿಲಾಸಗಳೋಪಾದಿಯಲ್ಲಿ ವಿಲಾಸಗಳುಳ್ಳವು, ಅಂದರೆ-ಕ್ಷಣಭಂಗುರಗಳಾದವುಗಳು, ಪ್ರಿಯಾಭಿಃ- ಪ್ರಾಣಪ್ರೇಯಸಿಯರಿಂದ, ಪ್ರಣೀತಂ-ಮಾಡಲ್ಪಟ್ಟ, ಯತ್- ಯಾವ, ಕಂಠ ಶ್ಲೇಷೋಪಗೂಢಂ- ಕಂಠಾಶ್ಲೇಷ-ಕೊರಳನ್ನು ತಬ್ಬಿಕೊಳ್ಳೋಣದರಿಂದುಂಟಾದ, ಉಪಗೂಢಂ- ಆಲಿಂಗನವೆಂಬುವದು, ಯತ್-ಯಾವದೂ ತದಪಿಚ ಅದೂಕೂಡಾ, ನಚಿರಂ-ಶಾಶ್ವತವಾದದ್ದಲ್ಲ, ಭವಭಯಾಂಭೋಧಿಪಾರಂ ಭವ ಉತ್ಪತ್ತಿಯೆಂಬುವ, ಅಂಭೋಧಿ-ಸಮುದ್ರದ, ಪಾರಂ- ಗಟ್ಟನ್ನು, ತರೀತುಂ- ದಾಟುವದಕ್ಕೋಸ್ಕರ, ಬ್ರಹ್ಮಣಿ-ಪರಬ್ರಹ್ಮದಲ್ಲಿ, ಆಸಕ್ತಚೇತಾಃ-ಆಸಕ್ತ-ಕೂಡಿದಂಥ, ಚೇತಾಃ- ಮನಸ್ಸುವುಳ್ಳವರ , ಭವತ-ಆಗಿರಿ ॥೩೬॥

ತಾತ್ಪರ್ಯ—ಈ ಶ್ಲೋಕದಲ್ಲಿಯೂ ಜನವನ್ನು ಸಂಬೋಧನಮಾಡಿ ಹೇಳುತ್ತಾನೆ. ಅದು ಹೇಗೆಂದರೆ;—ಮನುಷ್ಯನಿಗೆ ಇರುವ ಆಯುಸ್ಸು ಆದರೂ ನೀರಿನಮೇಲೆ ಬರುವ ತೆರೆಗಳೋಪಾದಿಯಲ್ಲಿ ಅತಿಚಂಚಲವಾದದ್ದು ಮನುಷ್ಯನ ಯೌವನ ಸಂಪತ್ತು ಎಂಬುವದಾದರೂ ಕೆಲವು ಕಾಲವಿರುವದೆ ಹೊರತು ಚಿರಕಾಲ ಇರುವದಿಲ್ಲ ದ್ರವ್ಯವೆಮೊದಲಾದ ಗೃಹಾರಾಮಕ್ಷೇತ್ರಾದಿಗಳೂ ಕೂಡ ಸಂಕಲ್ಪಕಲ್ಪವೆಂದರೆ ದೃಶ್ಯಾದೃಶ್ಯಾಯ ಮಾನವಾಗಿರುವವು. ಮನುಷ್ಯರ ಸ್ರಕ್ಚಂದನ ವಿಷಯಾದಿ ಭೋಗಗಳು ಸಮುದಾಯಗಳು ಕೂಡ ಮೇಘೋದಯದಲ್ಲಿ ವಿದ್ಯುತ್ ಸ್ಫುರಣದೋಪಾದಿಯಲ್ಲಿ ಚಂಚಲವಾದವುಗಳು ಅಂದರೆ ಯಾವಜ್ಜೀವಚಿರಕಾಲ ಸ್ಥಾಯಿನಿಯಾದದ್ದಲ್ಲ ಪ್ರಾಣಪ್ರೇಯಸಿಯರಾದ ಸುಂದರಿಯರು ಮಾಡುವ ಕಂಠಾಲಿಂಗನಪೂರ್ವಕವಾದ ದೃಢಾಲಿಂಗನೆಗಳು ಕೂಡ ಕ್ಷಣಿಕವಾದದ್ದು, ಆದ್ದರಿಂದ ಜನನ ಮರಣಗಳೆಂಬುವ ಸಂಸಾರ ಸಮುದ್ರದಗಟ್ಟನ್ನು ಹೊಂದುವದಕ್ಕೆ

ವೈರಾಗ್ಯವೊಂದೇ ಸಾಧನವಾದದ್ದು ಆದ್ದರಿಂದ ಯೋಗಾಭ್ಯಾಸವನ್ನು ಮಾಡಿ ಈ ಸಂಸಾರದುಃಖದಿಂದ ದಾಟಿಸಲ್ಪಟ್ಟು ಕೃತಾರ್ಥರಾಗಿರಿ ಎಂದು ತಾತ್ಪರ್ಯ. ಆಯುಃಕಲ್ಲೋಲಲೋಲ ಇತ್ಯಾದಿ ಶಬ್ದಪ್ರಯೋಗದಿಂದ || ಉಪಮಾಲಂಕಾರಃ || ಸ್ರಗ್ಧರಾವೃತ್ತಂ || ||೩೬||

ಶ್ಲೋ|| ಕೃಚ್ಛ್ರೇಣಾಮೇಧ್ಯಮಧ್ಯೇನಿಯಮಿತತನುಭಿಃಸ್ಥೀ
ಯತೇಗರ್ಭವಾಸೇಕಾಂತಾವಿಶ್ಲೇಷದುಃಖವ್ಯತಿಕರವಿ
ಷಮೋಯೌವನೇಚೋಪಭೋಗಃ || ವಾಮಾಕ್ಷೀಣಾ
ಮವಜ್ಞಾವಿಹಸಿತವಸತಿರ್ವೃದ್ಧಭಾವೋಪ್ಯಸಾಧು
ಸ್ಸಂಸಾರೇರೇಮನುಷ್ಯಾವದತಯದಿಸುಖಂಸ್ವಲ್ಪಮ
ಪ್ಯಸ್ತಿಕಿಂಚಿತ್ ||೩೭||

ಟೀಕು|| ಗರ್ಭವಾಸೇ ಗರ್ಭದಲ್ಲಿ ವಾಸವಾಡುವಕಾಲದಲ್ಲಿ, ಅಮೇಧ್ಯಮಧ್ಯೆ-ಅಮೇಧ್ಯಭಾಗದಲ್ಲಿ, ನಿಯಮಿತತನುಭಿಃ- ನಿಯಮಿತ ಸಂಕುಚಿತವಾಗಿ ಮಾಡಲ್ಪಟ್ಟ, ತನುಭಿಃ-ಶರೀರಗಳಿಂದ, ಕೃಚ್ಛ್ರೇಣ-ಅತಿಕಷ್ಟವಾಗಿ, ಸ್ಥೀಯತೇ-ಇರೋಣವಾಗುತ್ತದೆ, ಅಥ-ಅನಂತರದಲ್ಲಿ, ಯೌವನೇ-ಯೌವನಕಾಲದಲ್ಲಿ, ಉಪಭೋಗಶ್ಚ- ಕಾಮೋಪಭೋಗವೂಕೂಡ, ಕಾಂತಾವಿಶ್ಲೇಷದುಃಖವ್ಯತಿಕರವಿಷಮಃ- ಕಾಂತಾ ಸ್ತ್ರೀಯು, ವಿಶ್ಲೇಷ- ವಿಯೋಗದಲ್ಲಿವುಂಟಾದ, ದುಃಖ- ಸಂಕಟದ, ವ್ಯತಿಕರ- ಪರಂಪರೆಯಿಂದ, ವಿಷಮಃ- ವ್ಯತ್ಯಾಸವಾದಂಥಾದ್ದು. ವೃದ್ಧಭಾವೋಪಿ- ವಾರ್ಧಕ್ಯವೂಕೂಡ, ವಾಮಾಕ್ಷೀಣಾಂ-ಸುಂದರ ಕಾಮಿನಿಯರ ಅವಜ್ಞಾವಿಹಸಿತವಸತಿಃ-ಅವಜ್ಞಾ-ಅವಮಾನದಿಂದ, ವಿಹಸಿತ-ಹಾಸ್ಯಮಾಡಲ್ಪಟ್ಟ, ವಸತಿಃ- ವಾಸವುಳ್ಳದ್ದಾದಕಾರಣವೆ, ಅಸಾಧುಃ-ಯೋಗ್ಯವಾದದ್ದಲ್ಲ, ರೇ-ಎಲೈಮನುಷ್ಯರೆ, ಸಂಸಾರೇ-ಸಂಸಾರದಲ್ಲಿ, ಸ್ವಲ್ಪಮಪಿ- ಕೊಂಚವಾದರು. ಸುಖಂ-ಆನಂದವು, ಅಸ್ತಿಯದಿ- ಇದೆಏನು, ವದತ-ಹೇಳಿ, ಕಿಮಪಿ-ಸ್ವಲ್ಪವೂಕೂಡ, ನಾಸ್ತಿ-ಇಲ್ಲ, ಅತಃ- ಆಕಾರಣದದೆಸೆಯಿಂದ, ಕಿಂತು- ಮತ್ತೇನಂದರೆ, ಯೋಗಾಯ- ಯೋಗಾಭ್ಯಾಸವನ್ನು ಮಾಡುವದಕ್ಕೆ. ಯತಧ್ವಂ- ಯತ್ನಮಾಡಿರಿ ||೩೭||

ತಾತ್ಪರ್ಯ—ಈ ಶ್ಲೋಕದಲ್ಲಿ ಸಂಸಾರದಲ್ಲಿ ಸುಖವು ಸ್ವಲ್ಪವೂ ಯಿಲ್ಲ ಆದ್ದರಿಂದ ವೈರಾಗ್ಯವನ್ನು ಹೊಂದಿರೆಂದು ಹೇಳುತ್ತಾನೆ. ಅಮ

ಹೇಗಂದರೆ;—ಎಲ್ಲಾ ಮನುಷ್ಯರೆ ಕೇಳಿ ಮೊದಲು ಮನುಷ್ಯನು ಜನ್ಮಿಸುವ ದಕ್ಕೆ ಪೂರ್ವ ಮಾತೃಗರ್ಭದಲ್ಲಿ ಕೈಕಾಲುಗಳು ಸ್ವಾಧೀನವಿಲ್ಲದೆ ಇದ್ದು ಹುಟ್ಟುತ್ತಾನೆ. ಹುಟ್ಟಿ ಯೌವನ ಬಂದಕಾಲದಲ್ಲಿ ಕಾಮಿನೀವಿಯೋಗ ಜನ್ಯವಾದ ದುಃಖಪರಂಪರೆಯುಳ್ಳಿ ಕಾಮೋಪಭೋಗವಿಲ್ಲದೆ ಸಂಕಟಪಡು ತ್ತಾನೆ. ಕಾಮುಕಕಾಲವೆಂದರೆ ಯೌವನಕಾಲ ಅದು ಕಳೆದು ವಾರ್ಧಿಕ್ಯ ಬಂದಾಗ ಕಾಮಿನಿಯರು ಹಾಸ್ಯಮಾಡುತಾ ಇರುತ್ತಾರೆ. ಇದನ್ನು ನೋಡಿದರೆ ಬಾಲ್ಯದಲ್ಲಿ ಮಾತೃಗರ್ಭಸ್ಥಿತ ಅಮೇಧ್ಯಕೂಪದಲ್ಲಿ ಪರಿವರ್ತ ನವು ಯೌವನದಲ್ಲಿ ಕಾಮಿನೀವಿಯೋಗ ಚಿತ್ತಪರಿತಾಪವು ವಾರ್ಧಿಕ್ಯದಲ್ಲಿ ಸುಂದರಾಂಗಿಯರು ಮಾಡುವ ಪರಿಹಾಸವು ಈ ರೀತಿಯಾಗಿ ಬಾಲ್ಯದಾರ ಭ್ಯ ಮರಣಾಂತವಾಗಿ ಸಂಸಾರದಲ್ಲಿ ದುಃಖಪರಂಪರೆ ಹೊರತು ಸುಖವು ಪ ನೂಇಲ್ಲದೆ ಇದೆ. ಆದ್ದರಿಂದ ವೈರಾಗ್ಯ ಜ್ಞಾನವನ್ನು ಆಶ್ರಯಿಸಿ ಸುಖವ ನ್ನು ಹೊಂದಿರಿ ಎಂದು ತಾತ್ಪರ್ಯ. ॥ ಸ್ರಗ್ಧರಾವೃತ್ತಂ ॥ ॥೩೭॥

ಶ್ಲೋ॥ ವ್ಯಾಘ್ರೀವತಿಷ್ಠತಿಜರಾಪರಿತರ್ಜಯಂತೀರೋಗಾಶ್ಚ
ಶತ್ರವಇವಪ್ರಹರಂತಿದೇಹಂ ॥ ಆಯುಃಪರಿಸ್ರವತಿಭಿ
ನ್ನಘಟಾದಿವಾಂಭೋಲೋಕಸ್ತಥಾಪ್ಯಹಿತಮಾಚರ
ತೀತಿಚಿತ್ರಂ ॥೩೮॥

ಟೀಕಾ॥ ವ್ಯಾಘ್ರೀವ-ಹೆಣ್ಣುಹುಲಿಯೋಪಾದಿಯಲ್ಲಿ, ಜರಾ- ವಾರ್ಧಿಕ್ಯ ವು, ಪರಿತರ್ಜಯಂತೀ(ಸತೀ-ಭಯಪಡಿಸುತ್ತಲಿರುವದಾಗಿ, ತಿಷ್ಠತಿ- ಕೂತು ಕೊಂಡಿರುವದ, ರೋಗಾಶ್ಚ - ಸನ್ನಿಪಾತಾದಿ ರೋಗಗಳೂಕೂಡ, ಶತ್ರವಇವ- ವೈರಿಜನಗಳೋಪಾದಿಯಲ್ಲಿ, ದೇಹಂ-ಶರೀರವನ್ನು, ಪ್ರಹರಂತಿ-ಹೊಡೆಯು ತ್ತಲಿವೆ, ಆಯುಃ-ಆಯುಷ್ಯವು, ಭಿನ್ನಘಟಾತ್-ಭಿನ್ನ-ರಂಧ್ರವಾದ, ಘಟಾ-ಗ ಡಿಗೆಯಿಂದ, ಅಂಭುಇವ-ಉದಕದೋಪಾದಿಯಲ್ಲಿ, ಪರಿಸ್ರವತಿ-ಸೋ ರಿಹೋಗುತ್ತದೆ.ತಥಾಪಿ-ಹಾಗಾದಾಗ್ಯೂ ದರೂಕೂಡ, ಲೋಕಃ-ಜನವು, ಅಹಿ ತಂ-ಅಪಕಾರವನ್ನು, ಆಚರಂತಿ-ಆಚರಿಸುತ್ತಾರೆ, ಉಪಕಾರಗಳನ್ನು ಮಾಡಿ ಕೊಳ್ಳುವದಿಲ್ಲ ॥೩೮॥

ತಾತ್ಪರ್ಯ—ಈ ಶ್ಲೋಕದಲ್ಲಿ ಮನುಜನು ತನಗೆ ಹಿತಾಚರಣೆಯ ನ್ನು ಮಾಡಿಕೊಳ್ಳದೆ ವ್ಯಂಥವಾಗಿ ಕೆಟ್ಟುಹೋಗುತ್ತಾನೆಂದು ಹೇಳುತ್ತಾನೆ

ಅದು ಹೇಗೆಂದರೆ; — ಹುಲಿಯು ಹೆದರಿಸುತಿರುವ ಹಾಗೆ ಜರಾವಸ್ಥೆಯು ಕಾದುಕೊಂಡಿದೆ. ಶತ್ರುಜನಗಳ ಹಾಗೆ ರೋಗವು ದೇಹವನ್ನು ಹೊಡಿಯುತ್ತಲಿದೆ. ಕಂಡಬಿದ್ದಿರುವ ಗಡಿಗೆಯಲ್ಲಿರುವ ನೀರು ಸೋರಿಹೋಗುವಹಾಗೆ ಆಯುಸ್ಸು ಕಮ್ಮಿಯಾಗುತ್ತದೆ. ಹೀಗೆ ಇದ್ದಾಗ್ಯೂ ಅದನ್ನು ಆಲೋಚಿಸಿ ತ.ವು ಕೃತ ಘ್ನರಾಗುವುದನ್ನು ಅರಿಯದೆ ನರಕಭಾಜನರಾಗುತಾರೆ ಇದು ಆಶ್ಚರ್ಯವೆಂದು ಹೇಳಿದ್ದಾನೆಂದು ತಾತ್ಪರ್ಯ || ವಸಂತತಿಲಕಾವೃತ್ತಂ || ಮತ್ತು ಉಪಮಾಲಂಕಾರವು. ||೩೮||

ಶ್ಲೋ|| ಬ್ರಹ್ಮೇಂದ್ರಾದಿಮರುದ್ಗಣಾಂಸ್ತೃಣಕಣಾನ್ಯ
ತ್ರಸ್ಥಿತೋಮನ್ಯತೇಯತ್ಸ್ವಾದಾದ್ವಿರಸಾಭವಂ
ತಿವಿಭವಾಸ್ತ್ರೈಲೋಕ್ಯರಾಜ್ಯಾದಯಃ || ಭೋಗಃ
ಕೋಪಿಸಏಕಏವಪರಮೋ ನಿತ್ಯೋದಿತೋಜೃಂ
ಭತೇಭೋಸಾಧೋ ಕ್ಷಣಭಂಗುರೇ ತದಿತರೇ ಭೋಗೇರ
ತಿಂಮಾಕೃಥಾಃ ||೩೯||

ಟೀಕು|| ಯತ್ರ- ಯಾವನಿರತಿಶಯವಾದ ಬ್ರಹ್ಮಾನಂದದಲ್ಲಿ, ಸ್ಥಿತಃ- ಇರುವ ಪುರುಷ-ಮನುಷ್ಯನು, ಬ್ರಹ್ಮೇಂದ್ರಾದಿಮರುದ್ಗಣಾನ್ ಬ್ರಹ್ಮೇಂದ್ರಾದಿಗಳೆ ಮೊದಲಾಗಿವುಳ್ಳ, ಮರುದ್ಗಣಾನ್-ದೇವತೆಗಳ ಸಮೂಹವನ್ನು, ತೃಣಕಣಾನ್-ತೃಣ ಹುಲ್ಲಿನ, ಕಣಾನ್ ಲೇಶಗಳನ್ನಾಗಿ, ಮನ್ಯತೇ- ತಿಳಿಯುತ್ತಾನೋ, ಯತ್ಸ್ವಾತ್ತಾನೋ, ಯತ್ಸ್ವಾದಾತ್-ಯತ್-ಯಾವಬ್ರಹ್ಮಾನಂದದ, ಸ್ವಾದಾತ್- ರಸಾನುಭವದದೆಸೆಯಿಂದ, ತ್ರೈಲೋಕ್ಯರಾಜ್ಯಾದಯಃ- ತ್ರಿಲೋಕರಾಜ್ಯಭೋಗವೆ ಮೊದಲಾಗಿವುಳ್ಳಂಥ, ವಿಭವಾಃ- ಐಶ್ವರ್ಯಗಳು, ವಿರಸಾಃ- ತುಚ್ಛಗಳ , ಅಥವಾ ನೀರಸವಾದವುಗಳು, ಭವಂತಿ- ಆಗುತ್ತವೆ, ಕೋಪಿ- ಅನಿರ್ವಚನೀಯವಾದ, ಪರಮಃ- ಅತ್ಯುತ್ತಮವಾದ, ಭೋಗಃ- ಆನಂದಭೋಗವು, ನಿತ್ಯೋದಿತಃ-ಶಾಶ್ವತವಾದದ್ದಾಗಿ, ಉಜ್ಜೃಭತೇ- ವಿಜೃಂಭಿಸುತ್ತದೆಯೋ, ಹೇಸಾಧೋ,- ಎಲೈ ಸಜ್ಜನರೆ, ತದಿತರೇ- ತತ್- ಆಬ್ರಹ್ಮಾನಂದಕ್ಕಿಂತಲೂ, ಇತರ-ಅನ್ಯವಾದ, ಕ್ಷಣಭಂಗುರೇ- ಕ್ಷಣ- ಕ್ಷಣಕಾಲದಲ್ಲಿ, ಭಂಗುರೇ-ನಾಶವಾಗುವ, ಭೋಗೇ- ವೈಷಯಿಕಾನಂದದಲ್ಲಿ, ಇದಂ- ಆಸಕ್ತಿಯನ್ನು, ಮಾಕೃಥಾಃ ಮಾಡಬೇಡ, ||೩೯||

ತಾತ್ಪರ್ಯ—ಮನುಷ್ಯಾನಂದ ಗಂಧರ್ವಾನಂದ ಮುಂತಾದವು ನಶ್ವರವಾದವುಗಳು ಆದ್ದರಿಂದ ಅಂಥಾವುಗಳಲ್ಲಿ ಆಸಕ್ತರಾಗಬೇಡಿ ಎಂದು ಹೇಳುತ್ತಾನೆ. ಅದು ಹೇಗಂದರೆ:—ಬ್ರಹ್ಮಾನಂದದಲ್ಲಿ ಇರುವ ಮನುಷ್ಯನು ಚತುರ್ಮುಖ ಬ್ರಹ್ಮ ಇಂದ್ರಾದಿಗಳನ್ನು ಹುಲ್ಲುಗಳ ತುಂಡುಗಳಾಗಿ ನೋಡುತ್ತಾನೆ. ಯಾವರಾಜ್ಯ ಭೋಗಾದಿ ಆನಂದಗಳು ಬ್ರಹ್ಮಾನಂದಕ್ಕಿಂತ ಕಮ್ಮಿಯಾದದ್ದು ಆಗಿದೆಯೋ ಆದ್ದರಿಂದ ಎಲೈ ಮನುಷ್ಯರೆ ಬ್ರಹ್ಮಾನಂದಕ್ಕಿಂತಲು ಇತರವಾದ ಕ್ಷಣಭಂಗುರವಾದ ವೈಷಯಿಕಾನಂದವನ್ನು ಆಶ್ರಯಿಸಬೇಡಿಯೆಂದು ತಾತ್ಪರ್ಯ. ॥ ಸ್ರಗ್ಧರಾವೃತ್ತಂ ॥ ॥೩೯॥

ಶ್ಲೋ॥ ಭೋಗಾಭಂಗುರವೃತ್ತಯೋಬಹುವಿಧಾಸ್ತೈರೇವ
ಚಾಯಂಭವಸ್ತತ್ಕಸ್ಯೇಹಕೃತೇಪರಿಭ್ರಮತರೇಲೋ
ಕಾಃಕೃತಂಚೇಷ್ಟಿತೈಃ ॥ ಆಶಾಪಾಶಶತೋಪಶಾಂತಿ
ವಿಶದಂಚೇತಸ್ಸಮಾಧೀಯತಾಂಕಾಮೋತ್ಪತ್ತಿವಶಾ
ತ್ಸ್ವಧಾಮನಿಯದಿಶ್ರದ್ಧೇಯಮಸ್ಮದ್ವಚಃ ॥೪೦॥

ಟೀಕು ॥ ಭೋಗಾಃ- ವಿಷಯಾದಿ ಭೋಗಗಳು, ಭಂಗುರವೃತ್ತಯಃ- ಭಂಗುರ- ನಾಶಪ್ರತಿಯೋಗಿಯಾದ, ವೃತ್ತಯಃ- ವ್ಯಾಪಾರವುಳ್ಳವುಗಳು, ಬಹುವಿಧಾಃ- ನಾನಾಪ್ರಕಾರಗಳುಳ್ಳದ್ದು, ಭವಂತಿ- ಆಗುತ್ತವೆ, ತೈರೇವ- ಆಭೋಗಾದಿವಾಸನಾವಿಶೇಷಗಳಿಂದಲೆ, ಅಯಂಚ ಈ ಪರಿವರ್ತಮಾನವಾದ, ಭವಃ-ಶರೀರಧಾರಣಾದಿ ಸಂಸಾರವು, ಕಲ್ಪಿತಃ- ಉಂಟುಮಾಡಲ್ಪಟ್ಟಿತು. ರೇ ಲೋಕಾಃ-ಎಲೈ ಜನಗಳಿರಾ, ಇಹ- ಈಗ, ತತ್ರ ಆಸಂಸಾರದಲ್ಲಿ, ಕಸ್ಯಕೃತೇ- ಯಾವಭೋಗಾನುಭವಕೋಸ್ಕರ, ಪರಿಭ್ರಮತ - ತಿರುಗುತ್ತಲಿದ್ದೀರಿ, ಅತಃ- ಆಕಾರಣದ ದೆಸೆಯಿಂದ, ಚೇಷ್ಟಿತೈಃ- ಭೋಗಾದಿಸಂಗ್ರಹವ್ಯಾಪಾರಗಳಿಂದ, ಕೃತಂ- ಶರೀರಸಂಗ್ರಹವ್ಯಾಪಾರವು ಮಾಡತಕ್ಕದ್ದಲ್ಲ, ಅಸ್ಮದ್ವಚಃ- ನಾವು ಹೇಳುವ ವಾಕ್ಯ, ಶ್ರದ್ಧೇಯಂ ಯದಿಗಮನಿಸುವದಕ್ಕೆ ಯೋಗ್ಯವಾದದ್ದು, ಅಂದರೆ—ಆಶಾಪಾಶಶತೋಪಶಾಂತಿವಿಶದಂ-ಆಶಾಪಾಶ- ಪಾಶದಂತೆ ಬದ್ಧವಾದ ಆಸೆಗಳ, ಶತ-ನೂರರ, ಉಪಶಾಂತ- ಶಮನದಿಂದ, ವಿಶದಂ- ಶುಭ್ರವಾದ, ಅಥವಾ-ನಿರ್ಮಲವಾದ, ಚೇತಃ- ಮನಸ್ಸು, ಕಾಮೋತ್ಪತ್ತಿವಶಾತ್-

ಕಾಮು- ಅಧಿಲಾಷೆಯು ಅಥವಾ- ಅನುರಾಗದ, ಉತ್ಪತ್ತಿ- ಹುಟ್ಟೋಣದರ, ವಶಾತ್- ದೆಸೆಯಿಂದ, ಸ್ವಧಾಮನಿ-ಸ್ವಯಂಜ್ಯೋತಿಸ್ವರೂಪನಾದ ಆತ್ಮನಲ್ಲಿ, ಸಮಾಧೀಯತಾಂ-ಸ್ಥಿರವಾಗಿ ನಿಲ್ಲಿಸಲ್ಪಡಲಿ ॥೩೦॥

ತಾತ್ಪರ್ಯ— ಈ ಶ್ಲೋಕದಲ್ಲಿ ಭೋಗಾದಿಗಳು ಸ್ಥಿರವಾದವಲ್ಲ ಸರ್ವರೂ ನನ್ನ ಮಾತನ್ನು ಕೇಳಿ ಆತ್ಮನಲ್ಲಿ ಮನಸ್ಸು ಇಡಿರಿ ಎಂದು ಜನಸಂಬೋಧನೆ ಮಾಡಿಹೇಳುತ್ತಾನೆ. ಅದು ಹೇಗಂದರೆ;— ಎಲೈ ಜನಗಳಿರಾ ಕೇಳಿರಿ ಸ್ರಕ್ಚಂದನವಿಷಯಾದಿಭೋಗಗಳೆಲ್ಲವು ನಾಶವಾಗಿ ಹೋಗುವವು ಶಾಶ್ವತವಾದವುಗಳಲ್ಲ ಈ ಭೋಗಾದಿಗಳು ನಾನಾವಿಧಗಳಾಗಿವೆ ಈಭೋಗಾದಿವಾಸನಾ ವಿಶೇಷದಿಂದಲೆ ಮನುಷ್ಯನಿಗೆ ಶರೀರ ರೂಪವಾದ ಸಂಸಾರ ವುಂಟಾಗುವುದು. ಇದು ಯಾತಕ್ಕೋಸ್ಕರ ಉಂಟಾಯಿತೆಂಬುವದನ್ನು ತಿಳಿಯಿರಿ ವಿಷಯಾದಿ ಭೋಗಗಳ ಭ್ರಮೆಯಲ್ಲಿ ನಾನಾ ಜಂತುಜಾಲಗಳಲ್ಲಿ ಶರೀರ ಯಾವತ್ತು ಹಾಳು ಮಾಡಿಕೊಳ್ಳಬೇಡಿರಿ ಆಶೆಯೆಂಬುವದು ಮನುಷ್ಯನಿಗೆ ಹಗ್ಗದಹಾಗೆ ಕಟ್ಟಿ ಎಳೆದುಕೊಂಡು ಹೋಗುತ್ತದೆ. ಮನಸ್ಸು ಎಂಬುವದು ಕಾಮೋತ್ಪತ್ತಿಗೆ ಕಾರಣವಾದದ್ದು ಇಂಥಾ ನೂರು ಆಶೆಯಿದ್ದಾಗ್ಯೂ ತೊರೆದು ಮನಸ್ಸು ನಿರ್ಮಲವಾಡಿಕೊಂಡು ನಮ್ಮ ಮಾತಿನಲ್ಲಿ ವಿಶ್ವಾಸವಿಡುವದಾದರೆ ಸ್ವಯಂಜ್ಯೋತಿ ಸ್ವರೂಪನಾದ ಪರಮಾತ್ಮನಲ್ಲಿ ಮನಸ್ಸನ್ನು ಇಡಿರಿ ಮುಂದೆ ಜನನ ಮರಣದುಃಖಗಳು ಉಂಟಾಗುವದಿಲ್ಲವೆಂದು ಹೇಳಿದನೆಂದು ತಾತ್ಪರ್ಯ. ಆಶಾಪಾಶವೆಂಬುವುದರಿಂದ ॥ ಉಪಮಾಲಂಕಾರಃ ॥ ಶಾರ್ದೂಲ ವಿಕ್ರೀಡಿತವೃತ್ತಂ. ॥೩೦॥

## ಕಾಲಮಹಿಮಾನುವರ್ಣನ ಪ್ರಾರಂಭವು.

ಶ್ಲೋ॥ ಸಾರಮ್ಯಾನಗರೀಮಹಾಂಸ್ಸನೃಪತಿಸ್ಸಾಮಂತಚಕ್ರಂಚತತ್ಪಾರ್ಶ್ವೇತಸ್ಯಚಸಾವಿದಗ್ಧಪರಿಷತ್ತಾಶ್ಚಂದ್ರಬಿಂಬಾನನಾಃ ॥ ಉದ್ವೃತ್ತಸ್ಸಚರಾಜಪುತ್ರನಿವಹಸ್ತೇವಂದಿನಸ್ತಾಃಕಥಾಸ್ಸರ್ವಂಯಸ್ಯವಶಾದಗಾತ್ಸ್ಮೃತಿಪಥಂಕಾಲಾಯತಸ್ಮೈನಮಃ ॥೩೧॥

ಟೀಕು॥ ಸಾ-ಅಪೂರ್ವೋತ್ಕೃಷ್ಟವಾದ, ನಗರೀ-ಪಟ್ಟಣವು, ರಮ್ಯಾ-ಮನೋಹರವಾದದ್ದು, ಸನೃಪತಿಃ-ಅರಾಜಕನು, ಮಹಾನ್-ಸರ್ವೋತ್ತಮನಾದವನು, ತತ್-ಅಪ್ರಸಿದ್ಧವಾದ, ಸಾಮಂತಚಕ್ರಂ-ಸಾಮಂತ ಅಧೀನವಾದ ಪರರಾಜರ, ಚಕ್ರಂ-ಸಮೂಹವು, ಮಹತ್-ಅಧಿಕವಾದದ್ದು, ತಸ್ಯ-ಆದೊರೆಯು, ಪಾರ್ಶ್ವೆ-ಉಭಯಪಾರ್ಶ್ವದಲ್ಲಿಯೂ, ಸಾ-ಅಪ್ರಸಿದ್ಧವಾದ, ವಿದಗ್ಧಪರಿಷತ್-ವಿದಗ್ಧ-ಚತುರವಾದ, ಪರಿಷತ್-ಸಭೆಯೂ, ರಮ್ಯಾ-ಸುಂದರವಾದದ್ದು, ತಾಃ-ಅಂಥ, ಚಂದ್ರಬಿಂಬಾನನಾಃ-ಚಂದ್ರಬಿಂಬ-ಚಂದ್ರನೋಪಾದಿಯಲ್ಲಿರುವ, ಆನನಾ-ಮುಖಗಳುಳ್ಳ ಸ್ತ್ರೀಯರುಗಳು, ಉದ್ವೃತ್ತಃ-ಪ್ರಚಂಡವಾದ, ರಾಜಪುತ್ರನಿವಹಃ-ರಾಜಕುಮಾರಕರ ಸಮೂಹವು, ತೇ ವಂದಿನಃ-ಅಂಥ ಸ್ತುತಿಪಾಠಕರು, ತಾಃ ಕಥಾಃ-ಅಂಥಮನೋಹರವಾದ ಕಥೆಗಳು, ಸರ್ವಂ-ಆಯಾಸಮಸ್ತವು, ಕಾಲವಶಾತ್-ಕಾಲ-ಸೂರ್ಯರಥಚಕ್ರವೇಗದಿಂದ ಉಂಟಾದ, ಕಲಾಕಾಷ್ಠಾ ಮುಹೂರ್ತಾದಿಭೇದವುಳ್ಳ ಕಾಲದ, ವಶಾತ್-ಸ್ವಾಧೀನದ ದೆಸೆಯಿಂದ, ಸ್ಮೃತಿಪಥಂ-ಸ್ಮರಣೆಯನ್ನು, ಅಗಾತ್-ಹೊಂದಿತೋ, ತಸ್ಮೈ-ಅಂಥಾ, ಕಾಲಾಯ-ಕಾಲಕ್ಕೋಸ್ಕರ, ನಮಃ-ನಮಸ್ಕಾರವು. ॥೪೧॥

ತಾತ್ಪರ್ಯ—ಈ ಶ್ಲೋಕ ವೊಂದಲಾಗಿ ಕಾಲವೇ ದೊಡ್ಡದು ಎಂಬುವನ್ನು ಹೇಳುತ್ತಾನೆ. ಅದು ಹೇಗೆಂದರೆ;—ಸುಂದರವಾಗಿ ಕಾಣುತ್ತಾ ಇರುವ ಪಟ್ಟಣವು ಯೋಗ್ಯನಾದ ರಾಜನು ಅನೇಕವಾಗಿ ಇರುವ ರಾಜಕುಮಾರಕರು ಸದಾಕಾಲಾಂತರಾಗಿ ಕಾಣಿಕೆಗಳನ್ನು ಒಪ್ಪಿಸುತ್ತಾ ಇರುವ ಸಾಮಂತರಾಜರು ಮತ್ತು ಸ್ತುತಿಪಾಠಕರು ಚಂದ್ರನೋಪಾದಿಯಲ್ಲಿ ಮುಖಗಳುಳ್ಳ ಸ್ತ್ರೀಯರುಗಳು ಸರಸಗಳಾದ ಕಥೆಗಳು ಈ ಎಲ್ಲವು ಯಾವಕಾಲಕ್ಕೆ ಆದರೂ ಅಧೀನವಾಗಿ ನಾಶವನ್ನು ಹೊಂದಿ ಸ್ಮರಣೀಯಗಳು ಆಗಿರುತ್ತವೆಯೋ ಅಂಥಾ ಕಾಲಕ್ಕೋಸ್ಕರ ನಮಸ್ಕಾರಮಾಡುತ್ತಾನೆ. ಅಂದರೆ ಜಗತ್ತು ಎಲ್ಲವು ಕಾಲಾಧೀನವಾದದ್ದು ಹಿಂದೆ ಹೇಳಿದ ವೈಭವಗಳೆಲ್ಲಾ ನಾಶವಾದ ಕೆಲವು ಕಾಲದಮೇಲೆ ಸ್ಮರಣೀಯಗಳಾಗಿ ಆಗುತ್ತವೆ ಎಂದು ತಾತ್ಪರ್ಯ. ॥೪೧॥

ಶ್ಲೋ॥ ಯತ್ರಾನೇಕಃ ಕ್ವಚಿದಪಿಗೃಹೇ ತತ್ರ ತಿಷ್ಠತ್ಯಥೈಕೋ
ಯತ್ರಾಪ್ಯೇಕಸ್ತದನುಬಹವಸ್ತತ್ರ ನೈಕೋಪಿ

ಚಾಂತೇ || ಇತ್ಥಂನೇಯೌರಜನಿದಿವಸೌಲೋಲಯನ್
ದ್ವಾವಿವಾಕ್ಷೌಕಾಲಃಕಲ್ಯೋಭುವನಫಲಕೇಕ್ರೀಡತಿ
ಪ್ರಾಣಿಶಾರೈಃ || ೪೨ ||

ಟೀಕಾ|| ಯತ್ರಗೃಹೇ-ಯಾವ ಮನೆಯಲ್ಲಿ, ಯಾವಕೋಷ್ಟದಲ್ಲಿ ಕ್ವಚಿತ್-ಕೆಲವುಕಾಲದಲ್ಲಿ, ಅನೇಕಃ- ಅಧಿಕವಾಗಿ, ತಿಷ್ಠತಿ- ಇರುತ್ತದೆಯೊ, ಅಥ-ಅನಂತರದಲ್ಲಿ, ತತ್ರಗೃಹೇ-ಆಮನೆಯಲ್ಲಿ, ಏಕಃ-ಒಂದು. ತಿಷ್ಠತಿ-ಇರುತ್ತದೆ ಯತ್ರಾಪಿ ಯಾವಮನೆಯಲ್ಲಿಯಾದರು, ಕವಾಚಿತ್-ಒಂದುಕಾಲದಲ್ಲಿ, ಏಕಃ-ಒಂದು, ತಿಷ್ಠತಿ- ಇದೆಯೋ. ತದನು- ಅನಂತರದಲ್ಲಿ, ತತ್ರ- ಆಮನೆಯ ಲ್ಲಿಯೇ, ಬಹವಃ- ಅನೇಕವು, ತಿಷ್ಠತಿ- ಇರುತ್ತದೆಯೋ. ಅನ್ತೇ- ಪರಿಣಾಮದಲ್ಲಿ ದ್ಯೂತದ ಕೊನೆಯಲ್ಲಿ, ಏಕೋಪಿ- ಒಂದುಕೂಡ, ನಾಸ್ತಿ- ಇಲ್ಲವೋ, ಇತ್ಥಂ-ಈಪ್ರಕಾರವಾಗಿ, ನೇಯೈಃ-ನಿಯಾತೃಗಳಾದ, ಪ್ರಾಣಿಶಾರೈಃ-ಪ್ರಾಣಿ- ಮನುಷ್ಯರೆಂಬುವ, ಅಥವಾ ಚೇತನಗಳೆಂಬುವ, ಶಾರೈಃ- ಗೂಢದ್ಯೂತರುಗಳಿಂದ ದಾಳಗಳಿಂದ, ಕಲ್ಯಃ- ಕಲ್ಪನಶೀಲವಾದ, ಕಾಲಃ- ಸೂರ್ಯರಥಚಕ್ರವೇಗದಿಂದ ಹುಟ್ಟಿದ ಕಾಲವು. ದ್ವೌ-ಎರಡಾದಂಥ, ಅಕ್ಷಾವಿವ-ಪಾಚಿಕಗಳೋಪಾದಿಯಲ್ಲಿ, ರಜನೀದಿವಸೌ-ಹಗಲುರಾತ್ರಿಗಳನ್ನು, ಭುವನಫಲಕೇ-ಯಂತ್ರಸದೃಶವಾದ ಲೋಕದಲ್ಲಿ, ಲೋಲಯನ್ಸನ್- ಅಲ್ಲಾಡಿಸುತ್ತಾ ಇರುವದಾಗಿ, ಕ್ರೀಡತಿ-ಪ್ರಕಾಶವಾನವಾಗಿ ಕ್ರೀಡಿಸುತ್ತಲಿದೆ. |೪೨|

ತಾತ್ಪರ್ಯ—ಈಶ್ಲೋಕದಲ್ಲಿ ಸರ್ವವು ಕಾಲಾಧೀನವಾದದ್ದೆಂಬುವುದನ್ನು ದ್ಯೂತಸಾಮ್ಯದಿಂದ ಹೇಳುತಾನೆ. ಅದು ಹೇಗಂದರೆ:—ದ್ಯೂತವಾಡುವ ಕಾಲದಲ್ಲಿ ದ್ಯೂತಯಂತ್ರದ ಕೋಷ್ಟವೆಂದರೆ ಮನೆಗಳಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಮನೆಯಲ್ಲಿ ಒಂದೊಂದು ಕಾಯಿಇರುತ್ತೆ ಮತ್ತೊಂದು ಕಾಲದಲ್ಲಿ ಅದೆಮನೆಯಲ್ಲಿ ಬಹು ಕಾಯಿಗಳು ಅಂದರೆ ಅಕ್ಷಗಳು ಇರುತ್ತೆ ಕೆಲವುಕಾಲದಲ್ಲಿ ಒಂದಿವ್ವಮನೆಯಲ್ಲಿ ಬಹು ಕಾಯಿಗಳು ಇರುತ್ತವೆ. ಆಟವಾಡುಗಿದುಹೋದರೆ ಪರಿಣಾಮದಲ್ಲಿ ಒಂದೂ ಇರುವದಿಲ್ಲ ಹೀಗೆ ದ್ಯೂತದೋಪಾದಿಯು ಗ್ರಸನಶೀಲವಾದ ಕಾಲವು ಹಗಲು ರಾತ್ರಿಗಳೆಂಬುವಂಥಾ ಎರಡು ಪಾಚಿಕಗಳನ್ನು ಲೋಕವೆಂಬುವ ಯಂತ್ರದಲ್ಲಿ ಅಲ್ಲಾಡಿಸುವವಾಗಿ ಕ್ರೀಡಿಸುತ್ತಲಿದೆ. ಉಪಮಾಲಂಕಾರೋತ್ಥಾಪಿತ ಏಕದೇಶರೂಪಕಾಲಂಕಾರಃ || ಮಂದಾಕ್ರಾಂತಾ ವೃತ್ತಂ || ||೪೨||

ಶ್ಲೋ॥ ಆದಿತ್ಯಸ್ಯಗತಾಗತೈರಹರಹಸ್ಸಂಕ್ಷೀಯತೇಜೀವಿತಂ
ವ್ಯಾಪಾರೈರ್ಬಹುಕಾರ್ಯಭಾರಗುರುಭಿಃಕಾಲೋಪಿನ
ಜ್ಞಾಯತೇ ॥ ದೃಷ್ಟ್ವಾಜನ್ಮಜರಾವಿಪತ್ತಿಮರಣಂ
ತ್ರಾಸಶ್ಚನೋತ್ಪದ್ಯತೇಪೀತ್ವಾಮೋಹಮಯೀಂಪ್ರ
ಮಾದಮದಿರಾಮುನ್ಮತ್ತಭೂತಂಜಗತ್ ॥೪೩॥

ಟೀಕು॥ ಆದಿತ್ಯಸ್ಯ-ಸೂರ್ಯನ ಗತಾಗತೈಃ-ಉದಯಾಸ್ತಗಳಿಂದ, ಅಹರಹಃ- ಪ್ರತಿದಿನದಲ್ಲೂ, ಜೀವಿತಂ- ಆಯುಸ್ಸು, ಕ್ಷಯತೇ- ನಾಶವಾಗುತ್ತೆ. ಕಾರ್ಯಭಾರಗುರುಭಿಃ ಕಾರ್ಯಭಾರ-ಕಾರ್ಯಗೌರವಗಳಿಂದ, ಗುರುಭಿಃ- ಅಧಿಕಗಳಾದ, ವ್ಯಾಪಾರೈಃ ವ್ಯಾಪಾರಗಳಿಂದ, ಕಾಲೋಪಿ- ಕಾಲವೂ ಕೂಡ, ನಜ್ಞಾಯತೇ-ತಿಳಿಯಲ್ಪಡುವದಿಲ್ಲ, ಜನ್ಮಜರಾವಿಪತ್ತಿಮರಣಂ- ಜನ್ಮ- ಹುಟ್ಟುವುದನ್ನು, ಜರಾ-ವಾರ್ಧಕ್ಯವನ್ನು, ವಿಪತ್ತಿ-ವಿಪತ್ತುಗಳನ್ನು, ಮರಣಂ-ನಾಶವನ್ನು, ದೃಷ್ಟ್ವಾ- ನೋಡಿದಾಗ್ಯು, ತ್ರಾಸಶ್ಚ- ಭಯವು ಕೂಡ, ನೋತ್ಪದ್ಯತೇ-ಹುಟ್ಟುಪದಿಲ್ಲ, ಜಗತ್- ಲೋಕವು, ಮೋಹಮಯೀಂ- ಮೋಹವಿಕಾರವಾದ, ಪ್ರಮಾದಮದಿರಾಂ-ಪ್ರಮಾದ- ಚಿತ್ತವೈಕಲ್ಯವನ್ನುಂಟುಮಾಡುವ, ಮದಿರಾಂ- ಮದ್ಯವನ್ನು, ಪೀತ್ವಾ- ಪಾನಮಾಡಿ, ಉನ್ಮತ್ತಭೂತಂ- ಉನ್ಮತ್ತಾವಸ್ಥೆಯನ್ನು ಹೊಂದಿದಂಥಾದ್ದು, ಆಸೀತ್-ಆಯಿತು ॥೪೩॥

ತಾತ್ಪರ್ಯ—ಈ ಶ್ಲೋಕದಲ್ಲಿ ಕಾಲಮಹಿಮೆಯನ್ನು ಹೇಳುತ್ತಾನೆ. ಅದು ಹೇಗೆಂದರೆ ಸೂರ್ಯೋದಯ ಸೂರ್ಯಾಸ್ತಗಳಿಂದ ಆಯುಸ್ಸು ದಿನೇ ದಿನೇ ಕ್ಷೀಣವಾಗುತ್ತದೆ. ಮನುಷ್ಯನು ಮಾಡುವ ಕೆಲಸಗಳ ತ್ವರೆಯಿಂದ ಕಾಲವು ಕಳೆದುಹೋಗುತ್ತೆ ಅದು ಜನಗಳಿಗೆ ತಿಳಿಯುವದಿಲ್ಲ ಜನ್ಮಜರಾಮರಣಗಳನ್ನು ನೋಡುತ್ತಲಿದ್ದಾಗ್ಯೂ ತಮ್ಮಗಳಿಗೆ ಹೀಗೇ ಆಗುವದೆಂದು ಭಯಪಟ್ಟುವದಿಲ್ಲ ಲೋಕವು ಅಂದರೆ ಜನವು ಅಜ್ಞಾನವೆಂಬುವ ಮದ್ಯಪಾನಮಾಡಿ ಉನ್ಮತ್ತರೋಪಾದಿಯಲ್ಲಿ ಆಗಿದ್ದಾರೆ ಕಾಲವು ಸಮಸ್ತ ಕಾರ್ಯಗಳನ್ನೂ ಮಾಡುತ್ತದೆ ಕಾಲದಮಹಿಮೆ ಇಷ್ಟೆಂದು ಹೇಳಲಶಕ್ಯವಾದದ್ದೆಂದು ತಾತ್ಪರ್ಯವು. ಶಾರ್ದೂಲವಿಕ್ರೀಡಿತವೃತ್ತಂ ॥೪೩॥

ಶ್ಲೋ॥ ರಾತ್ರಿಸ್ಸೈವಪುನಸ್ಸವಿವಾದಿವಸೋಮತ್ವಾಮುಧಾ
ಜಂತವೋಧಾವಂತ್ಯುದ್ಯಮಿನಸ್ತಥೈವನಿಭೃತಪ್ರಾ

ರಬ್ಧತತ್ತತ್ಕ್ರಿಯಾಃ ॥ ವ್ಯಾಪಾರೈಃಪುನರುಕ್ತಭೂತ
ವಿಷಯೈರಿತ್ಥಂವಿಧೇನಾಮುನಾಸಂಸಾರೇಣ ಕದರ್ಥಿ
ತಾವಯಮಹೋಮೋಹಾನ್ನಲಜ್ಜಾಮಹೇ ॥೪೪॥

ಟೀಕು॥ ರಾತ್ರಿಃ- ರಾತ್ರಿಯು, ಸೈವ-ಆ ಕಳೆದ ರಾತ್ರಿಯು, ದಿವಸಃ ಪುನಃ-ದಿವಸವಾದರೇನೋ, ಸಏವ-ಆಕಳೆದ ದಿವಸವೇನೆ, ಇತಿ-ಹೀಗೆಂದು, ಮತ್ವಾಪಿ- ತಿಳಿದರೂ ಕೂಡ. ಜಂತವಃ- ಪ್ರಾಣಿಗಳು, ಮುಧಾ- ವ್ಯರ್ಥವಾಗಿ, ಧಾವಂತಿ-ಶ್ರಮಪಡುತ್ತಾರೆ, ಉದ್ಯಮಿನಃ-ಉದ್ಯೋಗವುಳ್ಳವರು, ತಥೈವ-ಹಾಗೆಯೇ, ನಿಭೃತಪ್ರಾರಬ್ಧತತ್ತತ್ಕ್ರಿಯಾಃ- ನಿಭೃತ- ಗೋಪ್ಯಮಾಡಲ್ಪಟ್ಟ, ಪ್ರಾರಬ್ಧ- ಆರಂಭಿಸಲ್ಪಟ್ಟ, ತತ್ತತ್ಕ್ರಿಯಾಸ್ಸಂತಃ - ಆಯಾವ್ಯಾಪಾರಗಳುಳ್ಳವಾಗಿ, ಪುನರುಕ್ತಭೂತವಿಷಯೈಃ- ಪುನರುಕ್ತಭೂತ- ಪುನಃಪುನಃ-ಅನುಭವಿಸಲ್ಪಟ್ಟ, ವಿಷಯೈಃ-ಸ್ರಕ್ಚಂದನಾದಿ ವಿಷಯಗಳುಳ್ಳ, ವ್ಯಾಪಾರೈಃ-ವ್ಯಾಪಾರಗಳಿಂದ, ಮುಧಾ-ವ್ಯರ್ಥವಾಗಿ, ಧಾವಂತಿ-ಪ್ರಯಾಸಪಡುತ್ತಾರೆ, ಕಿಂತು-ಮತ್ತೇನೆಂದರೋ, ಇತ್ಥಂವಿಧೇನ-ಈಪ್ರಕಾರವಾದ, ಅಮುನಾ-ಈ ಸಂಸಾರದಿಂದ, ಕದರ್ಥಿತಾಃ-ಕೃಪಣರಾದ, ವಯಂ- ನಾವುಗಳು, ಮೋಹಾತ್- ಅಜ್ಞಾನದದೆಸೆಯಿಂದ, ನಲಜ್ಜಾಮಹೇ- ನಾಚಿಕೆಪಡುವುದಿಲ್ಲ, ಅಹೋ-ಆಶ್ಚರ್ಯವು ॥೪೪॥

ತಾತ್ಪರ್ಯ—ಮೊದಲುಹೇಳಿದ ಅರ್ಥವನ್ನು ರೀತ್ಯಂತರವಾಗಿ ಹೇಳುತ್ತಾನೆ. ಅದು ಹೇಗೆಂದರೆ:—ಕಳೆದುಹೋದ ರಾತ್ರಿಯು ತಿರುಗೂಬರುವದು ಕಳೆದದಿವಸವೇ ಪುನಃಬರುವದು. ಅಂದರೆ ಕಳೆದ ರಾತ್ರಿಹೇಗೋ ಕಳೆದ ದಿವಸಹೇಗೋ ಈಗಬಂದ ಹೊಸದಿವಸವೂ ಹಾಗೆ ಇರುವದೆಂದು ಅರಿಯದೆ ಉದ್ಯೋಗಾಸಕ್ತರಾದ ಪುರುಷರು ಅಥವಾ ಜೀವಿಗಳು ತಾವು ಮಾಡುತಿದ್ದ ಕಾರ್ಯಗಳನ್ನು ಮಾಡುತ್ತಾ ಹಿಂದೆಅನುಭವಿಸಿದ ವಿಷಯಾದಿಭೋಗಗಳನ್ನೇ ಪುನಃ ಅನುಭವಿಸುತ್ತಾ ವ್ಯರ್ಥವಾಗಿ ನಿಷ್ಪ್ರಯೋಜನವಾದ ಕಾಲದಲ್ಲಿ ಧಾವಂತಪಡುತ್ತಾರೆ. ಈರೀತಿಯಾಗಿರುವ ಈ ಸಂಸಾರದಲ್ಲಿ ಮೋಹಿತರಾಗಿರುವ ನಮ್ಮಗಳಿಗೆ ನಾಚಿಕೆಯಿಲ್ಲ ಇದುಆಶ್ಚರ್ಯ. ಶಾರ್ದೂಲವಿಕ್ರೀಡಿತವೃತ್ತಂ ಸ್ವಭಾವೋಕ್ತಿರಲಂಕಾರಶ್ಚ. ॥೪೪॥

ಶ್ಲೋ॥ ನಧ್ಯಾತಂಪದಮೀಶ್ವರಸ್ಯವಿಧಿವತ್ಸಂಸಾರವಿಚ್ಛಿತ್ತ
ಯೇಸ್ವರ್ಗದ್ವಾರಕವಾಟಪಾಟನಪಟುರ್ಧರ್ಮೋಪಿ
ನೋಪಾರ್ಜಿತಃ ॥ ನಾರೀಪೀನಪಯೋಧರೋರುಯು
ಗಳಂಸ್ವಪ್ನೇಪಿನಾಲಿಂಗಿತಂ ಮಾತುಃಕೇವಲಮೇವ
ಯೌವ್ವನವನಚ್ಛೇದೇಕುಠಾರಾವಯಂ ॥ ೭೫ ॥

ಟೀಕು॥ ಸಂಸಾರವಿಚ್ಛಿತ್ತಯೇ ಸಂಸಾರ-ಜನನಮರಣಗಳ, ವಿಚ್ಛಿತ್ತ ಯೇ-ನಾಶಕ್ಕೋಸ್ಕರ. ಈಶ್ವರಸ್ಯ-ಪರಮೇಶ್ವರನ, ಪದಂ- ಚರಣವು. ವಿಧಿ ವತ್- ಯಥಾಶಾಸ್ತ್ರಯುವಾಗಿ, ನಧ್ಯಾತಂ- ಧ್ಯಾನ ಮಾಡಲ್ಪಡಲಿಲ್ಲ, ಸ್ವರ್ಗ ದ್ವಾರಕವಾಟ ಪಾಟನಪಟುಃ- ಸ್ವರ್ಗ- ಸುರಲೋಕದ, ದ್ವಾರ- ಬಾಗಿಲಿನ- ಕವಾಟ ಕದವನ್ನು, ಪಾಟನ- ಭೇದಿಸಿಕೊಂಡು ಹೋಗುವದರಲ್ಲಿ, ಪಟುಃ- ಸಮರ್ಥವಾದ, ಧರ್ಮೋಪಿ- ಧರ್ಮವೂಕೂಡ, ನೋಪಾರ್ಜಿತಃ- ಸಂಪಾದಿ ಸಲ್ಪಡಲಿಲ್ಲ, ನಾರೀಪೀನಪಯೋಧರೋರುಯುಗಳಂ-ನಾರೀ-ಸ್ತ್ರೀಯ, ಪೀ ನ- ಬಲಿತ, ಪಯೋಧರ- ಸ್ತನಗಳ, ಯುಗಳಂ- ಯುಗ್ಮವು, ಊರುಯುಗ ಳಂಚ- ತೊಡೆಗಳ ಯುಗ್ಮವೂಕೂಡ, ಸ್ವಪ್ನೇಪಿ- ಸ್ವಪ್ನದಲ್ಲಿಯೂಕೂಡ, ನಾಲಿಂಗಿತಂ-ಆಲಿಂಗನ ಮಾಡಲ್ಪಡಲಿಲ್ಲ, ಮಾತುಃಕೇವಲಂ-ತಾಯಿಗೆ ಮಾತ್ರ ವೆ, ವಯಂ ನಾವುಗಳು, ಯೌವ್ವನವನಚ್ಛೇದೇ- ಯೌವನ- ತಾರುಣ್ಯವೆಂ ಬುವ, ವನ-ಅಡವಿಯ, ಛೇದೇ- ಕತ್ತರಿಸೋಣದರಲ್ಲಿ, ಕುಠಾರಾಃ- ಕೊಡಲಿ ಗಳು, ಭವಾಮಃ-ಆಗಿ ಇದ್ದೇವೆ ॥೭೫॥

ತಾತ್ಪರ್ಯ—ಭಗವಂತನ ಆರಾಧನೆ ಮಾಡಬೇಕೆಂಬುವದನ್ನು ಹೇಳು ತ್ತಾನೆ ಅದು ಹೇಗಂದರೆ ಈ ಸಂಸಾರ ನಾಶವಾಗಿ ಕೈವಲ್ಯವನ್ನು ಹೊಂ ದುವದಕ್ಕೆ ಯಥಾಶಾಸ್ತ್ರೀಯವಾಗಿ ಈಶ್ವರ ಪಾದಾರವಿಂದವನ್ನು ಧ್ಯಾನ ಮಾಡಲಿಲ್ಲ ಮತ್ತು ಸ್ವರ್ಗಪಟ್ಟಣದ ಬಾಗಿಲಕದವನ್ನು ಒಡೆದುಕೊಂಡು ಒಳಕ್ಕೆ ಹೋಗುವಷ್ಟು ಧರ್ಮವನ್ನು ಸಂಪಾದಿಸಲಿಲ್ಲ ಮತ್ತು ಪೀನೋ ನ್ನತವಾದ ವಾಮಾಕ್ಷಿಯರ ಕುಚದ್ವಂದ್ವವನ್ನು ಊರುಯುಗ್ಮವನ್ನು ಸ್ವ ಪ್ನದಲ್ಲಿಯೂ ಆಲಿಂಗಿಸಲಿಲ್ಲ ನಾವುಗಳು ಹುಟ್ಟಿದ್ದು ನೋಡಿದರೆ ತಾಯಿಗೆ ಇದ್ದ ಯೌವನವನ್ನು ಹೋಗಲಾಡಿಸುವದಕ್ಕೆ ಹುಟ್ಟಿದಹಾಗಾಯಿತು

ಅಂದರೆ ಐಹಿಕಭೋಗ ಅಥವಾ ಆಮುಷ್ಮಿಕಭೋಗ ಇವೆರಡೂ ಇಲ್ಲದ್ದ
ರಿಂದ ತಾಯಿಗೆ ಇನ್ನ ಯೌವನವನ್ನು ಹೋಗಲಾಡಿಸುವದಕ್ಕೆ ಹುಟ್ಟಿದ
ಹಾಗೆ ಆಯಿತು ಎಂದು ತಾತ್ಪರ್ಯ ||೪೫||

ಶ್ಲೋ|| ನಾಭ್ಯಸ್ತಾ ಪ್ರತಿವಾದಿಬೃಂದದಮನೀವಿದ್ಯಾವಿನೀತೋ
ಚಿತಾಖಡ್ಗಾಗ್ರೈಃಕರಿಕುಂಭಪೀಠದಳನೈರ್ನಾಕಂನ
ನೀತಂಯಶಃ || ಕಾಂತಾಕೋಮಲಪಲ್ಲವಾಧರರಸಃ
ಪೀತೋನಚಂದ್ರೋದಯೇತಾರುಣ್ಯಂಗತಮೇವನಿಷ್ಫ
ಲಮಹೋಶೂನ್ಯಾಲಯೇದೀಪವತ್ ||೪೬||

ಟೀಕಾ|| ಪ್ರತಿವಾದಿ ಬೃಂದದಮನೀ- ಪ್ರತಿವಾದಿ- ಬದಲಾಗಿ ವಾದಿಸುವರ, ಬೃಂದ- ಸಮೂಹಕ್ಕೆ, ದಮನೀ- ನಾಶಕವಾದ, ವಿನೀತಾ- ಶಿಕ್ಷಿತವಾದ, ಉಚಿತಾ- ಯೋಗ್ಯವಾದ, ವಿದ್ಯಾ ವಿದ್ಯೆವು. ನಾಭ್ಯಸ್ತಾ- ಅಭ್ಯಾಸಮಾಡಲ್ಪಡಲಿಲ್ಲ, ಕರಿಕುಂಭಪೀಠದಳನೈಃ- ಕರಿ- ಆನೆಗಳ, ಕುಂಭ- ಕುಂಭಸ್ಥಳದ, ಪೀಠ ಪ್ರದೇಶವನ್ನು (ಅಥವಾ ಪೀಠಸದೃಶ ಪ್ರದೇಶವನ್ನು) ದಳನೈಃ-ಸೀಳುತ್ತಿರುವ, ಖಡ್ಗಾಗ್ರೈಃ- ಖಡ್ಗ- ಕತ್ತಿಯ, ಅಗ್ರೈಃ- ಕೊನೆಗಳಿಂದ, (ಅಥವಾ ಮುಂಭಾಗಗಳಿಂದ) ಯಶಃ- ಕೀರ್ತಿಯು, ನಾಕಂ- ಸ್ವರ್ಗಪಟ್ಟಣವನ್ನು, ನನೀತಂ- ಹೊಂದಿಸಲ್ಪಡಲಿಲ್ಲ, ಚಂದ್ರೋದಯೇ ಚಂದ್ರೋದಯವಾದಸಮಯದಲ್ಲಿ, ಕಾಂತಾಕೋಮಲ ಪಲ್ಲವಾಧರರಸಃ- ಕಾಂತಾ- ಸ್ತ್ರೀಯ, ಕೋಮಲ- ಸುಂದರವಾದ, ಪಲ್ಲವ- ಪಲ್ಲವಸದೃಶವಾದ, ಅಧರರಸಃ- ಅಧರಾಮೃತವು, ನಪೀತಃ- ಪಾನಮಾಡಲ್ಪಡಲಿಲ್ಲ, ಶೂನ್ಯಾಲಯೇ- ಶೂನ್ಯ- ಜನಶೂನ್ಯವಾದ, ಆಲಯೇ- ಮನೆಯಲ್ಲಿ ಇರುವ, ದೀಪವತ್- ದೀಪದೋಪಾದಿಯಲ್ಲಿ ನಿಷ್ಫಲಂ ಯಥಾತಥಾ- ವ್ಯರ್ಥವಾಗೋಣ ಹೇಗೋಹಾಗೆ, ತಾರುಣ್ಯಂ- ಯೌವನವು, ಗತಮೇವ- ಕಳದೇಹೋಗುವಂಥಾದ್ದಾಯಿತು, ಅಹೋ- ಆಶ್ಚರ್ಯ ||೪೬||

ತಾತ್ಪರ್ಯ— ಈ ಶ್ಲೋಕದಲ್ಲೂ ಮೊದಲು ಹೇಳಿದ ಅರ್ಥವನ್ನೇ ರೀತ್ಯಂತರವಾಗಿ ಹೇಳುತ್ತಾನೆ. ಅದು ಹೇಗಂದರೆ:— ಪ್ರತಿವಾದಿಗಳನ್ನು ಗೆಲ್ಲುವಂಥಾ ವಿದ್ಯೆವನ್ನು ಅಭ್ಯಾಸಮಾಡಲಿಲ್ಲ. ಕತ್ತಿಯಿಂದ ಶತ್ರುಗಳನ್ನು ಜಯಿಸಿ ಸ್ವರ್ಗದವರಿಗೆ ಕೀರ್ತಿಯನ್ನು ಸಂಪಾದಿಸಲಿಲ್ಲ. ಸುಂದರಸ್ತ್ರೀಯ

ಕೆಂಪಾದ ಅಧರದಲ್ಲಿರುವ ಅಮೃತ ರಸಪಾನವಮಾಡಲಿಲ್ಲ ಯೌವನವೆಂಬುವ ದು ಜನವಿಲ್ಲದ ಮನೆಯಲ್ಲಿ ಉರಿವ ದೀಪದಹಾಗೆ ವ್ಯರ್ಥವಾಗಿ ಹೋಯಿತು ಆಶ್ಚರ್ಯವೆಂದು ತಾತ್ಪರ್ಯ. ಶಾರ್ದೂಲವಿಕ್ರೀಡಿತವೃತ್ತಂ ॥೪೬॥

ಶ್ಲೋ॥ ವಿದ್ಯಾನಾಧಿಗತಾಕಳಂಕರಹಿತಾವಿತ್ತಂಚನೋಪಾರ್ಜಿ
ತಂಶುಶ್ರೂಷಾಪಿಸಮಾಹಿತೇನಮನಸಾಪಿತ್ರೋರ್ನ
ಸಂಪಾದಿತಾ ॥ ಆಲೋಲಾಯತಲೋಚನಾಃಪ್ರಿಯತ
ಮಾಸ್ವಪ್ನೇಪಿನಾಲಿಂಗಿತಾಃ ಕಾಲೋಯಂಪರಪಿಂಡ
ಲೋಲುಪತಯಾಕಾಕೈರಿವಪ್ರೇರ್ಯತೇ ॥ ೪೭ ॥

ಟೀಕು॥ ಕಳಂಕರಹಿತಾ-ಪರಿಶುದ್ಧವಾದ. ವಿದ್ಯಾ- ತರ್ಕವೇದಾಂತಾದಿ ವಿದ್ಯವು, ನಾಧಿಗತಾ-ಆರ್ಜನೆ ಮಾಡಲ್ಪಡಲಿಲ್ಲ, ವಿತ್ತಂಚ ದ್ರವ್ಯವೂಕೂಡ, ನೋಪಾರ್ಜಿತಂ- ಸಂಪಾದಿಸಲ್ಪಡಲಿಲ್ಲ. ಸಮಾಹಿತೇನ- ಚಿತ್ತೈಕಾಗ್ರತೆಯುಳ್ಳ, ಮನಸಾ- ಮನಸ್ಸಿನಿಂದ, ಪಿತ್ರೋಃ- ಮಾತಾಪಿತೃಗಳ ಶುಶ್ರೂಷಾಪಿ- ಪರಿಚರ್ಯವೂ ಕೂಡ, ನಸಂಪಾದಿತಾ-ಸಂಪಾದಿಸಲ್ಪಡಲಿಲ್ಲ, ಆಲೋಲಾಯತಲೋಚನಾಃ-ಅಲೋಲ- ಚಂಚಲಗಳಾದ, ಆಯತ- ದೀರ್ಘವಾದ ಲೋಚನಾಃ- ಕಣ್ಣುಗಳುಳ್ಳ, ಪ್ರಿಯತಮಾಃ- ಪ್ರಾಣಪ್ರಿಯರಾದ ಸ್ತ್ರೀಯರುಗಳು, ನಾಲಿಂಗಿತಾಃ-ಆಲಿಂಗನೆ ಮಾಡಲ್ಪಡಲಿಲ್ಲ, ಅಯಂಕಾಲಃ- ಈ ಕಾಲವು, ಕಾಕೈರಿವ-ಕಾಗೆಗಳಿಂದಲೋಪಾದಿಯಲ್ಲಿ, ಪರಪಿಂಡಲೋಲುಪತಯಾ, ಪರಪಿಂಡ- ಪರಾನ್ನದಲ್ಲಿ, ಲೋಲುಪತಯಾ-ಆಸಕ್ತಿವುಳ್ಳೋಣದರಿಂದ, ಪ್ರೇರ್ಯತೇ- ಪ್ರೇರಿಸಲ್ಪಡುತ್ತದೆ, ಅಥವಾ ಬೋಧಿಸಲ್ಪಡುತ್ತದೆ, ॥೪೭॥

ತಾತ್ಪರ್ಯ— ಈಶ್ಲೋಕದಲ್ಲೂ ಕಾಲವಿಶೇಷವನ್ನೇ ಹೇಳುತ್ತಾನೆ. ಅದು ಹೇಗೆಂದರೆ-ನಿರ್ಮಲವಾದ ತರ್ಕವೇದಾಂತ ವಿದ್ಯವನ್ನು ಓದಲಿಲ್ಲ. ವಿಶೇಷವಾಗಿ ದ್ರವ್ಯಸಂಪಾದನೆ ಮಾಡಲಿಲ್ಲ. ಮತ್ತೂ ಒಳ್ಳೆಬುದ್ಧಿಯಿಂದ ಮಾತಾಪಿತೃಗಳ ಶುಶ್ರೂಷೆಯನ್ನು ಮಾಡಲಿಲ್ಲ ಕಾಗೆಗಳೋಪಾದಿಯಲ್ಲಿ ಪರಾನ್ನದಲ್ಲಿ ಕಾಲಕಳೆಯುವದಾಯಿತು ಆದ್ದರಿಂದ ಸದ್ವಿದ್ಯಾವ್ಯಾಸಂಗಮಾಡಿ ಮಾತಾಪಿತೃ ಶುಶ್ರೂಷೆಯನ್ನು ಮಾಡಬೇಕು. ಕಾಲವನ್ನು ವ್ಯರ್ಥವಾಗಿ ಕಳೆಯಬಾರದೆಂದು ತಾತ್ಪರ್ಯವು. ॥೪೭॥

ಶ್ಲೋ॥ ವಯಂಯೇಭ್ಯೋಜಾತಾಶ್ಚಿರಪರಿಚಿತಾಏವಖಲುತೇ
ಸಮಂಯೈಸ್ಸಂವೃದ್ಧಾಸ್ಸ್ಮೃತಿವಿಷಯತಾಂತೇಪಿ
ಗಮಿತಾಃ ॥ ಇದಾನೀಮೇತೇಸ್ಮಃಪ್ರತಿದಿವಸಮಾಸ
ನ್ನಪತನಾಗತಾಸ್ತುಲ್ಯಾವಸ್ಥಾಂಸಿಕತಿಲನದೀತೀರ
ತರುಭಿಃ ॥೪೮॥

ಟೀಕು॥ ವಯಂ- ನಾವುಗಳು, ಯೇಭ್ಯಃ- ಯಾವಮಾತಾಪಿತೃಗಳಿಂದ, ಜಾತಾಃ-ಹುಟ್ಟಿದೆವೊ, ತೇ- ಅವರುಗಳು, ಚಿರಪರಿಚಿತಾಃ- ಖಲು- ಬಹುಕಾಲ ದಲ್ಲಿ ಪರಿಚಯ ಮಾಡಲ್ಪಟ್ಟರಷ್ಟೆ, ಯೈಸ್ಸಮಂ- ಯಾರಗಳೊಡನೆ ಕೂಡ, ಸಂವೃದ್ಧಾಃ-ಸಂಕ್ಷಿಸಲ್ಪಟ್ಟೆವೊ, ಏತೇಪಿ- ಅವರುಗಳೂಕೂಡ, ಸ್ಮೃತಿವಿಷಯತಾಂ ಸ್ಮೃತಿ-ಸ್ಮರಣೆಗೆ, ವಿಷಯತಾಂ-ಗೋಚರತ್ವವನ್ನು, ಗಮಿತಾಃ- ಹೊಂದಿಸಲ್ಪಟ್ಟರು, ಇದಾನೀಂ ಈಗ, ಏತೇವಯಂ ಈ ನಾವುಗಳು, ಪ್ರತಿದಿವಸಂ ದಿನಂಪ್ರತಿಯಲ್ಲೂ, ಆಸನ್ನಪತನಾಃ-ಆಸನ್ನ-ಸಮಿಪಸ್ಥವಾದ, ಪತನಾಃ-ಮರಣವುಳ್ಳವರಾದ ಕಾರಣವೇ ಸಿಕತಿಲನದೀತೀರತರುಭಿಃ- ಸಿಕತಿಲ- ಸೈಕತಪ್ರಾಯವಾದ, ನದೀ- ಪ್ರವಾಹದ. ತೀರ- ದಡದಲ್ಲಿ ಹುಟ್ಟಿ ಇರುವ, ತರುಭಿಃ- ವೃಕ್ಷಗಳೊಡನೆ, ತುಲ್ಯಾವಸ್ಥಾಂ- ತುಲ್ಯ- ಸಮಾನವಾದ, ಅವಸ್ಥಾಂ-ರೀತಿಯನ್ನು, ಗತಾಸ್ಮಃ ಹೊಂದಿರುದ್ದೇವೆ ॥೪೮॥

ತಾತ್ಪರ್ಯ—ಈಶ್ಲೋಕದಲ್ಲಿ ಕಾಲಮಹಿಮೆಯನ್ನೇವರ್ಣಿಸುತ್ತಾನೆ ಅದು ಹೇಗಂದರೆ;—ನಾವುಗಳು ಯಾವ ಮಾತಾಪಿತೃಗಳಿಂದ ಹುಟ್ಟಿದೆವೋ ಯಾರುಗಳಿಂದ ವೃದ್ಧಿಯನ್ನು ಹೊಂದಿಸಲ್ಪಟ್ಟೆವೋ ಅಂಥಾವರುಗಳೆಲ್ಲರು ಮನಸ್ಸಿನಲ್ಲಿ ಸ್ಮರಣೆಮಾಡಿಕೊಳ್ಳುವದಕ್ಕೆ ಯೋಗ್ಯರಾಗಿ ಇದ್ದಾರೆಯೇ ಹೊರತು ಕಣ್ಣಿನಿಂದ ನೋಡುವದಕ್ಕೆ ಸಾಧ್ಯವಿಲ್ಲ ಅಂದರೆ ಹುಟ್ಟಿಸಿ ಮತ್ತು ಪೋಷಣೆಮಾಡಿದ ಮಾತಾಪಿತೃಗಳು ಕಾಲಾಧೀನವಾಗಿ ಗತಾಸುಗಳಾಗಿ ಸ್ವರ್ಗವನ್ನುಐದಿದರು. ಆದ್ದರಿಂದ ಆಗಾಗ್ಯೆ ಜ್ಞಾಪಕಕ್ಕೆ ಬರುತ್ತಲಿದ್ದಾರೆ ಈ ನಾವುಗಳುಕೂಡ ಈ ವಾರ್ಧಿಕ್ಯಾಧೀನತೆಯಿಂದ ಪ್ರತಿದಿನದಲ್ಲಿಯೂ ಮರಣೋನ್ಮುಖರಾಗಿ ಹೆಚ್ಚಾದ ಮರಳಿನ ದಡದ ನದೀತೀರದಲ್ಲಿನ ಮರಗಳೋಪಾದಿಯಲ್ಲಿ ಆಗಿದ್ದೇವೆ ಅಂದರೆ ಮರಳುದಡದಲ್ಲಿಇರುವ ಮರಗಳುಹೇಗೆ

ಪ್ರವಾಹಬಂದರೆ ಬುಡಸಹಿತ ಬಿದ್ದುಹೋಗುತ್ತವೆಯೋ ಅದರೋಪಾದಿ ಯಲ್ಲಿ ನಾವುಗಳು ಗತಾಯುಗಳು ಆಗುವರೀತಿಯಲ್ಲಿ ಇದ್ದೇವೆ ಇದನ್ನು ತಿಳಿದು ಸತ್ಕಾರ್ಯಗಳನ್ನು ಮಾಡಿರಿ ಕಾಲವು ಕಳೆದುಹೋಗುತ್ತದೆ ಎಂದು ತಾತ್ಪರ್ಯವು. ಉಪಮಾಲಂಕಾರಃ ||೪೮||

ಶ್ಲೋ|| ಆಯುರ್ವರ್ಷಶತಂನೃಣಾಂಪರಿಮಿತಂರಾತ್ರೌತದ
ರ್ಧಂಗತಂತಸ್ಯಾರ್ಧಸ್ಯಪರಸ್ಯಚಾರ್ಧಮಪರಂಬಾಲ
ತ್ವವೃದ್ಧತ್ವಯೋಃ || ಶೇಷಂವ್ಯಾಧಿವಿಯೋಗದುಃಖ
ಸಹಿತಂಸೇವಾದಿಭಿರ್ನೀಯತೇಜೀವೇವಾರಿತರಂಗಚಂ
ಚಲತರೇಸೌಖ್ಯಂಕುತಃಪ್ರಾಣಿನಾಂ ||೪೯||

ಟೀಕು|| ನೃಣಾಂ- ಮನುಷ್ಯರಿಗೆ, ಆಯುಃ- ಆಯುಸ್ಸು, ವರ್ಷಶತಂ- ವರ್ಷ-ಸಂವತ್ಸರಗಳ, ಶತಂ- ನೂರು, ಪರಿಮಿತಂ- ಪರಿಮಾಣವಾಗಿ, ಮಾಡಲ್ಪಟ್ಟಿತು, ರಾತ್ರೌ-ರಾತ್ರಿಕಾಲದಲ್ಲಿ, ತದರ್ಧಂ-ಅದರಲ್ಲಿ ಅರ್ಧ-ಆಯುಸ್ಸು. ಗತಂ ಹೋದಂಥಾದ್ದಾಯಿತು, ತಸ್ಯ-ಆ ಆಯುಸ್ಸಿನ ಪರಸ್ಯ ಎರಡನೆಭಾಗವಾದ, ಅರ್ಧಸ್ಯ ಮಿಕ್ಕ ಅರ್ಧ ಆಯುಸ್ಸಿಗೆ, ಬಾಲತ್ವವೃದ್ಧತ್ವಯೋಃ- ಬಾಲ್ಯವಾರ್ಧಿಕ್ಯಗಳಲ್ಲಿ, ಗತಂ-ನಷ್ಟವಾದದ್ದಾಯಿತು, ಶೇಷಂ ಮಿಕ್ಕ ಆಯುಸ್ಸು, ವ್ಯಾಧಿವಿಯೋಗದುಃಖಸಹಿತಂಸತ್-ವ್ಯಾಧಿ-ಮನೋವ್ಯಥೆ, ವಿಯೋಗ- ವಿರಹ ದುಃಖಪ್ರಳಾಪ ಇವುಗಳಿಂದ, ಸಹಿತಂಸತ್-ಕೂಡಿರುವಂಥಾದ್ದು, ಭವತಿ- ಆಗುತ್ತದೆ, ವಾರಿತರಂಗ ಚಂಚಲತರೇ- ವಾರಿತರಂಗ- ನೀರಿನ ತೆರೆಯೋಪಾದಿಯಲ್ಲಿ, ಚಂಚಲತರೇ- ಅತ್ಯಂತವಾಗಿ ಚಲಿಸುತ್ತಲಿರುವ, ಜೀವೇ- ಬದುಕಿಯಿರುವಕಾಲದಲ್ಲಿ, ಪ್ರಾಣಿನಾಂ- ಜೀವಜಂತುಗಳಿಗೆ, (ಅಥವಾ ಮನುಷ್ಯನಿಗೆ) ಸೌಖ್ಯಂ-ಸುಖವು, ಕುತಃ-ಎಲ್ಲಿಯದು ||೪೯||

ತಾತ್ಪರ್ಯ— ಮನುಷ್ಯನಿಗೆ ಸುಖವಿಲ್ಲವೆಂಬುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗೆಂದರೆ; ಮನುಷ್ಯನಿಗೆ ಆಯುಸ್ಸು ನೂರು ವರುಷವೆಂದು ಗೊತ್ತಾಯಿತು ಇದರಲ್ಲಿ ರಾತ್ರಿಕಾಲದಲ್ಲಿ ಐವತ್ತುವರುಷಗಳು ಕಳೆದುಹೋದವು ಅನಂತರ ಅರ್ಧದಲ್ಲಿ ಕೆಲವುಕಾಲ ಬಾಲ್ಯವಾರ್ಧಿಕ್ಯಗಳಿಂದಕಳೆದುಹೋಗುತ್ತದೆ ಅನಂತರ ಕೆಲವುಕಾಲಗಳಲ್ಲಿಮನೋವ್ಯಥೆ ರೋ

ಗವಿಯೋಗ ಇವುಗಳಲ್ಲಿ ಯಾಕ್ಕಕಾಲ ಕಳೆದುಹೋಯಿತು ಹೀಗಿರುವದರಲ್ಲಿ ಜೀವವೆಂಬುವದು ನೀರಿನಮೇಲೆ ಬರುವ ತೆರೆಯೋಪಾದಿಯಲ್ಲಿ ಅತಿಚಂಚಲ ವಾದದ್ದು. ಹೀಗಿರುವಲ್ಲಿ ಮನುಷ್ಯನಿಗೆ ಸೌಖ್ಯವೆಂಬುವದು ಎಲ್ಲಿಯದು ಸು ಖವೇ ಇಲ್ಲವೆಂದು ತಾತ್ಪರ್ಯವು. ||೪೯||

ಶ್ಲೋ|| ಕ್ಷಣಂಬಾಲೋಭೂತ್ವಾ ಕ್ಷಣಮಪಿ ಯುವಾಕಾಮರಸಿ
ಕಃಕ್ಷಣಂವಿತ್ತೈರ್ಹೀನಃಕ್ಷಣಮಪಿಚಸಂಪೂರ್ಣವಿಭ
ವಃ । ಜರಾಜೀರ್ಣೈರಂಗೈರ್ನಟಇವವಳೀಮಂಡಿತ
ತನುರ್ನರಸ್ಸಂಸಾರಾಂತೇ ವಿಶತಿಯಮಧಾನೀಯವ
ನಿಕಾಂ || ೫೦ ||

ಟೀಕು॥ ಕ್ಷಣಂ-ಕ್ಷಣಕಾಲದಲ್ಲಿ, ಬಾಲಃ- ಹುಡುಗನು, ಭೂತ್ವಾ- ಆಗಿ, ಕ್ಷಣಮಪಿ- ಕ್ಷಣಕಾಲದಲ್ಲಿ, ಕಾಮರಸಿಕಃ- ಕಾಮ ತಂತ್ರದಲ್ಲಿ ರಸಜ್ಞನಾದ, ಯುವಾ-ಯೌವ್ವನಸ್ಥನುಭೂತ್ವಾ-ಆಗಿ, ಕ್ಷಣಂ-ಕ್ಷಣಕಾಲದಲ್ಲಿ, ವಿತ್ತೈಃ- ದ್ರವ್ಯದಿಂದ, ಹೀನಃ-ರಹಿತನಾಗಿ, ಕ್ಷಣಮಪಿಚ-ಕ್ಷಣಕಾಲದಲ್ಲಿ, ಸಂಪೂರ್ಣ ವಿಭವಃ-ಸಂಪೂರ್ಣ-ಹೆಚ್ಚಾದ, ವಿಭವಃ-ಐಶ್ವರ್ಯವುಳ್ಳವನು, ಭೂತ್ವಾ- ಆಗಿ, ಜರಾಜೀರ್ಣೈಃ-ಜರಾ-ಮುದುಕತನದಿಂದ, ಜೀರ್ಣೈಃ-ಜೀರ್ಣಗಳಾದ, ಅಂಗೈಃ- ಅವಯವಗಳಿಂದ, ನಟಇವ- ಶೈಲೂಷನೋಪಾದಿಯಲ್ಲಿ, ವಳೀಮಂಡಿತತ ನುಃ- ವಳೀ- ಸುಕ್ಕುಗಳಿಂದ, ಮಂಡಿತ- ಪ್ರಕಾಶಿಸಲ್ಪಟ್ಟ, (ಅಥವಾ ಕೂಡಿ ಕೊಂಡಿರುವ ) ತನುಃ- ಶರೀರವುಳ್ಳ, ನರಃ- ಮನುಷ್ಯನು, ಸಂಸಾರಾಂತೇ, ಸಂಸಾರ-ಸಂಸಾರದ, ಅಂತೇ-ಕಡೆಯಲ್ಲಿ, ಯಮಧಾನೀಯವನಿಕಾಂ-ಯಮ ಧಾನೀ-ಯಮಪಟ್ಟಣವೆಂಬುವ, ಯವನಿಕಾಂ-ತೆರೆಯನ್ನು, ವಿಶತಿ-ಪ್ರವೇಶ ಮಾಡುತ್ತಾನೆ ॥೫೦॥

ತಾತ್ಪರ್ಯ—ಈ ಶ್ಲೋಕದಲ್ಲಿ ಸಂಸಾರವನ್ನು ನಾಟಕದಂತೆ ಹೇಳು ತ್ತಾನೆ. ಅದು ಹೇಗೆಂದರೆ;-ವೇಷಧಾರಿಯಾದ ಒಬ್ಬ ಮನುಷ್ಯನು ಒಂ ದೊಂದು ಕ್ಷಣಕಾಲಕ್ಕೆ ಒಂದೊಂದುತರಹವಾದ ವೇಷವನ್ನು ಹಾಕಿಕೊಂ ಡು ಬಂದುಬಂದು ಆವೇಷಕ್ಕೆ ತಕ್ಕನಟನೆಯನ್ನುಮಾಡಿ ಆಟಮುಗಿದ ಕಡೆ ಯಲ್ಲಿ ಹೇಗೆ ನಾಟಕದ ತೆರೆಯೊಳಗೆ ಹೋಗಿ ಸೇರಿಕೊಳ್ಳುತ್ತಾನೋ, ಹಾಗೆ

ಯೇ ಒಬ್ಬ ಮನುಷ್ಯನು ಕ್ಷಣಕಾಲವೆಂದರೆ ಕೊಂಚಕಾಲ ಹುಡುಗನಾಗಿದ್ದು ಹಾಗೆಯೇ ಯೌವನಸ್ಥನಾಗಿ ಕಾಮತಂತ್ರ ರಸಾನುಭವವನ್ನು ಮಾಡಿ ಕೆಲವುಕಾಲದಮೇಲೆ ಶರೀರವೆಲ್ಲವು ಸುಕ್ಕಿ ಸಂಸಾರವ ಕೊನೆಯಲ್ಲಿ ಆಟಗಾರರಿಗೆ ತೆರೆಯೋಪಾದಿಯಲ್ಲಿರುವ ಯಮಪಟ್ಟಣಕ್ಕೆ ಹೋಗಿ ಮರೆಯಾಗುತ್ತಾನೆ ಆದ್ದರಿಂದ ಬಾಲ್ಯಯೌವ್ವನ ವಾರ್ಧಿಕ್ಯಗಳು ಯಾವದೂ ಶಾಶ್ವತವಾದದ್ದಲ್ಲ ಇದು ಒಂದು ನಾಟಕದೋಪಾದಿಯಲ್ಲಿ ಇದೆ ಈ ಸಂಸಾರವನ್ನು ಶಾಶ್ವತವೆಂದು ನಂಬಬೇಡಿರೆಂದು ತಾತ್ಪರ್ಯವು. ಸ್ವಭಾವೋಕ್ತಿರಲಂಕಾರಃ

---

## ಯತಿನೃಪತಿಸಂವಾದ ವರ್ಣನಾರಂಭವು.

ಶ್ಲೋ॥ ತ್ವಂರಾಜಾವಯಮಪ್ಯುಪಾಸಿತ ಗುರುಪ್ರಜ್ಞಾಭಿಮಾನೋನ್ನತಾಃ । ಖ್ಯಾತಸ್ತ್ವಂವಿಭವೈರ್ಯಶಾಂಸಿಕವಯೋದಿಕ್ಷುಪ್ರತನ್ವಂತಿನಃ ॥ ಇತ್ಥಂಮಾನಧನಾತಿದೂರಮುಭಯೋರಪ್ಯಾವಯೋರಂತರಂಯದ್ಯಸ್ಮಾಸುಪರಾಙ್ಮುಖೋಸಿವಯಮಪ್ಯೇಕಾಂತತೋನಿಸ್ಪೃಹಾಃ ॥

ಟೀಕು॥ ತ್ವಂ ನೀನು, ರಾಜಾ- ಪ್ರಭುವು, ವಯಮಪಿ- ನಾವುಗಳು ಕೂಡ, ಉಪಾಸಿತಗುರು ಪ್ರಜ್ಞಾಭಿಮಾನೋನ್ನತಾಃ, ಉಪಾಸಿತ ಪರಿಚರ್ಯಮಾಡಲ್ಪಟ್ಟ, ಗುರು-ಗುರುಗಳಿಂದ ಉಂಟಾದ, ಪ್ರಜ್ಞಾ-ಜ್ಞಾನ ಸಂಬಂಧವಾದ, ಮಾನ-ಗರ್ವದಿಂದ, ಉನ್ನತಾಃ- ಅಧಿಕರಾದವರು, ತ್ವಂ- ನೀನು ವಿಭವೈಃ- ಐಶ್ವರ್ಯಗಳಿಂದ, ಖ್ಯಾತಃ- ಪ್ರಖ್ಯಾತನು, ಕವಯಃ- ಕವೀಶ್ವರರು, ನಃ ನಮ್ಮಗಳ, ಯಶಾಂಸಿ-ಕೀರ್ತಿಗಳನ್ನು ದಿಕ್ಷು-ದಿಕ್ಕುಗಳಲ್ಲಿ, ಪ್ರತನ್ವಂತಿ- ಪ್ರಚುರಪಡಿಸುವರಾಗುತ್ತಾರೆ, ಇತ್ಥಂ ಈಪ್ರಕಾರವಾಗಿ, ಉಭಯೋಃ- ಇಬ್ಬರಾದ, ಆವಯೋಃ-ನಮ್ಮಗಳಿಗೆ, ಅಂತರಂ- ಅವಕಾಶವು, (ಅಥವಾ ತರತಮಭಾವವು) ಮಾನಧನಾತಿದೂರಂ-ಮಾನ- ಅಭಿಮಾನಕ್ಕೂ (ಅಥವಾ ಪೂಜ್ಯತೆ) ಧನ- ಹಣಕ್ಕೆಯೂ, ಅತಿದೂರಂ- ಹೆಚ್ಚಾದದ್ದು, ಅಸ್ಮಾಸು- ನಮ್ಮಲ್ಲಿ, ಪರಾಙ್ಮುಖೋಸಿಯದಿ- ಉದಾಸೀನಮಾಡಿದವನಾದರೆ, ವಯಮಪಿ- ನಾವೂಕೂಡ, ಏಕಾಂತತಃ- ಅಂತರಂಗದಲ್ಲಿ, ನಿಸ್ಪೃಹಾಃ- ಆಶಾರಹಿತರಾಗಿದ್ದೇವೆ ॥೫೧॥

ತಾತ್ಪರ್ಯ—ಈ ಶ್ಲೋಕದಲ್ಲಿ ಯತಿಗಳು ವೈರಾಗ್ಯಶಾಲಿಗಳು ಅವರಿಗೆ ರಾಜನು ಗಣನೆಯಿಲ್ಲ ಆದ್ದರಿಂದ ವೈರಾಗ್ಯವನ್ನು ಆಶ್ರಯಿಸಬೇಕೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ:—ಒಬ್ಬ ರಾಜನನ್ನು ಕುರಿತು ಹೇಳುತ್ತಾರೆ. ನೀನು ರಾಜನು ನಿನ್ನನ್ನು ಜನಗಳು ಆಶ್ರಯಿಸುತ್ತಾರೆ. ನಾವು ಗುರುಗಳ ಸೇವೆಮಾಡಿ ಜ್ಞಾನಸಂಪಾದನೆ ಮಾಡಿಕೊಂಡು ಇರುವದರಿಂದ ಅಂಥಾ ಜ್ಞಾನೋಪದೇಶಕ್ಕೋಸ್ಕರ ನಮ್ಮನ್ನು ಅನೇಕ ಜನಗಳು ಆಶ್ರಯಿಸುತ್ತಾರೆ. ನೀನು ದ್ರವ್ಯವುಳ್ಳವನು ನಾವು ನಿನಗಿಂತಲೂ ಹೆಚ್ಚಾದ ಗೌರವವುಳ್ಳವರು ನಮ್ಮ ಇಬ್ಬರಿಗೆ ಇದೆ ತಾರತಮ್ಯವು. ನೀನು ನಮ್ಮಲ್ಲಿ ಉದಾಸೀನತೆಯನ್ನು ಮಾಡಿದರೆ ನಾವು ಅಂತರಂಗದಲ್ಲಿ ಎಲ್ಲವನ್ನು ಬಿಟ್ಟು ಇದ್ದೇವೆ. ಆದ್ದರಿಂದ ನಾವು ಯಾರನ್ನೂ ಗಣನೆಮಾಡುವರಲ್ಲವೆಂದು ತಾತ್ಪರ್ಯ. ಶಾರ್ದೂಲ ವಿಕ್ರೀಡಿತವೃತ್ತಂ. ||೫೧||

ಶ್ಲೋ|| ಅರ್ಥಾನಾಮೀಶಿಷೇತ್ವಂವಯಮಪಿಚಗಿರಾಮೀಶ್ಮಹೇ
ಯಾವದರ್ಥಂಶೂರಸ್ತ್ವಂವಾದಿದರ್ಪವ್ಯುಪಶಮನ
ವಿಧಾವಕ್ಷಯಂಪಾಟವಂನಃ | ಸೇವಂತೇತ್ವಾಂಧನಾ
ಢ್ಯಾಮತಿಮಲಹತಯೇಮಾಮಪಿಶ್ರೋತುಕಾಮಾಮ
ಯ್ಯಪ್ಯಾಸ್ಥಾನತೇಚೇತ್ತ್ವಯಿಮಮಸುತರಾಮೇವ
ರಾಜನ್ನನಾಸ್ಥಾ ||೫೨||

ಟೀಕು|| ತ್ವಂ-ನೀನು, ಅರ್ಥಾನಾಂ-ದ್ರವ್ಯಗಳಿಗೆ, ಈಶಿಷೇ-ಪ್ರಭುವಾಗಿದ್ದಿ, ವಯಮಪಿ-ನಾವುಗಳೂಕೂಡ, ಗಿರಾಂ ವಾಕ್ಕುಗಳ, ಯಾವದರ್ಥಂ-ಎಲ್ಲಾ ಅರ್ಥವನ್ನು, ಈಶ್ಮಹೇ- ಅಪೇಕ್ಷಿಸುತ್ತೇವೆ, ತ್ವಂ- ನೀನು, ಶೂರಃ-ಶತ್ರುಜಯವನ್ನು ಮಾಡುವನು, (ಅಥವಾ) ಶೂರನಾದವನು, ವಾದಿದರ್ಪವ್ಯುಪಶಮನವಿಧೌ-ವಾದಿ-ಪ್ರತಿಯಾಗಿ ವಾದಿಸುವನ, ದರ್ಪ- ಗರ್ವವನ್ನು, ವ್ಯುಪಶಮನ-ನಾಶಮಾಡತಕ್ಕ, ವಿಧೌ ವ್ಯಾಪಾರದಲ್ಲಿ, ನಃ- ನಮ್ಮಗಳಿಗೆ, ಅಕ್ಷಯಂ ಅಧಿಕವಾದ, ಪಾಟವಂ- ಪಟುತ್ವವು, (ಅಥವಾ) ಅಭ್ಯಾಸವು, ಅಸ್ತಿ-ಇದೆ, ಧನಾಢ್ಯಾಃ- ಧನ- ದ್ರವ್ಯಗಳಿಂದ, ಆಢ್ಯಾಃ- ಪುಷ್ಟಿಯುತ್ತಿರುವ ಜನಗಳು, ತ್ವಾಂ-ನಿನ್ನನ್ನು, ಸೇವಂತೇ-ಸೇವಿಸುತ್ತಾರೆ, ಮತಿಮಲಹತಯೇ- ಮತಿ ಬುದ್ಧಿಯ, ಮಲ- ಅಜ್ಞಾನವನ್ನು, ಹತಯೇ-ಹೋಗಲಾಡಿಸುವದಕ್ಕೋ

ಸ್ಕರ, ಮಾಮಪಿ-ನನ್ನನ್ನು ಕೂಡ, ಜನಾಃ-ಜನಗಳು, ಶ್ರೋತುಕಾಮಾಸ್ಸಂತಃ ಕೇಳಲಿಚ್ಛೆವುಳ್ಳವರಾಗಿ, ಸೇವಂತೇ-ಸೇವಿಸುತ್ತಾರೆ, ತೇ-ನಿನಗೆ, ಮಯ್ಯಪಿ-ನನ್ನಲ್ಲಿ, ಆಸ್ಥಾ-ವಿಶ್ವಾಸವು, ನಚೇತ್-ಇಲ್ಲದೆ ಹೋದರೆ, ಮಮ-ನನಗೆ, ತ್ವಯಿ-ನಿನ್ನಲ್ಲಿ, ಹೇ-ರಾಜನ್-ಎಲೈ ದೊರೆಯೇ, ಅನಾಸ್ಥಾ-ಅವಿಶ್ವಾಸವು, ನಿತರಾಮೇವ-ಅತ್ಯಂತವಾಗಿಯೇ, ಭವತಿ-ಆಗುತ್ತೆ ||೫೨||

ತಾತ್ಪರ್ಯ — ಮೊದಲು ಹೇಳಿದ ಅರ್ಥವನ್ನೇ ಈ ಶ್ಲೋಕದಲ್ಲಿ ರೀತ್ಯಂತರವಾಗಿ ಹೇಳುತ್ತಾನೆ. ಅದು ಹೇಗೆಂದರೆ;—ನೀನು ಅರ್ಥಗಳಿಗೆ ಅಥವಾ ದ್ರವ್ಯಗಳಿಗೆ ದೊರೆಯಾಗಿದ್ದಿ. ನಾವು ಪ್ರತಿಯೊಂದು ಶಬ್ದದ ಎಲ್ಲಾ ಅರ್ಥಗಳನ್ನು ತಿಳಿದವರಾಗಿ ಇದ್ದೇವೆ ಆದ್ದರಿಂದ ಉಭಯರು ಅರ್ಥಸಂಪತ್ತಿಯುಳ್ಳವರಾಗಿದ್ದೇವೆ. ನೀನು ರಣದಲ್ಲಿ ಶೂರನು. ನಾವುಗಳು ಶಾಸ್ತ್ರನುವಾದವನ್ನು ಮಾಡುವವಕ್ಕೆ ಬಂದವರ ಅಹಂಕಾರವನ್ನು ಹೋಗಲಾಡಿಸುವದರಲ್ಲಿ ಸಮರ್ಥರು. ನೀನು ಆಪ್ತರುಗಳಿಂದ ಸೇವಿಸಲ್ಪಡುತ್ತಿ ನಾವುಗಳು ಜ್ಞಾನೋಪದೇಶಕ್ಕೋಸ್ಕರ ಬಂದ ಜನಗಳಿಂದ ಸೇವಿಸಲ್ಪಡುತ್ತೇವೆ. ನಿನಗೆ ನನ್ನಲ್ಲಿ ಅನಾಸ್ಥೆ ಉಂಟಾದರೆ ನನಗೆ ನಿನ್ನಲ್ಲಿ ಅತ್ಯಂತವಾಗಿ ಉದಾಸೀನತೆ ಉಂಟಾಗುವುದು, ಅಂದರೆ ಎಲ್ಲಾ ಭಾಗದಲ್ಲಿ ನಿನಗಿಂತಲು ಹೆಚ್ಚಾದವನೆ ಹೊರತು ಕಮ್ಮಿಯಾದವನಲ್ಲ. ವಿದ್ಯಾವಂತರಿಗೆ ರಾಜನೂ ಸಹ ನಿರ್ಲಕ್ಷ್ಯವಾಗಿ ಇರುತ್ತಾನೆಂದು ತಾತ್ಪರ್ಯ. || ಶ್ಲೇಷಾಲಂಕಾರಃ || ಸ್ರಗ್ಧರಾವೃತ್ತಂ, ಉಪಮಾನಭೂತವಾದ ರಾಜನಿಗಿಂತಲೂ ಉಪಮೇಯಭೂತ ಯೋಗಿಯಲ್ಲಿ ಹೆಚ್ಚುಗುಣಗಳನ್ನು ಹೇಳಿದ್ದರಿಂದ ವ್ಯತಿರೇಕಾಲಂಕಾರವು ತೋರುತ್ತದೆ. ||೫೨||

ಶ್ಲೋ|| ವಯಮಿಹಪರಿತುಷ್ಟಾವಲ್ಕಲೈಸ್ತ್ವಂದುಕೂಲೈಸ್ಸ
ಮಇವಪರಿತೋಷೋನಿರ್ವಿಶೇಷೋವಿಶೇಷಃ । ಸತು
ಭವತುದರಿದ್ರೋಯಸ್ಯತೃಷ್ಣಾವಿಶಾಲಾಮನಸಿಚಪರಿ
ತುಷ್ಟೇಕೋರ್ಥವಾನ್ಕೋದರಿದ್ರಃ ||೫೩||

ಟೀಕಾ || ತ್ವಂ-ನೀನು, ಇಹ-ಈಗ, ದುಕೂಲೈಃ-ಪಟ್ಟವಸ್ತ್ರಗಳಿಂದ ಪರಿತುಷ್ಟಃ ಸಂತುಷ್ಟನು, ಭವಸಿ-ಆಗಿದ್ದಿ, ವಯಂ-ನಾವುಗಳು, ಇಹ-ಈಗ,

ವಲ್ಕಲೈಃ-ನಾರುವಸ್ತ್ರಗಳಿಂದ, ಪರಿತುಷ್ಟಾಃ ಸಂತುಷ್ಟರು, ಭವಾಮಃ- ಆಗಿ
ಇದ್ದೇವೆ, ಪರಿತೋಷಃ ಸಂತೋಷವು, ಸಮಏವ-ಸಮಾನವಾದದ್ದಾಗಿಯೇ
ಇರುವದು. ವಿಶೇಷಃ-ಅತಿಶಯವು, ನಿರ್ವಿಶೇಷಃ-ಅತಿಶಯರಹಿತವಾದದ್ದು
ಯಸ್ಯ- ಯಾವಮನುಷ್ಯನಿಗೆ, ತೃಷ್ಣಾ- ಆಸೆಯು, ವಿಶಾಲಾ- ವಿಸ್ತಾರವಾದ
ದ್ದೋ ಸತು ಆಮನುಷ್ಯನಾದರೋ, ದರಿದ್ರಃ- ಬಡವನು, ಭವತು-ಆಗಲಿ, ಮ
ನಸಿಜ-ಮನಸ್ಸು, ಪರಿತುಷ್ಟೇಸತಿ-ಸಂತುಷ್ಟವಾಗುತ್ತಿರಲಾಗಿ, ಅರ್ಥವಾನ್-
ಹಣವಂತನು, ಕಃ- ಯಾರು, ದರಿದ್ರಃ - ಬಡವನಾದವನು, ಕಃ - ಯಾರು.

ತಾತ್ಪರ್ಯ—ಪೂರ್ವದಲ್ಲಿ ಹೇಳಿದ ಅರ್ಥವನ್ನೇ ಭಂಗ್ಯಂತರದಿಂದ
ಹೇಳುತ್ತಾನೆ. ಅದು ಹೇಗಂದರೆ:—ರಾಜನನ್ನು ಕುರಿತು ಸಂಬೋಧನೆ
ಹೇಳುತ್ತಾನೆ. ಎಲೈ ರಾಜನೆ ನಾವು ನಾರುವಸ್ತ್ರದಿಂದ ಸಂತುಷ್ಟರಾಗಿ
ಇದ್ದೇವೆ ನೀನು ದುಕೂಲವೆಂದರೆ ಚೀನಾಂಬರಗಳಿಂದ ತೃಪ್ತನಾಗಿದ್ದೀನ
ಮಗೂ ನಿನಗೂ ವಿಶೇಷವೇನೂ ಇಲ್ಲ. ಯಾವ ಮನುಷ್ಯನಿಗೆ ಆಸೆಹೆಚ್ಚಾ
ಗಿ ಇರುತ್ತೇ ಆ ಮನುಷ್ಯನು ದರಿದ್ರನೆಆಗಲಿ ಅಂದರೆ ಎಷ್ಟೆಆದಗೂ ಸಾ
ಲದು ಎಂಬುವನು ಯಾವಾಗ್ಯೂ ದರಿದ್ರನೆ ಮನಸ್ಸಂತುಷ್ಟವಾದರೆ ಅಂದರೆ
ಆಶೆಯನ್ನು ಬಿಟ್ಟರೆ ಲೋಕದಲ್ಲಿ ಧನವಂತನಾರು ಮತ್ತು ದರಿದ್ರನಾರು ಎ
ಲ್ಲರೂ ಒಂದೇಸಮವಾಗಿ ಇರುವರು ಆದ್ದರಿಂದ ಆಸೆಯನ್ನು ಬಿಟ್ಟು ಸುಖಿ
ಗಳಾಗಿ ಇರಬೇಕೆಂದು ತಾತ್ಪರ್ಯ. || ಮಾಲಿನೀವೃತ್ತಂ || ||೫೩||

ಶ್ಲೋ|| ಫಲಮಲಮಶನಾಯಸ್ವಾದು ಪಾನಾಯತೋಯಂಕ್ಷಿ
ತಿರಪಿಶಯನಾರ್ಥಂವಾಸಸೇವಲ್ಕಲಂಚ । ನವಧನಮ
ಧುಪಾನಭ್ರಾಂತಸರ್ವೇಂದ್ರಿಯಾಣಾಮವಿನಯಮ
ನುಮಂತುಂನೋತ್ಸಹೇದುರ್ಜನಾನಾಂ || ೫೪ ||

ಟೀಕು|| ಫಲಂ- ಫಲವು, ಅಶನಾಯ - ಭೋಜನಕ್ಕೋಸ್ಕರ, ಅಲಂ -
ಪರ್ಯಾಪ್ತವಾದದ್ದು, ತೋಯಂ- ಉದಕವು, ಸ್ವಾದುಯಥಾತಥಾ-ರುಚಿಕರ
ವಾಗೋಣ ಹೇಗೋಹಾಗೆ ಪಾನಾಯ - ಕುಡಿಯುವದಕ್ಕೋಸ್ಕರ, ಅಲಂ -
ಪರ್ಯಾಪ್ತವಾದದ್ದು, ಕ್ಷಿತಿರಪಿ- ಭೂಮಿಯೂ ಕೂಡ, ಶಯನಾಯ - ಹಾಸಿ
ಗೋಸ್ಕರ, ಅಲಂ - ಪರ್ಯಾಪ್ತವಾದದ್ದು, ವಲ್ಕಲಂಚ - ನಾರುವಸ್ತ್ರಗಳೂ
ಕೂಡ, ವಾಸಸೇ - ಉತ್ತರೀಯಕಗಳಿಗೋಸ್ಕರ, ಅಲಂ - ಪರ್ಯಾಪ್ತವಾ

ದದ್ಭು. ನವಧನ ಮಧುಪಾನ ಭ್ರಾಂತಸರ್ವೇಂದ್ರಿಯಾಣಾಂ - ನವ- ನೂತನ ವಾದ, ಧನ-ದ್ರವ್ಯವೆಂಬುವ, ಮಧು-ಮದ್ಯದ. ಪಾನ ಕುಡಿಯೋಣದರಿಂದ ಭ್ರಾಂತ- ಭ್ರಮೆಯನ್ನು ಹೊಂದಿಸಲ್ಪಟ್ಟ. ಸರ್ವೇಂದ್ರಿಯಾಣಾಂ- ಸಮಸ್ತ ಇಂದ್ರಿಯಗಳುಳ್ಳ. ದುರ್ಜನಾಂ- ದುಷ್ಟಜನಗಳ, ಅವಿನಯಂ- ದುರ್ನೀತಿ ಯನ್ನು, ಅನುಮಂತುಂ- ಹೋಗಲಾಡಿಸುವುದಕ್ಕೋಸ್ಕರ, ನೋತ್ಸಹೇ - ಉತ್ಸಹಯುಕ್ತನಾಗುವುದಿಲ್ಲ. ||೫೪||

ತಾತ್ಪರ್ಯ—ಈ ಶ್ಲೋಕದಲ್ಲಿ ನಿಸ್ಪೃಹತ್ವವನ್ನೇ ಹೇಳುತ್ತಾನೆ. ಅದು ಹೇಗೆಂದರೆ;—ಗಿಡಗಳಲ್ಲಿ ಬಿಡುವ ಹಣ್ಣುಗಳು ಭೋಜನಮಾಡುವದ ಕ್ಕೆ ಆಯಿತು ನದೀತಟಾಕಗಳಲ್ಲಿ ಇರುವ ನೀರು ರುಚಿಯಾಗಿ ಪಾನಮಾಡು ವದಕ್ಕೆ ಆಯಿತು ಭೂಮಿಯು ಮಲಗಿಕೊಳ್ಳುವದಕ್ಕೆ ಹಾಸಿಗೆ ಆಯಿತು ನಾ ರುಮಡಿಗಳು ಉಡುವದಕ್ಕು ಹೊದಿಯುವದಕ್ಕೂ ವಸ್ತ್ರಗಳಾದವು ಹೊಸ ದಾಗಿ ಸಂಪಾದಿಸಿದ ಹಣವೆಂಬುವ ಮದ್ಯಪಾನಮಾಡಿ ಬುದ್ಧಿ ಕೆಟ್ಟುಹೋ ಗಿರುವ ಜನಗಳ ಕೆಟ್ಟನಡತೆಯನ್ನು ಹೋಗಲಾಡಿಸುವದಕ್ಕೆ ನಾನು ಪ್ರ ಯತ್ನ ಮಾಡುವದಿಲ್ಲ. ಅಂದರೆ ಜಲ ಫಲ ಭೂಷಣ ನಾರುವಸ್ತ್ರಗಳಿಂದ ತೃಪ್ತರಾಗದೆ ಹಣದ ಆಶೆಯಿಂದ ದುಷ್ಕಾರ್ಯವನ್ನು ಮಾಡುತ್ತಾ ಇರುವ ರ ಕೆಟ್ಟತನವನ್ನು ಹೋಗಲಾಡಿಸುವದಕ್ಕೆ ಆಗುವದಿಲ್ಲ. ಆದ್ದರಿಂದ ಯ ಥಾಲಾಭ ಸಂತುಷ್ಟನಾಗಿರಬೇಕೆಂದು ತಾತ್ಪರ್ಯ. || ಮಾಲಿನೀ ವೃತ್ತಂ ||

ಶ್ಲೋ|| ಅಶೀಮಹಿವಯಂಭಿಕ್ಷಾಮಾಶಾವಾಸೋ ವಸೀಮಹಿ ।

ಶಯೀಮಹಿಮಹೀಪೃಷ್ಠೇಕುರ್ವೀಮಹಿಕಿಮೀಶ್ವರೈಃ||

ಟೀಕು|| ವಯಂ- ನಾವುಗಳು, ಭಿಕ್ಷಾಂ- ಭಿಕ್ಷಮಾಡಿದ ಪದಾರ್ಥವನ್ನು (ಅಥವಾ ಅನ್ನವನ್ನು) ಅಶೀಮಹಿ - ಅಶನಮಾಡುತ್ತೇವೆ, ಆಶಾವಾಸಃ - ಆಶಾ- ದಿಕ್ಕುಗಳೆಂಬುವ, ವಾಸಃ- ವಸ್ತ್ರಗಳನ್ನು, ವಸೀಮಹಿ-ಹೊದ್ದುಕೊ ಳ್ಳುತ್ತೇವೆ, ಮಹೀಪೃಷ್ಠೇ- ಮಹೀ- ಭೂಮಿಯ, ಪೃಷ್ಠೇ ಬೆನ್ನಿನಮೇಲೆ ಶಯೀಮಹಿ- ಮಲಗಿಕೊಳ್ಳುತ್ತೇವೆ, ಈಶ್ವರೈಃ- ದೊರೆಗಳಿಂದ, ಕಿಂ- ಏನ ನ್ನು, ಕುರ್ವೀಮಹಿ- ಮಾಡುತ್ತೇವೆ. ||೫೫||

ತಾತ್ಪರ್ಯ—ಈ ಶ್ಲೋಕದಲ್ಲಿ ಉಕ್ತಾರ್ಥವನ್ನೇ ಭಂಗ್ಯಂತರದಿಂದ ಹೇಳುತ್ತಾನೆ. ಅದು ಹೇಗಂದರೆ;—ಎಲೈ ರಾಜನೆ ಕೇಳು ಭಿಕ್ಷಮಾಡಿದ

ಅನ್ನವನ್ನು ಭೋಜನವಾಡುತ್ತೇವೆ ದಿಗಂಬರರಾಗಿ ವಾಸವಾಡುತ್ತೇವೆ ನಿಶ್ಚಿಂತರಾಗ ಭೂಮಿಯಮೇಲೆ ಮಲಗಿಕೊಳ್ಳುತ್ತೇವೆ. ಹೀಗಿರುವಲ್ಲಿ ದೊರೆತನ ಮಾಡುವವರಿಂದ ನಮಗೆ ಏನುಪ್ರಯೋಜನ. ಯಾತಕ್ಕೋಸ್ಕರ ಅವರನ್ನು ಆಶ್ರಯಿಸಬೇಕು ಅದರಿಂದ ನಮಗೆ ಆಗಬೇಕಾದದ್ದು ಏನೂಇಲ್ಲ. ವೈರಾಗ್ಯದಲ್ಲಿ ಯಾರಆಶ್ರಯವೂ ಬೇಕಿಲ್ಲ ಎಲ್ಲರೂ ವೈರಾಗ್ಯವನ್ನು ಆಶ್ರಯಿಸುವುದು ಉತ್ತಮವೆಂದು ತಾತ್ಪರ್ಯ. ||೫೫||

ಶ್ಲೋ|| ನನಟಾನವಿಟಾನಗಾಯಕಾನಚ ಸಭ್ಯೇತರವಾದಚುಂ
ಚವಃ | ನೃಪಮೀಕ್ಷಿತುಮತ್ರಕೇವಯಂಸ್ತನಭಾರಾನ
ಮಿತಾನಯೋಷಿತಃ || ೫೬ ||

ಟೀಕು|| ವಯಂ- ನಾವುಗಳು, ನನಟಾಃ- ನಟರು, ನ-ಅಲ್ಲ, ವಿಟಾಃ- ಭುಜಂಗಶೇಖರರು, ನ- ಅಲ್ಲ, (ಅಥವಾ ನರ್ತನಸಾಚಿವ್ಯವನ್ನು ಮಾಡುವರು ನ- ಅಲ್ಲ,) ಸಭ್ಯೇತರವಾದ ಚುಂಚವಃ- ಸಭ್ಯೇತರ- ದುಷ್ಟಜನಗಳ ಒಡನೆ, ವಾದ - ವಾದಿಸುವದರಲ್ಲಿ, ಚುಂಚವಃ - ಸಮರ್ಥರು, ನ - ಅಲ್ಲ, ಸ್ತನಭಾರಾನಮಿತಾಃ- ಸ್ತನ- ಕುಚಗಳ, ಭಾರ- ಭಾರದಿಂದ, ಆನಮಿತಾಃ - ಬಗ್ಗಿಸಲ್ಪಟ್ಟ, ಯೋಷಿತಃ- ಸ್ತ್ರೀಯರುಗಳು, ನ- ಅಲ್ಲ. ಅತ್ರ- ಈ ವಿಷಯದಲ್ಲಿ, ನೃಪಂ- ದೊರೆಯನ್ನು, ಈಕ್ಷಿತುಂ - ನೋಡುವದಕ್ಕೋಸ್ಕರ, ಕೇ - ಯಾರು. ||೫೬||

ತಾತ್ಪರ್ಯ — ಈ ಶ್ಲೋಕದಲ್ಲಿ ರಾಜನದರ್ಶನದಿಂದ ನಮಗೆ ಪ್ರಯೋಜನವಿಲ್ಲವೆಂಬುವದನ್ನು ಪ್ರಕಾರಾಂತರದಿಂದ ಹೇಳುತಾನೆ. ಅದು ಹೇಗಂದರೆ;-ನಾವು ವೇಷಧಾರಿಗಳಾದ ನಟರಲ್ಲ ಮತ್ತು ವಿಟರಲ್ಲ ಗಾನ ಮಾಡುವ ಗಾಯಕರಲ್ಲ ಕುಚಭಾರದಿಂದ ಬಗ್ಗಿಇರುವ ಪುರೋಭಾಗವುಳ್ಳ ಸುಂದರ ಕಾಮಿನಿಯರಲ್ಲ ಹೀಗಿರುವಲ್ಲಿ ದೊರೆಯನ್ನು ನೋಡುವದಕ್ಕೆ ನಾವುಯಾರು ದೊರೆಯಿಂದ ನಮಗೆ ಆಗಬೇಕಾದ ಇಷ್ಟಾರ್ಥವೇನೂ ಇಲ್ಲವೆಂದು ತಾತ್ಪರ್ಯ. || ವೈತಾಳಿಕಾವೃತ್ತಂ || ||೫೬||

ಶ್ಲೋ|| ಷಡ್ವಿಷಮೇಷ್ಟೌಸಮೇಕಲಾಷ್ಟ್ಬಸಮೇಸ್ಯುರ್ನೋನಿರಂತರಾಃ|
ನಸಮಾತ್ರಪರಾಶ್ರಿತಾಕಲಾವೈತಾಳೀಯರೇರತಾಗುರುರಿತಿಲಕ್ಷಣಾತ್||

ಶ್ಲೋ|| ವಿಪುಲಹೃದಯೈರೀಶೈರೇತಜ್ಜಗಜ್ಜನಿತಂ ಪುರಾ ವಿಧೃ
ತಮಪರೈರ್ದತ್ತಂ ಚಾನ್ಯೈರ್ವಿಜಿತ್ಯ ತೃಣಂ ಯಥಾ।
ಇಹ ಹಿ ಭುವನಾನ್ಯನ್ಯೇ ಧೀರಾಶ್ಚತುರ್ದಶ ಭುಂಜತೇ ಕ
ತಿಪಯಪುರಸ್ವಾಮ್ಯೇ ಪುಂಸಾಂ ಕ ಏಷ ಮದಜ್ವರಃ॥೫೭

ಟೀಕಾ|| ಪುರಾ- ಮೊದಲು. ವಿಪುಲಹೃದಯೈಃ- ವಿಪುಲ- ಅಧಿಕವಾದ, ಹೃದಯೈಃ-ಮನಸ್ಸುಳ್ಳ, ರಾಜರುಗಳಿಂದ ಏತಜ್ಜಗತ್ ಈ ಪ್ರಪಂಚವು, ಜನಿತಂ - ನಿರ್ಮಾಣಮಾಡಲ್ಪಟ್ಟಿತು, ಅಪರೈಃ - ಮತ್ತು ಕೆಲವು ರಾಜರಿಂದ, ವಿಧೃತಂ- ಧರಿಸಲ್ಪಟ್ಟಿತು, ಅನ್ಯೈಃ-ಮತ್ತೆ ಕೆಲವರಿಂದ, ವಿಜಿತ್ಯ- ಜಯಿಸಿ, ಚತುರ್ದಶ - ಹದಿನಾಲ್ಕು ಆದ, ಭುವನಾನಿ - ಲೋಕಗಳು - ತೃಣಂ ಯಥಾ, ಹುಲ್ಲುಕಡ್ಡಿಯೋಪಾದಿಯಲ್ಲಿ-ದತ್ತಂ ಕೊಡಲ್ಪಟ್ಟಿತು, ಇಹ- ಈಗಲಾದರೋ ಅನ್ಯೇ- ಮತ್ತೆ ಕೆಲವರಾದ, ಧೀರಾಃ- ಧೈರ್ಯಶಾಲಿಗಳಾದ ರಾಜರು, ಭುಂಜತೇ - ಅನುಭವಿಸುತ್ತಾರೆ, ಕತಿಪಯಪುರಸ್ವಾಮ್ಯೇ - ಕತಿಪಯ - ಕೆಲವು, ಆದ ಪುರ ಪಟ್ಟಣಗಳ, ಸ್ವಾಮ್ಯೇ- ಪ್ರಭುತ್ವದಲ್ಲಿ, ಪುಂಸಾಂ- ಪುರುಷರುಗಳಿಗೆ, ಏಷಃ-ಈ, ಮದಜ್ವರಃ- ಮದ-ಅಹಂಕಾರದ, ಜ್ವರಃ-ರೋಗವು, ಕಃ- ಯಾವದು. ||೫೭||

ತಾತ್ಪರ್ಯ—ಈ ಶ್ಲೋಕದ ಮೊದಲು ನಾಲ್ಕು ಶ್ಲೋಕದಿಂದ ರಾಜನಿಂದನೆಯನ್ನು ಮಾಡುತ್ತಾನೆ. ಅದು ಹೇಗೆಂದರೆ:—ಪೂರ್ವದಲ್ಲಿ ಈ ಜಗತ್ತು ಮನುಮೊದಲಾದ ಚಕ್ರವರ್ತಿಗಳಿಂದ ನಿರ್ಮಿತವಾಯಿತು. ಈರೀತಿ ನಿರ್ಮಿಸಲ್ಪಟ್ಟ ಜಗತ್ತನ್ನು ಹರಿಶ್ಚಂದ್ರಾದಿರಾಜರು ಆಳುತ್ತಿದ್ದರು. ಇನ್ನು ಕೆಲವು ಬಲಶಾಲಿಗಳಾದ ಬಲಿ ವಿರೋಚನಾದಿಗಳು ಚತುರ್ದಶಲೋಕಗಳನ್ನು ಜಯಿಸಿ ಆಳುತ್ತಾ ಇದ್ದು ಹುಲ್ಲುಕಡ್ಡಿಯಂತೆ ಭಾವಿಸಿ ದಾನವನ್ನು ಕೊಟ್ಟರು ಈಗಲಾದರೊ ಕೆಲವು ಗ್ರಾಮಗಳಿಗೆ ದೊರೆಗಳುಆದ ಮನುಷ್ಯರಿಗೆ ಇರುವ ಅಹಂಕಾರಜ್ವರವು ಎಷ್ಟುಮಾತ್ರದ್ದು ಆದ್ದರಿಂದ ತಾವು ದೊಡ್ಡ ದೊರೆಗಳೆಂಬುವ ಅಹಂಕಾರವನ್ನು ಬಿಡಬೇಕೆಂದು ತಾತ್ಪರ್ಯ.

|| ಹರಿಣೀವೃತ್ತಂ || ||೫೮||

ಶ್ಲೋ|| ಅಭುಕ್ತಾಯಾಂ ಯಸ್ಯಾಂ ಕ್ಷಣಮಪಿ ನ ಜಾತಂ ನೃಪಶ
ತೈರ್ಭುವಸ್ತಸ್ಯಾ ಲಾಭೇ ಕ ಇವ ಬಹುಮಾನಃ ಕ್ಷಿತಿಭೃ

ತ್ರಾಂ ॥ ತದಂಶಸ್ಯಾಪ್ಯಂಶೇತದವಯವಲೇಶೇಪಿಪತ
ಯೋವಿಷಾದೇಕರ್ತವ್ಯೇವಿದಧತಿ ಜಡಾಃಪ್ರತ್ಯುತ
ಮುದಂ ॥ ೫೪ ॥

ಟೀಕು॥ ನೃಪಶತೈಃ-ನೂರುಜನರಾಜರಿಂದ, ಯಸ್ಯಾಂ-ಯಾವ, ಭುವಿ-ಭೂಮಿಯು, ಅಭುಕ್ತಾಯಾಂ ಸತ್ಯಾಂ - ಅನುಭವಿಸಲ್ಪಡದೆ ಇರುವದಾಗಿ, ಕ್ಷಣಮಪಿ-ಕ್ಷಣಕಾಲದಲ್ಲೂ ಕೂಡ, ನಜಾತಂ ಆಗಲಿಲ್ಲವೊ, ತಸ್ಯಾಃ-ಅಂಥಾದ್ದಾದ ಭುವಃ-ಭೂಮಿಯುು, ಲಾಭೇ-ಪ್ರಾಪ್ತಿಯಲ್ಲಿ, ಕ್ಷಿತಭೃತಾಂ ರಾಜರುಗಳಿಗೆ, ಬಹುಮಾನಃ-ಅಹಂಕಾರವು, ಕಇಪ-ಎಷ್ಟುಮಾತ್ರದ್ದು, ತದಂಶಸ್ಯಾಪಿ-ತತ್-ಆಭೂಮಿಯ ಅಂಶಸ್ಯಾಪಿ-ಒಂದುಅಂಶದ ಅಂಶೇ-ಭಾಗದಲ್ಲಿ, ತದವಯವಲೇಶೇಪಿ, ತತ್-ಆಅಂಶಾಂಶದ ಅವಯವ ಅವಯವದ, ಲೇಶೇಪಿ-ಒಂದುಲವಮಾತ್ರದಲ್ಲು ಕೂಡ, ಪತಯಃ-ಪತಿಗಳಾದ ರಾಜರು, ಕರ್ತವ್ಯೇ-ಮಾಡತಕ್ಕ, ವಿಷಾದೇ-ವಿವಾದದಲ್ಲಿ, ಜಡಾಸ್ಸತಃ-ಮೂಢರಾದವರಾಗಿ, ಪ್ರತ್ಯುತ - ವೈರೀಧತ್ಯದಿಂದ, ಮುದಂ - ಸಂತೋಷವನ್ನು, ವಿದಧತಿ ಉಂಟುಮಾಡಿಕೊಳ್ಳುತ್ತಾರೆ. (ಅಥವಾ ಧರಿಸುತ್ತಾರೆ) ॥೫೪॥

ತಾತ್ಪರ್ಯ—ಈ ಶ್ಲೋಕದಲ್ಲಿಯೂ ರಾಜನನ್ನು ನಿಂದನೆ ಮಾಡುತ್ತಾರೆ. ಅದು ಹೇಗೆಂದರೆ:—ಭೂಮಿಯು ನೂರಾರುಮಂದಿ ರಾಜರಿಂದ ಕ್ಷಣಕಾಲ ವಿರಾಮವಿಲ್ಲದೆ ಅನುಭವಿಸಲ್ಪಟ್ಟಿದೆ ಇಂಥಾಭೂಮಿಯು ಮನುಷ್ಯನಿಗೆ ಪ್ರಾಪ್ತವಾದರೆ ಅದರ ಸಂತೋಷವೆಷ್ಟುಮಾತ್ರದ್ದು ಮತ್ತು ಭೂಮಿಯಲೇಶಾಂಶಕ್ಕೆ ದೊರೆಗಳಾದವರು ಅಖಂಡ ಭೂಮಂಡಲಾಧಿಪತ್ಯವಿಲ್ಲದೆ ಹೋಯಿತೆಂಬ ವ್ಯಸನಪಡದೆ ಮೂಢರಾಗಿ ಇಷ್ಟರಮಟ್ಟಿಗೆ ಸಿಕ್ಕಿದುದೆ ಸಾಕೆಂದು ಸಂತೋಷಪಡುತಾರೆ. ಅಂದರೆ ಸ್ವಲ್ಪಮಟ್ಟಿಗೆ ಭೂಮಿಯ ಆಧಿಪತ್ಯಬಂದದ್ದೆ ಸಾಕೆಂದು ಸಂತೋಷಪಡುತ್ತೀರಿ ನೀವು ಮೂಢಜನಗಳೆಂದು ನಿಂದನೆಮಾಡಿದನೆಂದು ತಾತ್ಪರ್ಯ. ಅತ್ಯಲ್ಪ ಭೂಮಂಡಲಾಧಿಪತ್ಯದಲ್ಲಿ ವ್ಯಸನಪಡುವದಕ್ಕೆ ಬದಲಾಗಿ ಸಂತೋಷಪಡುವ ಮೂಢತೆನಕ್ಕೆ ಆಶ್ಚರ್ಯ ಪಡಬೇಕಾಗಿದೆ. ॥೫೪॥

ಶ್ಲೋ॥ ಮೃತ್ಪಿಂಡೋಜಲರೇಖಯಾವಲಯಿತಸ್ಸರ್ವೋಪ್ಯ
ಯಂನನ್ವಣುಃಸ್ವಾಂಶೇಕೃತ್ಯತಮೇವಸಂಗರಶತೈರಾ

ಜ್ಞಾಂಗಣಾಭುಂಜತೇ ॥ ತೇದದ್ಯುರ್ದದತೋಽಥವಾ ಕಿ
ಮಪರಂಕ್ಷುದ್ರಾ ದರಿದ್ರಾ ಭೃಶಂಧಿಗ್ಧಿಕ್ತಾನ್ಪುರುಷಾಧ
ಮಾನ್ಧನಕಣಾನ್ವಾಂಛಂತಿತೇಭ್ಯೋಽಪಿಯೇ ॥೫೯॥

**ಟೀಕು॥** ಜಲರಶನಾ - ಜಲ- ನೀರಿನ, ರಶನಾ-ರಶನೆಯಿಂದ, ಅಥವಾ-ಸಮುದ್ರಾಕಾರವಾದ ನೀರಿನಿಂದ, ವಲಯಿತಃ-ಸುತ್ತಲ್ಪಟ್ಟ, ಸರ್ವೋಽಪ್ಯಯಂ- ಆ ಈ ಸಮಸ್ತವಾದ, ಮೃತ್ಪಿಂಡಃ - ಮೃತ್- ಮಣ್ಣಿನ, ಪಿಂಡಃ- ಉಂಡೆಯು, ಅಣುನನು-ಅಣುವಾದದ್ದಷ್ಟೆ, ತಮೇವ-ಅಂಥಾ ಅಲ್ಪವನ್ನೆ, ರಾಜ್ಞಾಂ-ರಾಜರುಗಳ, ಗಣಾಃ- ಸಮೂಹಗಳು, ಸಂಗರಶತೈಃ- ನೂರುಬಾರಿ ಯುದ್ಧಗಳಿಂದ, ಸ್ವೀಕೃತ್ಯ ತಮ್ಮ ಸ್ವಾಧೀನವನ್ನಾಗಿ ಮಾಡಿಕೊಂಡು ಭುಂಜತೇ-ಅನುಭವಿಸುತ್ತಾರೋ, ತೇ- ಆದೊರೆಗಳು, ದದ್ಯುಃ- ಕೊಟ್ಟಾರೆಯೊ, ಅಥವಾ-ಹಾಗಲ್ಲದೆ ಹೋದರೆ. ದದತಃ- ಕೊಡುವವರಾದರೆ, ಅಪರಂ- ಬೇರೆ ಯಾವರಿಷ್ಟವು, ಕಿಂ-ಯಾವದುಂಟು, ಭೃಶಂ- ಅತ್ಯಂತವಾಗಿ, ಕ್ಷುದ್ರಾಃ- ತುಚ್ಛರು, ದರಿದ್ರಾಃ- ಬಡವರು, ತೇಭ್ಯಃ - ಆ ದರಿದ್ರರಾದ ರಾಜಗುಣಗಳಿಗಿಂತಲೂ, ಯೇ-ಯಾರು, ಧನಕಣಾನ್-ದ್ರವ್ಯಲೇಶಗಳನ್ನು, ವಾಂಛಂತಿ ಇಚ್ಛಯಿಸುತ್ತಾರೋ, ತಾನ್ಪುರುಷಾಧಮಾನ್- ಅಂಥಾ ಅಧಮ ಪುರುಷರನ್ನು, ಧಿಕ್- ಧಿಕ್- ನಿಂದಿಸು ನಿಂದಿಸು. ॥೫೯॥

ತಾತ್ಪರ್ಯ—ಈ ಶ್ಲೋಕದಲ್ಲಿ ರಾಜನಿಂದನೆಯನ್ನು ಮಾಡುತ್ತಾನೆ ಸಮುದ್ರದಿಂದ ಸುತ್ತು ಬಳಸಲ್ಪಟ್ಟ ಭೂಮಿಯು ಅತಿಕೊಂಚ ಅಂದರೆ ಅಣುಮಾತ್ರವಾದದ್ದು ಇಂಥಾ ಭೂಮಿಗೆ ದೊರೆಗಳು ಅನೇಕಸಾರಿ ಯುದ್ಧ ಮಾಡಿ ಅದರಲ್ಲಿ ಕೊಂಚ ಕೊಂಚ ಪಾಟಿಗೆಮಾಡಿಕೊಂಡು ಅನುಭವಿಸುತ್ತಾ ಇದ್ದಾರೆ ಇಂಥಾರಾಜರು ಯಾರಿಗೆ ಕೊಟ್ಟಾರು? ಕೊಡುವದೆ ಇಲ್ಲ. ಒಂದುವೇಳೆ ಕೊಟ್ಟರೆ ಅದು ಕೊಂಚವಾಗಿಯೆ ಇದೆ ಇಂಥಾ ದರಿದ್ರರನ್ನು ಕ್ಷುದ್ರರನ್ನು ನಿಂದಿಸು ಅವರ ಸುದ್ಧಿಯನ್ನು ಬಿಡುಯೆಂದು ತಾತ್ಪರ್ಯ. ಅಂದರೆಮಹನೀಯರಿಗೆ ಭೂಮಂಡಲವು ತುಚ್ಛವಾದದ್ದೆಂದು ಅಭಿಪ್ರಾಯ.

ಶ್ಲೋ॥ ನಜಾತಃಕೋಽಪ್ಯಾಸೀನ್ಮದನರಿಪುಣಾಮೂರ್ಧ್ನಿಧವ
ಳಂಕಪಾಲಂಯಸ್ಯೋಚ್ಚೈರ್ವಿನಿಹಿತಮಲಂಕಾರವಿ
ಧಯೇ ॥ ನೃಭಿಃಪ್ರಾಣತ್ರಾಣಪ್ರವಣಮತಿಭಿಃಕೈಶ್ಚಿ

ದಪಿನಾನಮದ್ಭಿಃಕಃಪುಂಸಾಮಯಮತುಲದರ್ಪಜ್ವ
ರಭರಃ ॥ ೬೦ ॥

ಟೀಕು ॥ ಸಃ ಆ, ಪುರ್ವಾಣ - ಪುರುಷನು, ಕಶ್ಚಿದೇವಜಾತಃ - ಹುಟ್ಟಿದ ಒಬ್ಬಾನೊಬ್ಬನೆ, ಸಫಲಜನ್ಮಾ - ಸಫಲ - ಪ್ರಯೋಜನಕರವಾದ, ಜನ್ಮ - ಉತ್ಪತ್ತಿಯು, ಆಸೀತ್ - ಆಯಿತು, ಯಸ್ಯ - ಯಾವ ಮನುಷ್ಯನ, ಧವಳಂ - ಶುಭ್ರವಾದ, ಕಪಾಲಂ - ಕಪಾಲವು, (ಶಿರೋಸ್ಥಿಯು) ಮದನರಿಪುಣಾ - ಮದನ - ಕಂದರ್ಪನಿಗೆ, ರಿಪುಣಾ - ಶತ್ರುವಾದ ಶಂಭುವಿನಿಂದ, ಮೂರ್ಧ್ನಿ - ಶಿರಸ್ಸಿನಲ್ಲಿ, ಉಚ್ಚೈಃ - ಅಧಿಕವಾಗಿ, ಅಲಂಕಾರವಿಧಯೇ - ಅಲಂಕಾರವಿಧಾನಕ್ಕೋಸ್ಕರ, ವಿನಿಹಿತಂ - ವಿನಿಯೋಗಿಸಲ್ಪಟ್ಟಿತೋ, ಪ್ರಾಣತ್ರಾಣಪ್ರವಣಮತಿಭಿಃ - ಪ್ರಾಣ - ಪ್ರಾಣಗಳ, ತ್ರಾಣ - ಸಂರಕ್ಷಿಸುವದರಲ್ಲಿ, ಪ್ರವಣ - ಆಸಕ್ತವಾದ, ಮತಿಭಿಃ - ಬುದ್ಧಿಗಳುಳ್ಳ, ಕೈಶ್ಚಿತ್ - ಕೆಲವರಾದ, ನೃಭಿಃ - ಮನುಷ್ಯರಿಂದಲೂ, ಅಥವಾ - ಹಾಗಿಲ್ಲದೇಹೋದರೆ, ನಮದ್ಭಿಃ - ನಮಸ್ಕಾರವನ್ನು ಮಾಡುತ್ತಲಿರುವ ಮನುಷ್ಯರಿಂದಲೂ ಕೂಡ, ಪುಂಸಾಂ - ಮನುಷ್ಯರಿಗೆ, ಅಯಂ - ಈ ಅಮಲದರ್ಪಜ್ವರಭರಃ - ಅಮಲ - ನಿರ್ಮಲವಾದ, ದರ್ಪ - ಅಹಂಕಾರವೆಂಬುವ, ಜ್ವರ - ಜ್ವರದ, ಭರಃ - ಭಯವು, ಕಃ - ಯಾವದು,

ತಾತ್ಪರ್ಯ — ಈ ಶ್ಲೋಕದಲ್ಲಿ ಮೊದಲು ಹೇಳಿದ ಅರ್ಥವನ್ನೇ ಹೇಳುತ್ತಾನೆ. ಲೋಕದಲ್ಲಿ ಅವನು ಹುಟ್ಟಿದ್ದು ಸಫಲವಾದದ್ದು, ಅದು ಹೇಗಂದರೆ; — ಯಾವ ಮನುಷ್ಯನ ಕಪಾಲವೆಂದರೆ ತಲೆಬುರುಡೆ ಈಶ್ವರನಿಗೆ ಶಿರೋಭೂಷಣವಾಯಿತೋ ಅವನ ಜನ್ಮನೆ ಸಾರ್ಥಕವಾದದ್ದು ಪ್ರಾಣಗಳನ್ನು ಸಂರಕ್ಷಣೆ ಮಾಡಿಕೊಳ್ಳುವ ಅಥವಾ ರಾಜರುಗಳಿಗೆ ನಮಸ್ಕಾರ ಮಾಡುವ ಮನುಷ್ಯರಿಗೆ ಉಂಟಾದ ಅಹಂಕಾರವು ಎಷ್ಟರಮಟ್ಟಿನದು ಅಂದರೆ ಸತ್ತುಹೋದಾಗ್ಯೂ ಯಾವನ ತಲೆಬುರುಡೆ ಈಶ್ವರನಿಗೆ ಅಲಂಕಾರವಾಯಿತೊ ಅವನು ಹುಟ್ಟಿದ್ದು ಸಾರ್ಥಕವಾಯಿತು ಪ್ರಾಣಮಾತ್ರ ಸಂರಕ್ಷಣೆಮಾಡಿಕೊಳ್ಳುವ ಅಥವಾ ಅವರಿಗೆ ತಗ್ಗಿ ನಮಸ್ಕರಿಸುವ ಜನಗಳ ಅಹಂಕಾರವು ಯಾತಕ್ಕೆ ಕೆಲಸಕ್ಕೆ ಬಂದೀತು ಎಂದು ತಾತ್ಪರ್ಯ. ॥೬೦॥

ಯತಿನೃಪತಿ ಸಂವಾದ ವರ್ಣನ ಪದ್ಧತಿಃ ಸಮಾಪ್ತಾ.

## ಮನಸ್ಸಂಬೋಧನ ವರ್ಣನಾರಂಭವು.

ಶ್ಲೋ॥ ಪರೇಷಾಂಚೇತಾಂಸಿಪ್ರತಿದಿವಸಮಾರಾಧ್ಯಬಹುಧಾ
ಪ್ರಸಾದಂಕಿಂನೇತುಂವಿಶಸಿಹೃದಯಕ್ಲೇಶಕಲಿತಂ ॥
ಪ್ರಸನ್ನೇತ್ವಯ್ಯಂತಸ್ಸ್ವಯಮುದಿತಚಿಂತಾಮಣಿಗ
ಗಣೋವಿವಿಕ್ತಸ್ಸಂಕಲ್ಪಃಕಿಮಭಿಲಷಿತಂಪುಷ್ಯತಿ
ನತೇ ॥ ೬೧ ॥

ಟೀಕು॥ ಹೇ ಹೃದಯ ಎಲೈ ಮನಸ್ಸೇ, ಪರೇಷಾಂ-ಅನ್ಯರ, ಚೇತಾಂಸಿ ಚಿತ್ತಗಳನ್ನು, ಪ್ರತಿ ದಿವಸಂ- ನಿತ್ಯದಲ್ಲು, ಮುಧಾ- ವ್ಯರ್ಥವಾಗಿ, ಆರಾಧ್ಯ-ಸೇವಿಸಿ, ಕ್ಲೇಶಕಲಿತಂ - ಕ್ಲೇಶ - ಕಷ್ಟದಿಂದ, ಕಲಿತಂ - ವ್ಯಾಪ್ತವಾದ, ಅನುಗ್ರಹವನ್ನು, ನೇತುಂ - ಹೊಂದುವದಕ್ಕೋಸ್ಕರ, ಕಿಂ - ಯಾತಕ್ಕೋಸ್ಕರ, ವಿಶಸಿ - ಪ್ರವೇಶಮಾಡುತ್ತಲಿದ್ದೀಯೆ, ತ್ವಯಿ - ನೀನು, ಅಂತಃ - ಒಳಗೆ, ಪ್ರಸನ್ನೇಸತಿ-ನಿರ್ಮಲವಾದದ್ದು ಆಗುತ್ತಿರಲಾಗಿ, ಸ್ವಯಂ ತಾನೇ ಉದಿತಃ - ಹುಟ್ಟಿದ, ಚಿಂತಾಮಣಿಗಣಃ- ಚಿಂತಾ - ಸ್ವರೂಪವಾದ, ಮಣಿ ಗಣಃ- ರತ್ನಸ್ವರೂಪವಾದ, ವಿವಿಕ್ತಃ - ನಿರ್ಮಲವಾದ, ಸಂಕಲ್ಪಃ - ಸಂಕಲ್ಪವು, (ಅಥವಾ ಕೋರಿಕೆಯು) ತೇ- ನಿನಗೆ, ಅಭಿಲಷಿತಃ- ಅಭಿಲಾಷೆಯನ್ನು (ಅಥವಾ- ಇಷ್ಟಾರ್ಥವನ್ನು), ನಪುಷ್ಯತಿಕಿಂ- ಪೋಷಿಸುವದಿಲ್ಲವೇ ಏನು ? ಉಂಟುಮಾಡಿಯೆ ಮಾಡುತ್ತದೆ ॥ ೬೧ ॥

ತಾತ್ಪರ್ಯ—ಈ ಶ್ಲೋಕದಲ್ಲಿ ಯಾವನು ಮನಸ್ಸನ್ನು ನಿಗ್ರಹಿಸುತ್ತಾನೋ ಅವನೆ ಯತಿ ಎನ್ನಿಸಿಕೊಳ್ಳುತ್ತಾನೆ. ಆದ್ದರಿಂದ ಪ್ರಸಂಗ ಸಂಗತಿಯಿಂದ ಮನೋನಿಗ್ರಹ ಪ್ರಕಾರವನ್ನು ಹೇಳುತ್ತಾನೆ. ಅದು ಹೇಗಂದರೆ;—ಎಲೈ ಮನಸ್ಸೆ ನೀನು ಪರರನ್ನು ಆಶ್ರಯಿಸಿ ಬಹು ಕಷ್ಟಪಟ್ಟು ಅವರ ವಿಶ್ವಾಸ ಸಂಪಾದಿಸುವದಕ್ಕೋಸ್ಕರ ಬಹು ಪ್ರಕಾರದಲ್ಲಿ ಯತ್ನಮಾಡುತ್ತಿ ಅದು ಏನು ಪ್ರಯೋಜನವಾದೀತು ಅಂತರಂಗದಲ್ಲಿ ಶುದ್ಧಿಯಾಗಿ ಆಸೆಯನ್ನು ತ್ಯಜಿಸಿದರೆ ಚಿಂತಾಮಣಿಗಳದಂತೆ ಸಂಕಲ್ಪವು ನಿನಗೆ ಏನು ಇಷ್ಟಾರ್ಥಕೇಳಿದಾಗ್ಯೂ ಕೊಡಲಾರದೆ! ಕೊಟ್ಟುಕೊಡುತ್ತದೆ. ಅಂದರೆ ಆಶಾಪರಿತ್ಯಾಗಿಯಾಗಿ ವಿರಕ್ತನಾದರೆ ಅಂಥಾವನಿಗೆ ಏನು ಕೋರಿಕೊಂಡಾಗ್ಯು ಸಿದ್ಧಿಯಾಗುವದೆಂದು ತಾತ್ಪರ್ಯ. ॥೬೧॥

ಶ್ಲೋ॥ ಪರಿಭ್ರಮಸಿಕಿಮ್ಮುಧಾಕ್ವಚನಚಿತ್ತವಿಶ್ರಾಮ್ಯತಾಂ
ಸ್ವಯಂಭವತಿಯದ್ಯಥಾಭವತಿತತ್ತಥಾನಾನ್ಯಥಾ ॥
ಅತೀತಮನನುಸ್ಮರನ್ನಪಿಚಭಾವ್ಯಸಂಕಲ್ಪಯನ್ನತ
ರ್ಕಿತಸಮಾಗಮಾನನುಭವಾಮಿಭೋಗಾನಹಂ॥೬೨॥

ಟೀಕೆ ॥ ಹೇಚಿತ್ತ-ಎಲೈ ಮನಸ್ಸೇ, ಮುಧಾ-ವ್ಯರ್ಥವಾಗಿ, ಕಿಂ-ಯಾತಕ್ಕೋಸ್ಕರ, ವಿಶ್ರಾಮ್ಯತಾಂ- ವಿಶ್ರಮಿಸಿಕೊಳ್ಳೋಣವಾಗಲಿ, (ಅಥವಾ ಇರೋಣವಾಗಲಿ) ಯತ್-ಯಾವದು, ಸ್ವಯಂ-ತನ್ನಷ್ಟಕ್ಕೆ ತಾನೆ, ಯಥಾ-ಹೇಗೆ, ಭವತಿ-ಆಗುತ್ತದೊ, ತತ್-ಅದು, ತಥಾ-ಹಾಗೆ, ಭವತಿ-ಆಗುತ್ತದೆ, ಅಹಂ- ನಾನು, ಅತೀತಂ- ಗತವಾದ ಸುಖದುಃಖಸನ್ನು, ಅನನುಸ್ಮರನ್ -ಸ್ಮರಣೆ ಮಾಡದೆ ಇರುವವನಾಗಿಯೂ, ಅಪಿಚ- ಮತ್ತು, ಭಾವಿ- ಮುಂದೆ ಆಗುವುದನ್ನು, ಅಸಂಕಲ್ಪಯನ್-ಇಚ್ಛಿಸದೆಯೂ, ಅತರ್ಕಿತಸಮಾಗಮಾನ್ ಅತರ್ಕಿತ-ಊಹಿಸದೆ, ಸಮಾಗಮಾನ್-ಪ್ರಾಪ್ತಗಳಾದ, ಭೋಗಾನ್-ಭೋಗಗಳನ್ನು, ಅನುಭವಾಮಿ- ಅನುಭವಿಸುತ್ತೇನೆ. ॥೬೨॥

ತಾತ್ಪರ್ಯ—ಈ ಶ್ಲೋಕದಲ್ಲಿ ಮನಸ್ಸು ನಿರ್ಮಲವಾಗಿದ್ದರೆ ಫಲವನ್ನು ಹೇಳಿ ಇಲ್ಲದಿದ್ದರೆ ದೋಷವನ್ನು ಹೇಳುತ್ತಾನೆ. ಅದುಹೇಗೆಂದರೆ:- ಎಲೈ ಮನಸ್ಸೆ ವ್ಯರ್ಥವಾಗಿ ಏಕೆ ಹಾರಾಡುತ್ತಿ ಒಂದು ಕಡೆಯಲ್ಲಿಯಾದರೂ ಸ್ಥಿರವಾಗಿ ನಿಲ್ಲು, ನಾನು ಹಿಂದೆಕಳೆದುಹೋದ ಸುಖದುಃಖಗಳನ್ನು ಸ್ಮರಿಸದೆಯೂ ಮುಂದೆ ಆಗುವದನ್ನು ಯೋಚಿಸದೆಯೂ ಬಂದು ಪ್ರಾಪ್ತವಾಗುವ ಭೋಗಾದಿಗಳನ್ನು ಅಂದರೆ ತತ್ಕಾಲದಲ್ಲಿ ಪ್ರಾಪ್ತವಾದ ಸುಖದುಃಖಗಳನ್ನು ಅನುಭವಿಸುತ್ತಾನೆ. ಅಂದರೆ ಹಿಂದೆಕಳೆದ ಸುಖಾದಿಗಳನ್ನು ಜ್ಞಾಪಕಕ್ಕೆ ತಂದುಕೊಳ್ಳದೆ ಮುಂದೆ ಇಂಥಾದ್ದು ಆಗಬೇಕೆಂದು ಕೋರದೆ ತನ್ನಷ್ಟಕ್ಕೆ ತಾನೆಬಂದ ವಿಷಯಾದಿಗಳನ್ನು ಅನುಭವಿಸುತ್ತೇನೆಂದು ತಾತ್ಪರ್ಯ. ಪೃಥ್ವೀವೃತ್ತಂ. ॥೬೨॥

ಶ್ಲೋ॥ ಏತಸ್ಮಾದ್ವಿರಮೇಂದ್ರಿಯಾರ್ಥಗಹನಾದಾಯಾಸಕಾ
ದಾಶ್ರಯಶ್ರೇಯೋಮಾರ್ಗಮಶೇಷದುಃಖಶಮನವ್ಯಾ
ಪಾರದಕ್ಷಂಕ್ಷಣಾತ್ । ಸ್ವಾತ್ಮೀಭಾವಮುಪೈಹಿಸಂತ್ಯ

ಜನಿಜಾಂಕಲ್ಲೋಲಲೋಲಾಂಗತಿಂ ಮಾಭೂಯೋಭ
ಜಭಂಗುರಾಂಭವರತಿಂಚೇತಃಪ್ರಸೀದಾಧುನಾ ॥೬೩॥

ಟೀಕಾ॥ ಹೇಚೇತಃ-ಎಲೈ ಮನಸ್ಸೆ, ಅಧುನಾ-ಈಗ, ಪ್ರಸೀದ ಪ್ರಸನ್ನವಾಗು, ಏತಸ್ಮಾತ್-ಈ ರೀತಿಯಾದ, ಇಂದ್ರಿಯಾರ್ಥಗಹನಾತ್-ಇಂದ್ರಿಯಾರ್ಥ-ಶಬ್ದಾದಿ ಇಂದ್ರಿಯವಿಷಯಗಳುಳ್ಳ, ಗಹನಾತ್-ಅರಣ್ಯರೂಪವಾದ, ಆಯಾಸಾತ್-ಶ್ರಮದದೆಸೆಯಿಂದ, ವಿರಮ-ವಿಶ್ರಾಂತಿಯನ್ನು ಹೊಂದು, ಕ್ಷಣಾತ್-ಕ್ಷಣಕಾಲದಲ್ಲಿ ಅಶೇಷದುಃಖಶಮನವ್ಯಾಪಾರದಕ್ಷಂ ಅಶೇಷ-ಸಮಸ್ತವಾದ, ದುಃಖ-ಇಂದ್ರಿಯ ಪರಿತಾಪದ, ಶಮನವ್ಯಾಪಾರ-ಹೋಗಲಾಡಿಸುವದರಲ್ಲಿ, ದಕ್ಷಂ-ಸಮರ್ಥವಾದ, ಶ್ರೇಯೋಮಾರ್ಗಂ-ಮೋಕ್ಷಮಾರ್ಗವನ್ನು, ಆಶ್ರಯ-ಆಶ್ರಯಿಸು. ಸ್ವಾತ್ಮೀಭಾವಂ-ಆತ್ಮಭಾವವನ್ನು, ಉಪೈಹಿ ಹೊಂದು, ನಿಜಾಂ-ಸ್ವಕೀಯವಾದ, ಕಲ್ಲೋಲಲೋಲಾಂ-ಕಲ್ಲೋಲ-ತರಂಗಗಳೋಪಾದಿಯಲ್ಲಿ, ಲೋಲಾಂ-ಚಂಚಲವಾದ, ಗತಿಂ-ಗಮನವನ್ನು, ಸತ್ಯಜ ಬಿಟ್ಟುಬಿಡು, ಸ್ವಾತ್ಮಭಾವಂ-ಆತ್ಮಭಾವವನ್ನು ಉಪೇಹಿ-ಹೊಂದು, ಭಂಗುರಾಂ-ಅಸ್ಥಿರವಾದ, ಭವರತಿಂ-ಭವ-ಸಂಸಾರದ, ರತಿಂ-ವಿಶ್ವಾಸವನ್ನು, ಮಾಭಜ-ಮಾಡಬೇಡ, ಅಥವಾ-ಹೊಂದಬೇಡ, ॥೬೩॥

ತಾತ್ಪರ್ಯ—ಈ ಶ್ಲೋಕದಲ್ಲಿ ಮನಸ್ಸನ್ನು ಕುರಿತು ಹೇಳುತ್ತಾನೆ. ಅದು ಹೇಗಂದರೆ;—ಇಂದ್ರಿಯಾರ್ಥಗಳೆಂಬುವ ವಿಷಯೋಪಭೋಗಗಳುಳ್ಳ ಅತಿಕಷ್ಟತರವಾದ ಈ ಸಂಸಾರವೆಂಬುವ ಆಯಾಸದ ದೆಸೆಯಿಂದ ವಿಶ್ರಾಂತಿಯನ್ನು ಹೊಂದಿ ಸಂಸಾರದುಃಖವನ್ನು ನಾಶಮಾಡುವದರಲ್ಲಿ ಸಮರ್ಥವಾದ ಮೋಕ್ಷಮಾರ್ಗವನ್ನು ಆಶ್ರಯಿಸಿ ಸಂಸಾರದಲ್ಲಿ ಆಶೆಯನ್ನು ಮಾಡಬೇಡ ಸಂಸಾರ ಅನಿತ್ಯವಾದದ್ದು ಮೋಕ್ಷಮಾರ್ಗ ಸುಖವಾದದ್ದು ಆದ್ದರಿಂದ ಮೋಕ್ಷಮಾರ್ಗವನ್ನು ಆಶ್ರಯಿಸಬೇಕೆಂದು ಮನಸ್ಸಿಗೆ ಹೇಳುತ್ತಾನೆಂದು ತಾತ್ಪರ್ಯ. ॥೬೩॥

ಶ್ಲೋ॥ ಮೋಹಂಮಾರ್ಜಯತಾಮುಪಾರ್ಜಯರತಿಂಗೋಪಾಲ
ಚೂಡಾಮಣೌ ಚೇತಸ್ಸ್ವರ್ಗತರಂಗಿಣೀತಟಭುವಾ
ಮಾಸಂಗಮಂಗೀಕುರು । ಕೋವಾವೀಚಿಷುಬುದ್ಬು

ದೇಷುಚತಟಿಲ್ಲೇಖಾಸುಚಶ್ರೀಷುಚಜ್ವಾಲಾಗ್ರೇಷು

ಚಪನ್ನಗೇಷುಚಸುಹೃದ್ವರ್ಗೇಷುಚಪ್ರತ್ಯಯಃ||೬೪||

ಟೀಕು|| ಹೇಚೇತಃ-ಎಲೈ ಮನಸ್ಸೆ, ಮೋಹಂ-ಅಜ್ಞಾನವನ್ನು, (ಅಥವಾ ಭ್ರಾಂತಿಯನ್ನು) ಮಾರ್ಜಯ- ಬಿಡು, ಗೋಪಾಲಚೂಡಾಮಣೌ- ಗೋಪಾಲ-ಗೋಪಾಲಕರಲ್ಲಿ, ಚೂಡಾಮಣೌ ಶಿರೋರತ್ನಪ್ರಾಯವಾದ ಶ್ರೀಕೃಷ್ಣನಲ್ಲಿ, ತಾಂ ಅಂಥಾ ಅನಿರ್ವರ್ಣನೀಯವಾದ, ರತಿ-ವಿಶ್ವಾಸವನ್ನು, ಉಪಾರ್ಜಯ-ಸಂಪಾದಿಸು, ಸ್ವರ್ಗತರಂಗಿಣೀತಟಭುವಾಂ- ಸ್ವರ್ಗತರಂಗಿಣೀ- ದೇವಗಂಗೆಯ, ತಟ ಗಟ್ಟನಲ್ಲಿರುವ, ಭುವಾಂ-ಭೂಪ್ರದೇಶಗಳ, ಆಸಂಗಂ-ಸಂಬಂಧವನ್ನು, ಅಂಗೀಕುರು- ಅಂಗೀಕರಿಸು, ವೀಚಿಷು- ತೆರೆಗಳಲ್ಲಿಯೂ, ಬುದ್ಬುದೇಷು- ನೀರಮೇಲಣಗುಳ್ಳೆಗಳಲ್ಲಿಯೂ, ತಟಿಲ್ಲೇಖಾಸುಚ-ಮಿಂಚಿನರೇಖೆಯಲ್ಲಿಯೂ, ಶ್ರೀಷುಚ-ಐಶ್ವರ್ಯದಲ್ಲಿಯೂ, ಜ್ವಾಲಾಗ್ರೇಷುಚ- ಉರಿಯಕೊನೆಗಳಲ್ಲಿಯೂ, ಸರ್ಪೇಷುಚ ಸರ್ಪಗಳಲ್ಲಿಯೂ, ಸುಹೃದ್ವರ್ಗೇಷುಚ ಬಂಧುವರ್ಗಗಳಲ್ಲಿಯೂ, ಕೋವಾ-ಎಂಥಾದ್ದುದ, ಪ್ರತ್ಯಯಃ-ನಂಬಿಕೆಯು, ಅಸ್ತಿ ಇದೆ, ಅಂದರೆ ಇಲ್ಲ, ||೬೪||

ತಾತ್ಪರ್ಯ—ಈ ಶ್ಲೋಕದಲ್ಲಿಯೂ ಮನಸ್ಸನ್ನು ಕುರಿತು ಹೇಳುತ್ತಾನೆ. ಅದು ಹೇಗಂದರೆ:—ಎಲೈ ಮನಸ್ಸೆ ಮೋಹವನ್ನುಬಿಡು ಗೋಪಾಲರಲ್ಲಿ ರತ್ನಪ್ರಾಯನಾದ ಶ್ರೀಕೃಷ್ಣನಲ್ಲಿ ಹೆಚ್ಚಾದ ವಿಶ್ವಾಸವನ್ನಿಡು ದೇವಗಂಗೆಯ ದಡದಲ್ಲಿ ವಾಸಮಾಡುವ ನೀರುಗುಳ್ಳೆ ಮಿಂಚಿನ ರೇಖೆ ಐಶ್ವರ್ಯ ಇವುಗಳೆಲ್ಲಾ ಅಸ್ಥಿರವಾದವುಗಳು ಬೆಂಕಿಯುರಿ ಕೊನೆಯಲ್ಲಿಯೂ ಸರ್ಪಗಳಲ್ಲಿಯೂ ಬಂಧುಜನಗಳಲ್ಲಿಯೂ ಯಾವ ನಂಬಿಕೆಯುಂಟು ಇವುಗಳಲ್ಲಿ ನಂಬಿಕೆ ಇಲ್ಲ ಅಂದರೆ ಇವರುಗಳನ್ನು ನಂಬಿ ಕೆಟ್ಟು ಹೋಗಬೇಡ ಎಂದುಮನಸ್ಸಿಗೆ ಹೇಳಿದಭಾವವು || ದೀಪಕಾಲಂಕಾರಃ || ||೬೪||

ಶ್ಲೋ|| ಚೇತಶ್ಚಿಂತಯಮಾರಮಾಂಸಕೃದಿಮಾಮಸ್ಥಾಯಿ

ನೀಮಾಸ್ಥಯಾಭೂಪಾಲಭ್ರುಕುಟೀಕುಟೀವಿಹರಣ

ವ್ಯಾಪಾರಪಣ್ಯಾಂಗನಾಂ || ಕಂಥಾಕಂಚುಕಿನಃಪ್ರವಿ

ಶ್ಯಭವನದ್ವಾರಾಣಿವಾರಾಣಸೀರಥ್ಯಾಪಙ್ಕ್ತಿಷುಪಾಣಿ
ಪಾತ್ರಪತಿತಾಂಭಿಕ್ಷಾಮಪೇಕ್ಷಾಮಹೇ ॥೬೫॥

ಟೀಕಾ॥ ಹೇ ಚೇತಃ-ಎಲೈ ಮನಸ್ಸೆ, ಭೂಪಾಲಭ್ರುಕುಟೀಕುಟೀವಿಹರಣವ್ಯಾಪಾರಪಣ್ಯಾಂಗನಾಂ- ಭೂಪಾಲ- ರಾಜರುಗಳ, ಭ್ರುಕುಟೀ- ಹುಬ್ಬು ಯೆಂಬುವ, ಕುಟೀ- ಮನೆಯಲ್ಲಿ, ವಿಹರಣವ್ಯಾಪಾರ-ವಿಹಾರವ್ಯಾಪಾರದಲ್ಲಿ, ಪಣ್ಯಾಂಗನಾಂ-ವೇಶ್ಯಾಂಗನೆಯರೂಪವಾದ, ಅಸ್ಥಾಯಿನೀಂ-ಅಸ್ಥಿರವಾದ, ಇಮಾಂ- ಈ ಪರಿದೃಶ್ಯಮಾನವಾದ, ರಮಾಂ ಐಶ್ವರ್ಯವನ್ನು, ಸಕೃದಪಿ- ಕೋಟವಾದರೂ, ಮಾಚಿಂತಯ- ಅಪೇಕ್ಷಿಸಬೇಡ, ಕಂಥಾಕಂಚುಕಿನಃ ಕಂಥಾ- ವಸ್ತ್ರವೇ ಕಂಚುಕಿನಃ-ಕವಚಗಳಾಗಿವುಳ್ಳ, ವಯಂ ನಾವುಗಳು, ವಾರಾಣಸೀರಥ್ಯಾಪಙ್ಕ್ತಿಷು-ವಾರಾಣಸೀ-ಕಾಶೀಪಟ್ಟಣದ, ರಥ್ಯಾಪಙ್ಕ್ತಿಷು- ರಾಜಮಾರ್ಗಗಳಲ್ಲಿ, ಅಥವಾ ರಥಬೀದಿಗಳಲ್ಲಿ, ದ್ವಾರಾಣಿ-ಮನೆಯ ಬಾಗಿಲುಗಳನ್ನು, ಪ್ರವಿಶ್ಯ-ಪ್ರವೇಶಮಾಡಿ, ಪಾಣಿಪಾತ್ರಪತಿತಾಂ- ಪಾಣಿಪಾತ್ರ- ಕರಪಾತ್ರೆಯಲ್ಲಿ, ಪತಿತಾಂ-ಬಿದ್ದ, ಭಿಕ್ಷಾಂ- ಭಿಕ್ಷಾನ್ನವನ್ನು, ಅಪೇಕ್ಷಾಮಹೇ- ಅಪೇಕ್ಷೆಮಾಡುತ್ತೇವೆ, ॥೬೫॥

ತಾತ್ಪರ್ಯ—ಈಶ್ಲೋಕದಲ್ಲೂ ಮನಸ್ಸನ್ನು ಕುರಿತು ಹೇಳುತ್ತಾನೆ ಅದು ಹೇಗಂದರೆ;— ಐಶ್ವರ್ಯವೆಂಬುವದು ರಾಜರ ಭ್ರೂಸಂಜ್ಞೆಯಿಂದ ವೇಶ್ಯಾಂಗನೆಯೋಪಾದಿಯಲ್ಲಿ ನಾಟ್ಯವನ್ನು ಮಾಡುತ್ತಿರುವದು ಇದು ಅಸ್ಥಿರವಾದದ್ದು ಶಾಶ್ವತವಾದದ್ದಲ್ಲ ಇದರಲ್ಲಿ ಆಶೆಮಾಡಬೇಡ ನಾವುಗಳಾದರೋ ಕಂತೆವಸ್ತ್ರದಲ್ಲಿ ಮಾಡಿದ ಕವಚವನ್ನು ತೊಟ್ಟುಕೊಂಡು ಕಾಶೀಪಟ್ಟಣದಲ್ಲಿ ರಥಬೀದಿಗಳಲ್ಲಿರುವ ಮನೆಗಳ ಬಾಗಿಲಿನಲ್ಲಿ ನಿಂತುಕೊಂಡು ಕರತಲಭಿಕ್ಷಮಾಡಿಕೊಂಡು ಒಬ್ಬರ ಉಪಸರ್ಪಣೆ ಇಲ್ಲದೆ ಸುಖವಾಗಿದ್ದೇವೆ ಆದ್ದರಿಂದ ಆಸೆಪಡಬೇಡವೆಂದು ಮನಸ್ಸಿಗೆ ಸಂಬೋಧನೆ ಮಾಡಿ ಹೇಳಿದನೆಂದು ತಾತ್ಪರ್ಯ. ॥ ಆಕ್ಷೇಪಾಲಂಕಾರಃ ॥ ಆಕ್ಷೇಪಃಸ್ವಯಮುಕ್ತಸ್ಯ ಪ್ರತಿಷೇಧೋ ವಿಚಾರಣಾದಿ ತಿಲಕ್ಷಣಾತ್. ॥೬೫॥

ಶ್ಲೋ॥ ಅಗ್ರೇಗೀತಂಸರಸಕವಯಃಪಾರ್ಶ್ವಯೋರ್ದಾಕ್ಷಿಣಾ
ತ್ಯಾಃಪಶ್ಚಾಲ್ಲೀಲಾವಲಯರಣಿತಂಚಾಮರಗ್ರಾಹಿಣೀ

ನಾಂ ॥ ಯದ್ಯಸ್ತ್ಯೇವಂಕುರುಭವರಸಾಸ್ವಾದನೇಲಂ
ಪಟತ್ವಂನೋಚೇಚ್ಚೇತಃಪ್ರವಿಶಸಹಸಾನಿರ್ವಿಕಲ್ಪೇ
ಸಮಾಧೌ ॥ ೬೬ ॥

ಟೀಕು॥ ಹೇಚೇತಃ- ಎಲೈಮನಸ್ಸೇ, ಅಗ್ರೇ- ಮುಂಭಾಗದಲ್ಲಿ, ಗೀತಂ-ಗಾನವು, ಪಾರ್ಶ್ವಯೋಃ-ಎರಡುಕಡೆಗಳಲ್ಲು, ದಾಕ್ಷಿಣಾತ್ಯಾಃ- ದಕ್ಷಿಣದೇಶೀಯರಾದ, ಸರಸಕವಯಃ-ಸರಸ- ರಸಯುಕ್ತವಾದ, ಕವಯಃ- ಕವಿತ್ವಮಾಡುವ ಕವೀಶ್ವರರು, ಪಶ್ಚಾತ್- ಹಿಂದುಗಡೆಯಲ್ಲಿ, ಚಾಮರಗ್ರಾಹಿಣೀನಾಂ-ಚಾಮರ-ಚಾಮರಗಳನ್ನು, ಗ್ರಾಹಿಣೀನಾಂ- ಹಿಡಿದುಕೊಂಡು ಚಾಮರ ಹಾಕುತ್ತಿರುವ ಕಾಮಿನಿಯರ, ಲೀಲಾವಲಯರಣಿತಂ-ಲೀಲಾ-ವಿಲಾಸಾರ್ಥವಾದ, ವಲಯ-ಕಡಗಗಳ, ರಣಿತಂ- ಶಬ್ದವು, ಅಸ್ತಿಯದಿ ಇರುವುದಾದರೆ, ಭವರಸಾಸ್ವಾದನೇಲಂಪಟತ್ವಂ-ಭವ-ಸಂಸಾರದ, ರಸ- ಆನಂದದ, ಆಸ್ವಾದನೇ-ರುಚಿನೋಡುವದರಲ್ಲಿ, ಲಂಪಟತ್ವಂ- ಶ್ರಮಭಾವವನ್ನು, ಕುರು- ಮಾಡು. ನೋಚೇತ- ಇವುಗಳು ಇಲ್ಲದೆ ಹೋದರೆ, ಸಹಸಾ ಜಾಗ್ರತೆಯಾಗಿ, ನಿರ್ವಿಕಲ್ಪೇ-ಚಿತ್ತೈಕಾಗ್ರತೆಯುಳ್ಳ, (ಅಥವಾ ಇಂದ್ರಿಯಾರ್ಥಪರಿಜ್ಞಾನ ಭಾವವಾದ) ಸಮಾಧೌ-ಯೋಗದಲ್ಲಿ ಪ್ರವಿಶ- ಪ್ರವೇಶಿಸು, (ಅಥವಾ ಮಾಡು)

ತಾತ್ಪರ್ಯ—ಈ ಶ್ಲೋಕದಲ್ಲಿ ಮನಸ್ಸನ್ನು ಕುರಿತು ಎಲೈ ಮನಸ್ಸೆ ಕೆಳಗೆ ಹೇಳುವ ಪ್ರಕಾರವಿದ್ದರೆ ಸಂಸಾರಯೋಗದಲ್ಲಿರು ಇಲ್ಲವಾದರೆ ಸಮಾಧಿಯೋಗದಲ್ಲಿ ಇರುಎಂದು ಹೇಳುತ್ತಾನೆ. ಅದು ಹೇಗೆಂದರೆ:-ಮುಂದುಗಡೆ ಸಂಗೀತ ತಾಳಮೃದಂಗ ಮೊದಲಾದುವು ಎರಡು ಪಾರ್ಶ್ವದಲ್ಲು ಸರಸ ಕವಿತ್ವವನ್ನು ಹೇಳುವ ಕವೀಶ್ವರರು ಹಿಂದುಗಡೆ ಕಂಕಣ ಝುಣತ್ಕಾರ ಮಾಡಿಕೊಂಡು ಚಾಮರಹಾಕುತ್ತಿರುವ ಚಕೋರಾಕ್ಷಿಯರು ಈರೀತಿಯಾದ ವೈಭೋಗವಿದ್ದರೆ ಸಂಸಾರ ರಸಾಸ್ವಾದದಲ್ಲಿ ಶ್ರಮಿಸು ಇಲ್ಲವಾದರೆ ಇಂದ್ರಿಯಾರ್ಥ ಪರಿಜ್ಞಾನಾಭಾವವಾದ ಸಮಾಧಿಯೋಗವನ್ನು ಆಶ್ರಯಿಸು ಎಂದು ತಾತ್ಪರ್ಯ. ॥ ಮಂದಾಕ್ರಾಂತಾ ವೃತ್ತಂ ॥ ಲಕ್ಷಣಂತೂಕ್ತಂ.

ಶ್ಲೋ॥ಪ್ರಾಪ್ತಾಶ್ರಿಯಸ್ಸಕಲಕಾಮದುಘಾಸ್ತತಃಕಿಂನ್ಯಸ್ತಂ
ಪದಂಶಿರಸಿವಿದ್ವಿಷತಾಂತತಃಕಿಂ । ಸಂಪಾದಿತಾಃಪ್ರ

ಣಾಯಿನೋವಿಭವೈಸ್ತತಃಕಿಂಕಲ್ಪಸ್ಥಿತಾಸ್ತನುಭೃ
ತಾಂತನವಸ್ತತಃಕಿಂ ॥ ೬೭ ॥

ಟೀಕು॥ ಸಕಲಕಾಮದುಘಾ-ಸಕಲ-ಸಮಸ್ತವಾದ, ಕಾಮ- ಇಷ್ಟಾರ್ಥ ವನ್ನು, ದುಘಾಃ - ಕೊಡುತ್ತಿರುವ, ಶ್ರಿಯಃ - ಐಶ್ವರ್ಯಗಳು, ಪ್ರಾಪ್ತಾಃ-ಹೊಂದಲ್ಪಟ್ಟವು, ತತಃ- ಅನಂತರದಲ್ಲಿ, ಕಿಂ-ಏನು ಪ್ರಯೋಜನ, ತನುಭೃತಾಂ-ತನು-ಶರೀರವನ್ನು, ಭೃತಾಂ-ನರಿಸಿದ ಪ್ರಾಣಿಗಳಿಗೆ, (ಅಥವಾ ಮನುಷ್ಯರಿಗೆ) ವಿದ್ವಿಷತಾಂ ಶತ್ರುಗಳ, ಸಿರಸಿ-ತಲೆಯಮೇಲೆ, ಪದಂ- ಪಾದವು, ನ್ಯಸ್ತಂ-ಇಡಲ್ಪಟ್ಟಿತು, ತತಃ ಅನಂತರದಲ್ಲಿ, ಕಿಂ-ಏನುಮಾಡತಕ್ಕದ್ದು, ವಿಭವೈಃ-ಐಶ್ವರ್ಯಗಳಿಂದ, ಪ್ರಣಯಿನಃ-ಮಿತ್ರರು, ಸಂಪಾದಿತಾಃ- ಸಂಪಾದಿಸಲ್ಪಟ್ಟರು, ತತಃ-ಅನಂತರದಲ್ಲಿ, ಕಿಂ-ಏನು, ತನುಭೃತಾಂ-ಮನುಷ್ಯರುಗಳ, ತನವಃ-ಶರೀರಗಳು, ಕಲ್ಪಸ್ಥಿತಾಃ-ಕಲ್ಪಾಂತವಾಗಿ ಇರುವುಗಳಾದರೆ, ತತಃ-ಅನಂತರದಲ್ಲಿ, ಕಿಂ-ಏನು ಫಲವು ॥೬೭॥

ತಾತ್ಪರ್ಯ—ಈ ಶ್ಲೋಕದಲ್ಲಿ ಐಶ್ವರ್ಯಾದಿಗಳು ಯಾವದೂ ಪ್ರಯೋಜನ ಕರವಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ:— ಮನುಷ್ಯರಿಗೆ ಕಾಮಧೇನುವಿನಂತೆ ಐಶ್ವರ್ಯವಿದ್ದರೆ ಆಮೇಲೆ ಮಾಡುವದೇನು ಶತ್ರುಗಳನ್ನು ಪಾದಾಕ್ರಾಂತರನ್ನಾಗಿ ಮಾಡಿಕೊಂಡು ಆಮೇಲೆ ಏನು ಮಾಡುವದು ಧನದಿಂದ ಮಿತ್ರರನ್ನು ಸಂಪಾದಿಸಿ ಮಾಡುವದೇನು ಕಲ್ಪಾಂತವಾಗಿ ಶರೀರ ಯಿಟ್ಟುಕೊಂಡಿದ್ದು ಏನುಫಲ ಬ್ರಹ್ಮಾನುಸಂಧಾನ ಮಾಡುವದೆ ಫಲವೆಂದು ಭಾವವು. ಮನುಷ್ಯನು ಚತುರ್ದಶ ವಿದ್ಯಗಳನ್ನು ಹೊಂದಿದಾಗ್ಯೂ ಹೆಚ್ಚಾದ ಧನಸಂಪಾದನೆ ಮಾಡಿದಾಗ್ಯೂ ಬಹುಕಾಲ ಬದುಕಿ ಇದ್ದಾಗ್ಯೂ ಜನನ ಮರಣದ ದುಃಖವು ತಪ್ಪುವದಿಲ್ಲ ಆದ್ದರಿಂದ ಬ್ರಹ್ಮಾನುಸಂಧಾನದಿಂದ ಕೃತಾರ್ಥರಾಗಬೇಕೆಂದು ತಾತ್ಪರ್ಯ. ॥೬೭॥

ಶ್ಲೋ॥ ಭಕ್ತಿರ್ಹರೇಮರಣಜನ್ಮಭಯಂಹೃದಿಸ್ಥಂಸ್ನೇಹೋನ
ಬಂಧುಷುನಮನ್ಮಥಜಾವಿಕಾರಾಃ । ಸಂಸರ್ಗದೋಷ
ರಹಿತಾವಿಜನಾವನಾಂತಾವೈರಾಗ್ಯಮಸ್ತಿಕಿಮಿತಃಪರ
ಮರ್ಥನೀಯಂ ॥ ೬೮ ॥

ಟೀ|| ಹೇ ಚೇತಃ-ಎಲೈ ಮನಸ್ಸೇ, ಹರೌ-ವಿಷ್ಣುವಿನಲ್ಲಿ, ಭಕ್ತಿಃ-ಭಕ್ತಿಯು, ಸ್ಥಾತವ್ಯಾ-ಇರತಕ್ಕದ್ದು, ಕಿಂಚ-ಇಷ್ಟುಮಾತ್ರವೇ ಅಲ್ಲ, ಮರಣಜನ್ಮಭಯಂ-ಮರಣ-ಸಾಯುವಿಕೆಯು, ಜನ್ಮ-ಹುಟ್ಟುವದರ, ಭಯಂ-ಭೀತಿಯನ್ನು, ಹೃದಿ-ಮನಸ್ಸಿನಲ್ಲಿ, ಕರ್ತವ್ಯಂ-ಮಾಡತಕ್ಕದ್ದು, ಸ್ನೇಹಂ-ವಿಶ್ವಾಸವು ಬಂಧುಷು-ಬಂಧುಜನಗಳಲ್ಲಿ, ನಕಾರ್ಯಃ-ಮಾಡತಕ್ಕದ್ದಲ್ಲ, ಮನ್ಮಥಜಾಃ-ಮನ್ಮಥ-ಮನ್ಮಥನಿಂದ, ಜಾಃ-ಹುಟ್ಟಿದ, ವಿಕಾರಾಃ-ಕಾಮತಂತ್ರಗಳು, ನಕಾರ್ಯಾಃ-ಮಾಡತಕ್ಕದ್ದಲ್ಲ, ಸಂಸರ್ಗದೋಷರಹಿತಾಃ-ಸಂಸರ್ಗ-ಸಂಗದ, ದೋಷ-ದೋಷದಿಂದ, ರಹಿತಾಃ- ಬಿಡಲ್ಪಟ್ಟಿರುವ, ವಿಜನಾಃ- ಜನರಹಿತವಾದ, ವನಾಂತಾಃ ಅರಣ್ಯಭೂಮಿಗಳು, ಸೇವ್ಯಾಃ ಸೇವಿಸುವದಕ್ಕೆ ಯೋಗ್ಯಗಳು, ವೈರಾಗ್ಯಂ ವೈರಾಗ್ಯವು, ಅಸ್ತಿ-ಇದೆ, ಅತಃಪರಂ ಅದಕ್ಕಿಂತಲೂ, ಅರ್ಥನೀಯಂ-ಯೋಚಿಸತಕ್ಕದ್ದು, ಕಿಂ-ಏನು ಇದೆ ||೬೮||

ತಾತ್ಪರ್ಯ—ಈ ಶ್ಲೋಕದಲ್ಲಿ ದೈವಭಕ್ತಿಯನ್ನು ವೈರಾಗ್ಯವನ್ನು ಸಹ ಹೇಳುತ್ತಾನೆ. ಅದು ಹೇಗಂದರೆ:—ಜಗಜ್ಜನ್ಮಾದಿ ಕಾರಣನಾದ ಪಾಪಪರಿಹಾರಕನಾದ ವಿಷ್ಣುವಿನಲ್ಲಿ ಭಕ್ತಿಯನ್ನು ಇಡಬೇಕು ಜನನ ಮತ್ತು ಮರಣಭಯವನ್ನು ಮನಸ್ಸಿನಲ್ಲಿ ಇಡಬೇಕು ಅಂದರೆ ಜನನಮರಣಕ್ಕೆ ಅಂಜಿ ಅವು ಉಂಟಾಗದಂತೆ ಮಾಡಿಕೊಳ್ಳುವವುಪಾಯಗಳನ್ನು ಮಾಡಿಕೊಳ್ಳಬೇಕು ಬಂಧುಜನಗಳು ತನಗೆ ಆಗುತ್ತಾರೆಂದು ಅವರಲ್ಲಿ ವಿಶ್ವಾಸವನ್ನು ಮಾಡಬಾರದು ಅಂದರೆ ತಾನು ಮುಕ್ತನಾಗುವ ದಾರಿಯನ್ನು ಮಾಡಿಕೊಳ್ಳಬೇಕು ಅನಂಗದಿಂದ ಹುಟ್ಟಿದ ವಿಷಯಾವಿಭೋಗದ ಆಶೆಯನ್ನು ಬಿಡಬೇಕು ವಿಜನವಾಗಿ ಇರುವ ವನಭೂಮಿಯಲ್ಲಿ ವಾಸಮಾಡಿ ವೈರಾಗ್ಯವನ್ನು ಸಾಧಿಸಬೇಕು ಮನುಷ್ಯನಿಗೆ ಇಂತಃ ಪರವೆಂದರೆ ಇದಕ್ಕಿಂತಲು ಆಗಬೇಕಾದ ಕಾರ್ಯವೇನು ಇರುವದು ಅನಂಗವ್ಯಾಪಾರದಲ್ಲಿ ಮನುಷ್ಯನು ಪರತಂತ್ರನಾಗುವದರಿಂದ ಶ್ರೇಯಸ್ಸಿಗೆ ವಿಘ್ನ ಉಂಟಾಗುವದು ಆದ್ದರಿಂದ ವನಗಗಳ ಅಂದರೆ ಪುಣ್ಯಾರಣ್ಯಗಳಲ್ಲಿ ತಪಸ್ಸುಮಾಡುವದು ಮೇಲೆಂದುಭಾವವು.

ಶ್ಲೋ|| ತಸ್ಮಾದನಂತಮಜರಂಪರಮಂ ವಿಕಾಸಿ ತದ್ಬ್ರಹ್ಮ
ಚಿಂತಯ ಕಿಮೇಭಿರಸದ್ವಿಕಲ್ಪೈಃ | ಯಸ್ಯಾನುಷಂಗಿ

ಣಾಇಮೇಭುವನಾಧಿಪತ್ಯಭೋಗಾದಯಃಕೃಪಣಲೋ
ಕಮತಾಭವಂತಿ ॥ ೬೯ ॥

ಟೀಕು॥ ತಸ್ಮಾತ್ ಆಕಾರಣದೆಸೆಯಿಂದ, ಅನಂತಂ- ನಾಶರಹಿತವಾದ, ಅಜರಂ-ಜರಾವಸ್ಥೆಯಿಲ್ಲದೆ ಇರುವ, (ಅಥವಾ ಮುದುಕತನವಿಲ್ಲದೆ ಇರುವ) ಪರಮಂ-ಉತ್ಕೃಷ್ಟವಾದ, ಪ್ರಕಾಶಿ-ಪ್ರಕಾಶಿಸುತ್ತಲಿರುವ ತತ್ ಆ ಪ್ರಸಿದ್ಧವಾದ, ಬ್ರಹ್ಮ-ಪರಬ್ರಹ್ಮವಸ್ತುವನ್ನು, ಚಿಂತಯ-ಧ್ಯಾನಿಸು. ಏಭಿಃ- ಯಾವ ಕ್ರಿಯಮಾಣಗಳಾದ, ಅಸದ್ವಿಕಲ್ಪೈಃ ಅಸತ್ಯಸಂಕಲ್ಪಗಳಿಂದ, ಕಿಂ- ಏನು ಪ್ರಯೋಜನ, ಯಸ್ಯ- ಯಾವ ಪರಬ್ರಹ್ಮನಿಗೆ, ಅನುಷಂಗಿಣಃ- ಸಂಬಂಧಿಸಿ ಇರುವ, ಇಮೇ ಪ್ರಸಿದ್ಧವಾದ, ಭುವನಾಧಿಪತ್ಯಭೋಗಾದಯಃ ಭುವನ-ಲೋಕಗಳ, ಆಧಿಪತ್ಯ-ಸ್ವಾಮಿತ್ವದಿಂದ ಉಂಟಾದ, ಭೋಗಾದಯಃ-ಸುಖಾದಿಗಳು, ಕೃಪಣಲೋಕಮತಾಃ-ಕೃಪಣಲೋಕ-ತುಚ್ಛವಾದ ಜನಗಳಿಗೆ, ಮತಾಃ- ಸಮ್ಮತವಾದವುಗಳು, (ಅಥವಾ ಇಷ್ಟವಾದವುಗಳು) ಭವಂತಿ-ಆಗುತ್ತವೆ |೬೯|

ತಾತ್ಪರ್ಯ—ಪ್ರಪಂಚವೆಲ್ಲವೂ ನಶ್ವರವಾದದ್ದು ಆದ್ದರಿಂದ ಪರಬ್ರಹ್ಮಚಿಂತನೆಯನ್ನು ಮಾಡಬೇಕೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ;— ಬ್ರಹ್ಮಾನುಸಂಧಾನವೆ ಮನುಷ್ಯನಿಗೆ ಮುಖ್ಯವೆಂದು ಹೇಳಿರುವದರವೆಸೆಯಿಂದ ಅನಂತನಾಗಿಯೂ ಪರಂಜ್ಯೋತಿಸ್ವರೂಪನಾಗಿಯೂ ನಿತ್ಯನಾಗಿಯೂ ಇರುವ ಪರಮಾತ್ಮನನ್ನು ಧ್ಯಾನಿಸು ಈ ಅಸ್ಥಿರಗಳಾದ ಕಾರ್ಯಗಳಿಂದಲು ಮತ್ತು ಅಂಥಾ ಸಂಕಲ್ಪಗಳಿಂದಲೂ ಏನೂ ಪ್ರಯೋಜನವಿಲ್ಲ ಪರಬ್ರಹ್ಮನನ್ನು ಅನುವರ್ತಿಸಿಕೊಂಡಿರುವ (ಅಂದರೆ ಪರಬ್ರಹ್ಮನ) ಇಚ್ಛಾ ವಶಾತ್ಯಿಂದ ಸಸಸಮೃದ್ಧಿಗಳಾದ ತ್ರೈಲೋಕಾಧಿಪತ್ಯವೇ ಮೊದಲಾದ ಭೋಗಗಳು ತುಚ್ಛರಾದ ಜನಗಳಿಗೆ ಸಮ್ಮತವಾದದ್ದು ಆಗುತ್ತವೆ. ಆ ಬ್ರಹ್ಮವಿಚಾರಪರನಾದವನಿಗೆ ತ್ರಿಲೋಕಾಧಿಪತ್ಯದಿಂದ ಉಂಟಾಗುವಭೋಗಗಳು ತೃಣಪ್ರಾಯವೆಂದು ಮನಸ್ಸನ್ನು ಕುರಿತು ಹೇಳಿದನೆಂದು ಭಾವವು.

ಶ್ಲೋ॥ ಪಾತ್ರಾಳಮಾವಿಶಸಿಮಾಸಿನಭೋವಿಲಂಘ್ಯಬ್ರಹ್ಮಂಡಲಂ
ಭ್ರಮಸಿಮಾನಸಚಾಪಲೇನ । ಭ್ರಾಂತ್ರಾಪಿಜಾತುವಿ

ವಿಮಲಂಕಥಮಾತ್ಮನೀನಂನಬ್ರಹ್ಮಸಂಸ್ಮರಸಿನಿರ್ವೃತಿ
ಮೇಷಿಯೇನ ॥೨೦॥

ಟೀಕು ಹೇಮನಃ ಎಲೈ ಮನಸ್ಸೇ, ಭ್ರಾಂತ್ಯಾ- ಭ್ರಾಂತಿಯಿಂದ, ಪಾತಾಳಂ- ನಾಗಲೋಕವನ್ನು, ವಿಶಸಿ- ಪ್ರವೇಶಿಸುತ್ತೀ, ನಭಃ- ಸುರವರ್ತ್ಮವನ್ನು, (ಅಥವಾ ಆಕಾಶವನ್ನು) ವಿಲಂಘ್ಯ- ದಾಟಿ, ದಿಙ್ಮಂಡಲಂ ದಿಗಂತವನ್ನು. ಚಾಪಲೇನ ಅತಿಚಪಲದಿಂದ, ಭ್ರಮಸಿ- ತಿರುಗುತ್ತೀಯೆ, ಜಾತು- ಒಂದಾನೊಂದು ಕಾಲದಲ್ಲಿ, ವಿಮಲಂ- ನಿರ್ಮಲವಾದ, ಆತ್ಮನೀನಂ- ಸುಖಸ್ವರೂಪವಾದ, ಪರಬ್ರಹ್ಮನನ್ನು, ನಸ್ಮರಸಿ- ಸ್ಮರಣೆ ಮಾಡಲಿಲ್ಲ. ಯೇನ- ಯಾವ ಕಾರಣದಿಂದ, ನಿರ್ವೃತಿಂ- ಮೋಕ್ಷವನ್ನು, ಏಷಿ ಹೊಂದುತ್ತೀಯ ॥೨೦॥

ತಾತ್ಪರ್ಯ—ಮೊದಲು ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಈ ಶ್ಲೋಕದಲ್ಲಿ ಪ್ರಕಾರಾಂತರದಿಂದ ಹೇಳುತ್ತಾನೆ. ಅದು ಹೇಗಂದರೆ;—ಎಲೈ ಮನಸ್ಸೇ ಆಸೆಯಿಂದ ಪಾತಾಳಲೋಕಕ್ಕೆ ಹೋಗುತ್ತೀ, ಮತ್ತ್ಯಾಕಾಶಕ್ಕೆ ಹಾರಿಹೋಗುತ್ತೀ, ದಿಗಂತವಾಗಿ ಬಹುದೂರ ಹೋಗುತ್ತೀ ಹೀಗೆ ಭೂಪಾತಾಳ ನಭೋಮಂಡಲ ಪರ್ಯಂತವಾಗಿ ವಿಶ್ರಾಂತಿಯಿಲ್ಲದೆ ತಿರುಗುತ್ತಿದ್ದೀ ಒಂದಾನೊಂದು ಕಾಲದಲ್ಲಿ ಭ್ರಾಂತಿಯಿಂದಲಾದರೂ ಪರಬ್ರಹ್ಮನನ್ನು ಸ್ಮರಿಸಲಿಲ್ಲ ಹೀಗಿರುವಲ್ಲಿ ಯಾತರಿಂದ ನೀನು ಕೃತಾರ್ಥನಾಗಿ ಮೋಕ್ಷಸಾಮ್ರಾಜ್ಯವನ್ನು ಹೊಂದುವದು? ಅಂದರೆ ಈರೀತಿಯಿಂದ ಚಾಪಲ್ಯವನ್ನು ಬಿಟ್ಟು ನಿಶ್ಚಿಂತೆಯಾಗಿ ಪರಬ್ರಹ್ಮನನ್ನು ಧ್ಯಾನಿಸಿ ಮೋಕ್ಷ ಸಾಮ್ರಾಜ್ಯವನ್ನು ಹೊಂದುತ್ತಾನೆಂಬುವದಾಗಿ ಹೇಳಿದನೆಂದು ಭಾವವು. ॥೨೦॥

ಮನಸ್ಸಂಬೋಧವರ್ಣನ ಪದ್ಧತಿಃಸಮಾಪ್ತಾ

---

## ನಿತ್ಯಾನಿತ್ಯವಸ್ತು ವಿಚಾರ ಪದ್ಧತಿ ಪ್ರಾರಂಭವು

ಶ್ಲೋ॥ ಕಿಂವೇದೈಸ್ಸ್ಮೃತಿಭಿಃ ಪುರಾಣಪಠನೈಃ ಶಾಸ್ತ್ರೈರ್ಮ
ಹಾವಿಸ್ತರೈಸ್ಸ್ವರ್ಗಗ್ರಾಮಕುಟೀನಿವಾಸಫಲ
ದೈಃಕರ್ಮಕ್ರಿಯಾವಿಭ್ರಮೈಃ । ಮುಕ್ತ್ವೈಕಂಭವ

ದುಃಖಭಾರರಚನಾವಿಧ್ವಂಸಕಾಲಾನಲಂ ಸ್ವಾತ್ಮಾನಂ
ದಪದಪ್ರವೇಶಕಲನಂ ಶೇಷೈರ್ವಣಿಗ್ವೃತ್ತಿಭಿಃ ॥೭೧॥

ಟೀಕು ॥ ವೇದೈಃ - ಋಗ್ಯಜುಸ್ಸಾಮಾಥರ್ವಣವೇದಗಳಿಂದ, ಕಿಂ - ಏನು ಪ್ರಯೋಜನ. ಸ್ಮೃತಿಭಿಃ - ಮನ್ವಾದಿ ಸ್ಮೃತಿಗಳಿಂದ, ಕಿಂ - ಯಾವ ಪ್ರಯೋಜನ. ಪುರಾಣಪಠನೈಃ - ಪುರಾಣ- ಅಷ್ಟಾದಶ ಪುರಾಣಗಳ ಮತ್ತು ಉಪಪುರಾಣಗಳ, ಪಠನೈಃ- ಓದೋಣದರಿಂದ ಕಿಂ- ಏನು ಪ್ರಯೋಜನ, ಸ್ವರ್ಗಗ್ರಾಮ ಕುಟೀನಿವಾಸಫಲದೈಃ- ಸ್ವರ್ಗಗ್ರಾಮ - ಸ್ವರ್ಗಪಟ್ಟಣದ, ಕುಟೀ- ಬ್ರಾಹ್ಮಣಾದಿ ವರ್ಣದವರ ಗೃಹಗಳಲ್ಲಿ, ನಿವಾಸ- ವಾಸಮಾಡತಕ್ಕ ಫಲದೈಃ- ಫಲದಾಯಕವಾದ, ಕ್ರಿಯಾವಿಭ್ರಮೈಃ ಕ್ರಿಯಾ- ಸ್ನಾನಸಂಧ್ಯಾದಿಕ್ರಿಯಗಳ, ವಿಭ್ರಮೈಃ - ಭ್ರಾಂತಿಗಳಿಂದ, ಅಥವಾ (ವಿಲಾಸಗಳಿಂದ) ಕಿಂ - ಏನು ಪ್ರಯೋಜನವು, ಭವದುಃಖಭಾರರಚನಾವಿಧ್ವಂಸಕಾಲಾನಲಂ- ಭವ - ಸಂಸಾರದ ದೆಸೆಯಿಂದ ಉಂಟಾದ, ದುಃಖ- ದುಃಖದ, ಭಾರ - ಅತಿಶಯದ, ರಚನಾ - ನಿರ್ಮಾಣದ, ವಿಧ್ವಂಸ ನಾಶಮಾಡುವದರಲ್ಲಿ, ದಾವಾನಲಂ- ದವಾಗ್ನಿ ಸ್ವರೂಪವಾದ, ಸ್ವಾತ್ಮಾನಂದ ಪದಪ್ರವೇಶಕಲನಂ- ಸುಸಮೀಚೀನವಾದ, ಆತ್ಮಾನಂದ- ಬ್ರಹ್ಮಾನಂದದ, ಪದ- ಸ್ಥಾನದ, ಪ್ರವೇಶ- ಪ್ರವರ್ತನದ, ಕಲನಂ- ಕಾರ್ಯವನ್ನು, ಮುಕ್ತ್ವಾ ಬಿಟ್ಟು, ಶೇಷೈಃ ಮಿಕ್ಕ ವಣಿಗ್ವೃತ್ತಿಭಿಃ- ವರ್ತಕವ್ಯಾಪಾರಗಳಿಂದ, ಕಿಂ - ಏನು ಪ್ರಯೋಜನವು ; ಪ್ರಯೋಜನವಿಲ್ಲ. ॥ ೭೧ ॥

ತಾತ್ಪರ್ಯ—ವೇದಾಧ್ಯಯನ ಸ್ಮೃತಿಪರ್ಯಾಲೋಚ ಶಾಸ್ತ್ರಪಠನ ಪುರಾಣ ಶ್ರವಣಾದಿಗಳಿಂದ ಏನೂ ಪ್ರಯೋಜನವಿಲ್ಲ ಮತ್ತೇನಂದರೆ ಶ್ರವಣ ಮನನ ನಿಧಿಧ್ಯಾಸಗಳಿಂದ ಆತ್ಮಾನುಭವವನ್ನು ಮಾಡಬೇಕೆಂಬುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗಂದರೆ;—ಋಗ್ಯಜುಸ್ಸಾಮಾಥರ್ವಣ ವೇದಗಳ ಅಭ್ಯಾಸದಿಂದ ಪ್ರಯೋಜನವಿಲ್ಲ ಅಷ್ಟಾದಶ ಪುರಾಣ ಶ್ರವಣದಿಂದ ಪ್ರಯೋಜನವಿಲ್ಲ ಮನ್ವಾದಿ ಸ್ಮೃತಿಗಳನ್ನು ತಿಳಿಯುವದರಿಂದ ಪ್ರಯೋಜನವಿಲ್ಲ. ಆರುಶಾಸ್ತ್ರಗಳನ್ನು ಓದುವದರಿಂದ ಪ್ರಯೋಜನವಿಲ್ಲ. ಸ್ವರ್ಗಾದಿ ಭೋಗಗಳನ್ನು ಉಂಟುಮಾಡುವ ಕರ್ಮಗಳೆಂದರೆ ಸ್ನಾನಸಂಧ್ಯಾಧ್ಯಯನ ಯಜ್ಞಾದಿ ಕರ್ಮಗಳಿಂದ ಪ್ರಯೋಜನವಿಲ್ಲ. ಸಂಸಾರ ದುಃಖದವಾಗ್ನಿ ಸ್ವರೂಪವಾದ ಬ್ರಹ್ಮಾನಂದಾನುಸಂಧಾ

ನವನ್ನು ಬಿಟ್ಟು ಮಿಕ್ಕವಾಪಾರಗಳೆಲ್ಲವು ವರ್ತಕರ ವ್ಯಾಪಾರದಂತೆ ಇರು ವವು ಅದ್ದರಿಂದ ಈ ಕಾರ್ಯಗಳನ್ನು ಮಾಡದೆ ಬ್ರಹ್ಮಾನುಸಂಧಾನ ಮಾಡಿ ರೆಂದು ತಾತ್ಪರ್ಯ. ||೭೧||

ಶ್ಲೋ|| ಯತೋಮೇರುಶ್ಶ್ರೀಮಾನ್ನಿಪತತಿಯುಗಾಂತಾಗ್ನಿ
ವಳಿತಸ್ಸಮುದ್ರಾಶ್ಶುಷ್ಯಂತಿಪ್ರಚುರಮಕರಗ್ರಾಹ
ನಿಲಯಾಃ । ಧರಾಗಚ್ಛತ್ಯಂತಂಧರಣಿಧರಪಾದೈ
ರಪಿಧೃತಾಶರೀರೇಕಾವಾರ್ತಾ ಕರಿಕಲಭಕರ್ಣಾಗ್ರ
ಚಪಲೇ ||೭೨||

ಟೀಕು || ಯತಃ - ಯಾವ ಕಾರಣದ ದೆಸೆಯಿಂದ, ಶ್ರೀಮಾನ್ - ಸಂಪ ದ್ಯುಕ್ತವಾದ, ಮೇರುರಪಿ - ಮೇರು ಪರ್ವತವು, ಯುಗಾಂತಾಗ್ನಿವಳಿತಃ- ಯುಗ - ಕೃತತ್ರೇತಾದಿ ಯುಗಗಳ ಅಂತ ಕೊನೆಯಲ್ಲಿ, ಅಗ್ನಿ - ಯಜ್ಞೇ ಶ್ವರನಿಂದ, ವಳಿತಸ್ಸನ್- ಸುತ್ತಲ್ಪಟ್ಟವನಾಗಿ, ನಿಪತತಿ- ಬಿದ್ದು ಹೋಗುತ್ತದೆ ಪ್ರಚುರಮಕರಗ್ರಾಹನಿಲಯಾಃ - ಪ್ರಚುರ - ಅಧಿಕವಾದ, ಮಕರ ಮೊಸಳೆ ಗಳು, ಗ್ರಾಹ- ಇತರ ಜಲಜಂತುಗಳು ಇವುಗಳಿಗೆ. ನಿಲಯಾಃ-ಸ್ಥಾನಗಳ ದ ಸಮುದ್ರಾಃ ಸಮುದ್ರಗಳು, ಶುಷ್ಯಂತಿ- ಶೋಷಿಸಿ ಹೋಗುತ್ತವೆ, ಧರಣಿ ಧರಪಾದೈಃ- ಧರಣಿಧರ- ಕುಲ ಪರ್ವತಗಳ, ಪಾದೈಃ- ಪ್ರತ್ಯಂತ, ಪರ್ವತಗ ಳಿಂದ. ಧೃತಾ- ಧರಿಸಲ್ಪಟ್ಟ, ಧರಾ- ಭೂಮಿಯು, ಅಂತಂ- ನಾಶವನ್ನು, ಗಚ್ಛತಿ ಹೊಂದುತ್ತದೆ, ಕರಿಕಲಭಕರ್ಣಾಗ್ರಚಪಲೇ- ಕರಿಕಲಭ-ಮರಿ ಆನೆ ಯ, ಕರ್ಣ ಕಿವಿಯ, ಅಗ್ರ-ಕೊನೆಯೋಪಾದಿಯಲ್ಲಿ, ಚಪಲೇ-ಚಂಚಲವಾದ, ಶರೀರೆ- ಈಶರೀರದಲ್ಲಿ, ಕಾವಾರ್ತಾ-ಹೇಳತಕ್ಕಮಾತು ಏನು ಇದೆ |೭೨|

ತಾತ್ಪರ್ಯ—ಪ್ರಪಂಚವೆಲ್ಲವು ಮಿಥ್ಯೆ, ಪರಬ್ರಹ್ಮನೇ ಸತ್ಯವೆಂಬುವದ ನ್ನು ಹೇಳುತ್ತಾನೆ. ಅದು ಹೇಗಂದರೆ;—ದೊಡ್ಡದಾದ ಮೇರುಪರ್ವತವು ಪ್ರಳಯಕಾಲದ ಬೆಂಕಿಯಿಂದ ಅಂದರೆ ಅಗ್ನಿಜ್ವಾಲೆಯಿಂ ಸುತ್ತಲ್ಪಟ್ಟಿರುವು ದರಿಂದ ಯಾವಕಾರಣದಿಂದ ಬಿದ್ದುಹೋಗುತ್ತೊ, ಮತ್ತು ಪ್ರಳಯಾಗ್ನಿ ಜ್ವಾಲೆಯಿಂದ ಕಚ್ಛಪಾದಿ ಅನೇಕ ಜಲಚರಗಳುಳ್ಳ ಸಮುದ್ರವು ಒಣಗಿ ಹೋಗಿ ಶೋಷಿಸಿಹೋಗುತ್ತೊ; ಹಿಮಾಚಲ ವಿಂಧ್ಯಾಚಲಮುಂತಾದ ಸಪ್ತ ಕುಲಪರ್ವತಗಳಿಗೆ ಪ್ರತ್ಯಂತ ಪರ್ವತಗಳಿಂದ ಕೂಡಿಕೊಂಡಿರುವ ಭೂಮಿ

ಯುಕೂಡ ನಾಶವನ್ನು ಹೊಂದುತ್ತೇ, ಆಕಾರಣದ ದೆಸೆಯಿಂದ ಮರಿ ಆನೆಗಳ ಕಿವಿಯುಕೊನೆ ಅಲ್ಲಾಡುವಹಾಗೆ ಅತಿಚಂಚಲವಾದ ಈ ಶರೀರದ ವಿಷಯದಲ್ಲಿ ಹೇಳುವದೇನು ಅಂದರೆ ಇಂಥಾ ದೊಡ್ಡ ವಸ್ತುಗಳಿಗೆ ಕಾಲಾಂತರದಲ್ಲಿ ನಾಶಬರುವಾಗ್ಯೆ ಇನ್ನು ಅಲ್ಪವಾದ ಶರೀರಕ್ಕೆ ನಾಶಬರುವದು ಹೇಳುವದು ಏನಿದೆ ಎಂದು ಭಾವವು. ಅಂದರೆ ಎಲ್ಲವು ನಾಶವಾದರು ಪರಬ್ರಹ್ಮವಸ್ತುಮಾತ್ರ ಯಾವಾಗ್ಯೂ ಶಾಶ್ವತವಾಗಿರುತ್ತೆಂದು ತಾತ್ಪರ್ಯ. ॥ಕಾವ್ಯಾರ್ಥಾಪತ್ತಿರಲಂಕಾರಃ ॥ ಕೈಮುತ್ಯೇನಾರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿರಿಷ್ಯತ ಇತಿಲಕ್ಷಣಾತ್ ॥೭೨॥

ಶ್ಲೋ॥ ಗಾತ್ರಂಸಂಕುಚಿತಂಗತಿರ್ವಿಗಳಿತಾಭ್ರಷ್ಟಾಚದಂತಾ
ವಳಿರ್ದೃಷ್ಟಿರ್ನಶ್ಯತಿವರ್ಧತೇಬಧಿರತಾವಕ್ತ್ರಂಚ
ಲಾಲಾಯತೇ । ವಾಕ್ಯಂನಾದ್ರಿಯತೇಚಬಾಂಧವಜ
ನೋಭಾರ್ಯಾನಶುಶ್ರೂಷತೇಹ ಕಷ್ಟಂಪುರುಷಸ್ಯ
ಜೀರ್ಣವಯಸಃ ಪುತ್ರೋಽಪ್ಯಮಿತ್ರಾಯತೇ ॥ ೭೩ ॥

ಟೀಕು॥ ಗಾತ್ರಂ-ಶರೀರವು, ಸಂಕುಚಿತಂ-ಸಂಕೋಚವಾದದ್ದು, ಅಭೂತ್- ಆಯಿತು, ಗತಿಃ- ಸಂಚಾರವು, ವಿಗಳಿತಂ ನಷ್ಟವಾದದ್ದು, ಅಭೂತ್- ಆಯಿತು, ಬಧಿರತಾ-ಕಿವಡು, ವರ್ಧತೇ-ಹೆಚ್ಚಾಗುತ್ತದೆ, ದಂತಾವಳಿಃ ದಂತ-ಹಲ್ಲುಗಳ, ಆವಳಿಃ-ಪಜ್ತೆಯು, ಭ್ರಷ್ಟಂಚ ಬಿದ್ದುಹೋದಂಥಾವುಗಳು ಆಗುವವು. ಬಾಂಧವಜನಃ ಬಂಧುಜನಗಳು, ವಾಕ್ಯಂ- ಮಾತನ್ನು, ನಾದ್ರಿಯತೇ- ಅಂಗೀಕರಿಸುವದಿಲ್ಲ, ವಕ್ತ್ರಂಚ- ಮುಖವೂ ಕೂಡ, ಲಾಲಾಯತೇ- ಜೊಲ್ಲುನೀರಿನಿಂದ ಕೂಡಿದ್ದು, ಭವತಿ- ಆಗುತ್ತೆ, ಭಾರ್ಯಾ- ಹೆಂಡತಿಯು, ನಶುಶ್ರೂಷತೇ-ಸೇವೆಮಾಡುವದಿಲ್ಲ ಜೀರ್ಣವಯಸಃ- ಜರಾವಸ್ಥೆಯನ್ನು, ಹೊಂದಿದ, ಪುರುಷಸ್ಯ-ಪುರುಷನಿಗೆ, ಪುತ್ರೋಽಪಿ- ಮಗನೂ ಕೂಡ, ಅಮಿತ್ರಾಯತೇ- ಶತ್ರುವಿನೋಪಾದಿಯಲ್ಲಿ ಆಚರಿಸುತ್ತಾನೆ ॥೭೩॥

ತಾತ್ಪರ್ಯ—ಮನುಷ್ಯರಿಗೆ ವೃದ್ಧಾಪ್ಯದಲ್ಲಿ ಉಂಟಾಗುವ ದುಃಖವನ್ನು ಎರಡು ಶ್ಲೋಕದಿಂದ ಹೇಳುತ್ತಾನೆ. ಅದು ಹೇಗಂದರೆ;—ಮನುಷ್ಯನಿಗೆ ವಾರ್ಧಿಕ್ಯದಲ್ಲಿ ಶರೀರವು ಸಂಕೋಚವಾಗುವದು ನಡೆಯುವದಕ್ಕೆ ಶಕ್ತಿ ಇರುವದಿಲ್ಲ ಹಲ್ಲುಗಳೆಲ್ಲ ಬಿದ್ದುಹೋಗುತ್ತವೆ. ಕಿವುಡತನವು ಹೆಚ್ಚು

ತಾತ್ತಬರುವನು ಬಂಧುಜನಗಳು ತನ್ನ ಮಾತು ಅಂಗೀಕರಿಸುವದಿಲ್ಲ ಬಳಿಯು ಯಲ್ಲಿ ಜೊಲ್ಲುಸುರಿಯುತ್ತಿರುವದು ಹೇಳುತ್ತಿ ನಿನಗೆ ಸೇವೆಯನ್ನು ಮಾಡು ವದಿಲ್ಲ. ಹಾಗನೂಕೂಡ ಶತ್ರುವಿನಂತೆ ಪುತ್ರನು ವಾಡುವನು ಆದ್ದರಿಂದ ಜೀರ್ಣವಯಸ್ಸಿನಲ್ಲಿ ಮನುಷ್ಯನು ಒದುಕುವದೆ ಬಹು ಕಷ್ಟವಾಗುವದು. ವಕ್ತ್ರೇ ಚಲಲಾಲಾಯತೇ ಎಂಬುವದರಿಂದ ॥ ಉಪಮಾಲಂಕಾರಃ ॥ ಸ್ವಭಾವೋಕ್ತ್ಯಲಂಕಾರಶ್ಚ. ॥೭೩॥

ಶ್ಲೋ॥ ವರ್ಣಂ ಸಿತಂ ಝಟಿತಿ ವೀಕ್ಷ್ಯ ಶಿರೋರುಹಾಣಾಂ ಸ್ಥಾನಂ ಜರಾಪರಿಭವಸ್ಯ ತದಾ ಪುಮಾಂಸಂ । ಆರೋಪಿತಾಸ್ಥಿಶತಕಂ ಪರಿಹೃತ್ಯ ಯಾಂತಿ ಚಂಡಾಲಕೂಪಮಿವ ದೂರತರಂ ತರುಣ್ಯಃ ॥ ೭೪ ॥

ಟೀಕು॥ ತರುಣ್ಯಃ-ಸ್ತ್ರೀಯರುಗಳು, ಶಿರೋರುಹಾಣಾಂ-ತಲೆ ಕೂದಲುಗಳ, ಸಿತಂ - ಶುಭ್ರವಾದ, ವರ್ಣಂ- ಬಣ್ಣವನ್ನು, ಝಟಿತಿ- ಜಾಗ್ರತೆಯಾಗಿ, ವೀಕ್ಷ್ಯ-ನೋಡಿ, ಜರಾಪರಿಭವಸ್ಯ-ಜರಾ-ವಾರ್ಧಕ್ಯಕಾಲದ, ಪರಿಭವಸ್ಯ-ಅವಮಾನಕ್ಕೆ, ಸ್ಥಾನಂ-ಆವಾಸಭೂತನಾದ, ಆರೋಪಿತಾಸ್ಥಿಶತಕಂ-ಆರೋಪಿತ- ನೋಡಲ್ಪಟ್ಟ, (ಅಥವಾ ತುಂಬಲ್ಪಟ್ಟ) ಅಸ್ಥಿ - ಮೂಳೆಗಳ, ಶತಕಂ ನೂರುಳ್ಳ, ಪುಮಾಂಸಂ-ಪುರುಷನನ್ನು, ಚಂಡಾಲಕೂಪಮಿವ- ಚಂಡಾಲ-ಅಂತ್ಯಜರ, ಕೂಪಮಿವ-ಭಾವಿಯೋಪಾದಿಯಲ್ಲಿ, ದೂರತರಂ-ಅತ್ಯಂ ದೂರವಾಗಿ, ಪರಿಹೃತ್ಯ-ಬಿಟ್ಟು, ಯಾಂತಿ-ಹೋಗುತ್ತಾರೆ, ॥೭೪॥

ತಾತ್ಪರ್ಯ-- ಸ್ತ್ರೀಯರುಗಳು ವೃದ್ಧರನ್ನು ನೋಡಿ ತಿರಸ್ಕಾರಮಾಡುವ ರೀತಿಯನ್ನು ಹೇಳುತ್ತಾನೆ. ಅದು ಹೇಗೆಂದರೆ:—ಯೌವನದಕಾಮಿನಿಯರು ಮೊದಲು ಪುರುಷನ ತಲೆಕೂದಲು ಬೆಳ್ಳಗಿರುವದನ್ನು ನೋಡಿ ಇವನು ಮುದುಕತನಕ್ಕೆ ಮನೆಯಾಗಿದ್ದಾನೆ. ಅಂದರೆ ಜರಾವಸ್ಥೆಯು ಅವನಲ್ಲಿ ಮನೆಮಾಗಿ ವಾಸಮಾಡುತ್ತಲಿದೆ ಎಂದು ತಿಳಿದು ಅನಂತರದಲ್ಲಿ ನೂರಾರು ಮೂಳೆಗಳನ್ನು ಹಾಕಿಇರುವ ಮಾದಿಗರ ಭಾವಿಯನ್ನೋಪಾದಿಯಲ್ಲಿ ದೂರವಾಗಿ ಹೋಗುತ್ತಾರೆ. ಆ ಭಾವಿಯು ಹೇಗೆ ಅಸಹ್ಯಕರವಾದದ್ದೋ ಹಾಗೆಯೇ ತಲೆನರೆತವನ್ನು ನೋಡಿ ಅವನ ಹತ್ತಿರಕ್ಕೆ ಬರುವದಿಲ್ಲ ಎಂದು ಭಾವವು. ॥ ಉಪಮಾಲಂಕಾರಃ ॥ ॥೭೪॥

ಶ್ಲೋ॥ಯಾವತ್ಸ್ವಸ್ಥಮಿದಂಶರೀರಮರುಜಂ ಯಾವಜ್ಜರಾ
ದೂರತೋಯಾವಚ್ಚೇಂದ್ರಿಯಶಕ್ತಿರಪ್ರತಿಹತಾಯಾ
ವತ್‌ಕ್ಷಯೋನಾಯುಷಃ । ಆತ್ಮಶ್ರೇಯಸಿತಾವದೇವ
ವಿದುಷಾಕಾರ್ಯಃಪ್ರಯತ್ನೋಮಹಾನ್‌ಸಂದೀಪ್ತೇಭವ
ನೇತುಕೂಪಖನನಂ ಪ್ರತ್ಯುದ್ಯಮಃಕೀದೃಶಃ ॥೭೫॥

ಟೀಕು॥ ಇದಂ-ಈ, ಶರೀರಂ-ಶರೀರವು, ಯಾವತ್-ಎಷ್ಟುಪರ್ಯಂತವು, ಅರುಜಂ-ರೋಗವಿಲ್ಲದೆ ಇರುವದಾಗಿ, ಸ್ವಸ್ಥಂ-ಸ್ವಸ್ಥವಾಗಿ ಇರುವದೋ, ಯಾವತ್-ಎಷ್ಟು ಪರ್ಯಂತವು, ಜರಾ-ಮುದುಕತನವು, ದೂರತಃ-ದೂರದಲ್ಲಿ ಇರೂವದೋ, ಯಾವತ್-ಎಷ್ಟರವರೆಗೆ, ಇಂದ್ರಿಯಶಕ್ತಿಶ್ಚ-ಇಂದ್ರಿಯ ಚಕ್ಷುರಾದಿ ಇಂದ್ರಿಯಗಳ, ಶಕ್ತಿಶ್ಚ-ಸಾಮರ್ಥ್ಯವೂ ಕೂಡ, ಅಪ್ರತಿಹತಾ ಸ್ಫುಟವಾಗಿರುವದೋ, ಯಾವತ್-ಎಷ್ಟರವರೆಗೆ, ಆಯುಷಃ-ಆಯುಸ್ಸಿಗೆ, ಕ್ಷಯಃ-ನಾಶವು, ನಾಸ್ತಿ-ಇಲ್ಲವೊ, ತಾವದೇವ-ಅಷ್ಟರೊಳಗಾಗಿಯು, ಆತ್ಮಶ್ರೇಯಸಿ-ಆತ್ಮ-ತನ್ನ, ಶ್ರೇಯಸಿ-ಶ್ರೇಯಸ್ಸಿನಲ್ಲಿ, ವಿದುಷಾ-ವಿದ್ವಾಂಸನಿಂದ, ಮಹಾನ್-ಅಧಿಕವಾದ, ಪ್ರಯತ್ನಃ-ಯತ್ನವು, ಕಾರ್ಯಃ-ಮಾಡತಕ್ಕದ್ದು, ಭವನೇ-ಮನೆಯು ಸಂದೀಪ್ತೇಸತಿ-ಹತ್ತಿಉರಿಯಲ್ಪಡುತ್ತಿರಲಾಗಿ, ಕೂಪಖನನಂಪ್ರತಿ-ಕೂಪ ಭಾವಿಯ, (ಅಥವಾ ಜಲಾಧಾರದ) ಖನನಂಪ್ರತಿ-ತೋಡೋಣವನ್ನು ಕುರಿತು, (ಅಥವಾ ನಿರ್ಮಾಣವನ್ನು ಕುರಿತು) ಉದ್ಯಮಃ-ಕೋರಿಕೆಯು. ಅಥವಾ ಪ್ರಯತ್ನವು, ಕೀದೃಶಃ ಎಂಥಾದ್ದೊ. ತಥಾ-ಹಾಗೆ. ಭವತಿ-ಆಗುತ್ತೆ. ॥೭೫॥

ತಾತ್ಪರ್ಯ.—ಮನುಷ್ಯನು ಇಂದ್ರಿಯಶಕ್ತಿ ಇರುವ ಕಾಲದಲ್ಲೇ ತನಗೆ ಶ್ರೇಯಸ್ಸು ಆಗುವ ಕಾರ್ಯಗಳನ್ನು ಮಾಡಿಕೊಳ್ಳಬೇಕೆಂಬುವದನ್ನು ಹೇಳುತ್ತಾನೆ. ಅದು ಹೇಗಂದರೆ; ಎಷ್ಟರೊಳಗೆ ಶರೀರ ಸ್ವಸ್ಥನಾಗಿ ಇರುವದೋ ರೋಗಾದ್ಯುಪದ್ರವಗಳು ಇಲ್ಲದೆ ಇರುವದೋ ಮತ್ತು ಸಂಚಾರಮಾಡುವ ಕಣ್ಣು ನೋಡುವದಕ್ಕೂ ಕೆಲಸಮಾಡುವದಕ್ಕೂ ಇಂದ್ರಿಯ ಶಕ್ತಿಯಿರುವದೋ, ಪೂರ್ಣವಯಸ್ಸು ಆಗಿರುವದೋ ಆಕಾಲದಲ್ಲೇ ತನಗೆ ಪರಗತಿ ಯಾಗುವದಕ್ಕೆ ಬೇಕಾದ ಪ್ರಯತ್ನವನ್ನು ಮಾಡಿಕೊಳ್ಳಬೇಕು ತನಗೆ ವಯಸ್ಸುಮುಗಿದು ವಾರ್ಧಿಕ್ಯದಲ್ಲಿ ಪ್ರಾಣನಿರ್ಯಾಣಸಮೀಪಿಸಿ ಇರುವಕಾಲದ

ಲ್ಲಿ ಮಾಡುವ ಪ್ರಯತ್ನಗಳು ಮನೆಗೆ ಬೆಂಕಿಬಿದ್ದ ಸಮಯಕಾಲದಲ್ಲಿಭಾವಿ ಯನ್ನು ತೋಡುವನ ಪ್ರಯತ್ನದಂತೆ ಆಗುವದು ಎಂದು ಭಾವವು. ||೭೫||

ಶ್ಲೋ|| ತಪಸ್ಯಂತಸ್ಸಂತಃಕಿಮಧಿನಿವಸಾಮಸ್ಸುರನದೀಂ
ಗುಣೋದಾರಾನ್ದಾರಾನುತಪರಿಚರಾಮಸ್ಸವಿನಯಂ
ಪಿಬಾಮಶ್ಶಾಸ್ತ್ರೌಘಾನುತವಿವಿಧಕಾವ್ಯಾಮೃತರಸಾ
ನ್ನವಿದ್ಮಃಕಿಂಕುರ್ಮಃಕತಿಪಯನಿಮೇಷಾಯುಷಿಜನೇ ||

ಟೀಕು|| ವಯಂ-ನಾವುಗಳು, ತಪಸ್ಯಂತಃಸಂತಃ-ತಪಸ್ಸನ್ನು ಮಾಡುವರಾಗಿ, ಸುರನದೀಂ-ದೇವಗಂಗೆಯನ್ನು ,(ಅಂದರೆ ದೇವಗಂಗೆಯತೀರದಲ್ಲಿ) ಅಧಿವಸಾಮಃಕಿಂ- ವಾಸಮಾಡೋಣವೇ, ಉತ- ಹಾಗಲ್ಲದೆ ಹೋದರೆ, ಗುಣೋದಾರಾನ್-ಗುಣ-ಸೌಶೀಲ್ಯಾದಿ ಗುಣಗಳಿಂದ, ಉದಾರಾನ್-ಉತ್ಕೃಷ್ಟರಾದ, ದಾರಾನ್-ಹೆಂಡತಿಯರನ್ನು, ಸವಿನಯಂ ಯಥಾತಥಾ- ವಿನಯದಿಂದ ಕೂಡೋಣ ಹೇಗೋ ಹಾಗೆ, ಪರಿಚರಾಮಃ- ಪರಿಚರ್ಯಮಾಡೋಣವೆ, ಉತ-ಹಾಗಲ್ಲದೆ ಹೋದರೆ, ಶಾಸ್ತ್ರೌಘಾನ್- ಶಾಸ್ತ್ರ- ತರ್ಕವ್ಯಾಕರಣಾದಿ ಶಾಸ್ತ್ರಗಳ, ಓಘಾನ್-ಸಮೂಹಗಳನ್ನು, ಪಿಬಾಮಃಕಿಂ ಪಾನಮಾಡೋಣವೆ (ಅಥವಾ ಅಭ್ಯಾಸಮಾಡೋಣವೆ) ಉತ-ಹಾಗಲ್ಲದೆಹೋದರೆ, ವಿವಿಧಕಾವ್ಯಾಮೃತರಸಾನ್-ಅಮೃತರಸಗಳನ್ನು, ಪಿಬಾಮಃ-ಪಾನಮಾಡೋಣವೆ (ಅಥವಾ ತಿಳಿಯೋಣ) ಕತಿಪಯನಿಮೇಷಾಯುಷಿ-ಕತಿಪಯ- ಕೆಲವುಗಳಾದ, ನಿಮೇಷಾಯುಷಿ ನಿಮೇಷ ಮಾತ್ರ ಆಯುಸ್ಸುಳ್ಳ, ಜನೇ- ಜನದಲ್ಲಿ, ಕಿಂಕುರ್ಮಃ - ಏನುಮಾಡೋಣ, ನವಿದ್ಮಃ-ತಿಳಿಯಲಾರೆವು. ||೭೬||

ತಾತ್ಪರ್ಯ—ಜನಗಳಿಗೆ ಇರುವ ಅಲ್ಪಾಯುಸ್ಸಿನಲ್ಲಿ ಯಾವ ಕೆಲಸವೂ ಮಾಡುವದಕ್ಕೆ ಆಗುವದಿಲ್ಲವೆಂಬುವದನ್ನು ಎರಡು ಶ್ಲೋಕದಿಂದ ಹೇಳುತ್ತಾನೆ. ಅದುಹೇಗಂದರೆ;- ಗಂಗಾತೀರದಲ್ಲಿ ತಪಸ್ಸನ್ನು ಮಾಡಿಕೊಂಡು ಇರೋಣ ಇಲ್ಲವಾದರೆ ಸುಗುಣ ಶಾಲಿನಿಯರಾದ ಅಂಗನಾಮಣಿಗಳನ್ನು ಮದುವೆಯಾಗಿ ಅವರಲ್ಲಿ ಸುಖಪಡೋಣ ಇಲ್ಲವಾದರೆ ತರ್ಕವ್ಯಾಕರಣಾದಿ ಶಾಸ್ತ್ರಗಳನ್ನು ಅಭ್ಯಾಸಮಾಡೋಣ ಮತ್ತು ಕಾವ್ಯವಾಕ್ಯಾಮೃತವನ್ನು ಅನುಭವಿಸುವದಕ್ಕೆ ನೋಡಿದರೂ ಮನುಷ್ಯರಿಗೆ ಇರುವ ಆಯುಸ್ಸು ಯಂಬುವದು ಕೆಲವು ನಿಮಿಷಗಳಾಗಿದೆ ಹೀಗಿರುವದರಿಂದ ಯಾವ ಕೆಲಸಮಾಡು

ವದಕ್ಕೂ ತಿಳಿಯುವದಿಲ್ಲ ಅಂದರೆ ಮನುಷ್ಯನಿಗೆ ಇರುವ ಈ ಅಲ್ಪಾಯುಸ್ಸಿ ನಲ್ಲಿ ಯಾವ ಕೆಲಸವನ್ನು ಮಾಡುವದಕ್ಕೂ ಆಗುವದಿಲ್ಲ ಎಂದು ಭಾವವು ॥೭೬

ಶ್ಲೋ॥ ದುರಾರಾಧ್ಯಾಶ್ಚಾಮೀ ತುರಗಚಲಚಿತ್ತಾಃ ಕ್ಷಿತಿಭುಜೋ
ವಯಂಚ ಸ್ಥೂಲೇಚ್ಛಾಸ್ಸುಮಹತಿಫಲೇ ಬದ್ಧಮನಸಃ
ಜರಾದೇಹಂ ಮೃತ್ಯುರ್ಹರತಿ ದಯಿತಂ ಜೀವಿತಮಿದಂ
ಸಖೇ ನಾನ್ಯಚ್ಛ್ರೇಯೋ ಜಗತಿ ವಿದುಷೋನ್ಯತ್ರ ತಪಸಃ

ಟೀಕು॥ ಹೇಸಖೇ-ಎಲೈ ಸ್ನೇಹಿತನೆ, ತುರಗಚಲಚಿತ್ತಾಃ-ತುರಗ ಜವನಾಶ್ವದೋಪಾದಿಯಲ್ಲಿ, ಚಲ-ಚಪಲವಾದ, ಚಿತ್ತಾಃ-ಹೃದಯವುಳ್ಳ, ಅಮೀ-ಈ ದೊರೆಗಳು, ದುರಾರಾಧ್ಯಾಃ-ಸೇವಿಸುವದಕ್ಕೆ ಅಸಾಧ್ಯರು, ವಯಂಚ-ನಾವಾದರೋ, ಸ್ಥೂಲ-ಹೆಚ್ಚಾದ, ಇಚ್ಛಾ-ಆಸೆವುಳ್ಳ, ಸುಮಹತಿಫಲೇ- ಹೆಚ್ಚಾದಫಲದಲ್ಲಿ, ಅಥವಾ- ದ್ರವ್ಯದಲ್ಲಿ, ಬದ್ಧಮನಸಃ- ಬದ್ಧ ಕಟ್ಟಲ್ಪಟ, ಮನಸಃ ಮನಸ್ಸು ಉಳ್ಳವರು, ಜರಾ-ವಾರ್ಧಕ್ಯವು, ದೇಹಂ- ಶರೀರವನ್ನು ಹರತಿ-ಕೆಡಿಸುತ್ತೆ, ಮೃತ್ಯುಃ ಮೃತ್ಯುದೇವತೆಯು, ದಯಿತಂ- ಇಷ್ಟವಾದ, ಇದಂ-ಈ, ಜೀವಿತಂ ಬದುಕನ್ನು, ಅಂದರೆ-ಆಯುಸ್ಸನ್ನು, ಹರತಿ-ಅಪಹಾರವಮಾಡುತ್ತೆ, ವಿದುಷಃ-ವಿದ್ವಾಂಸನಿಗೆ, ಜಗತಿ-ಲೋಕದಲ್ಲಿ, ತಪಸಃ-ತಪಸ್ಸಿಗಿಂತಲು, ಅನ್ಯತ್ - ಮತ್ತೊಂದಾದ, ಶ್ರೇಯಃ- ಶ್ರೇಯಸ್ಕರವಾದದ್ದು, ನ-ಇಲ್ಲ. ॥೭೭॥

ತಾತ್ಪರ್ಯ — ಈ ಶ್ಲೋಕದಲ್ಲಿ ಬುದ್ಧಿವಾದವನ್ನು ಹೇಳುತ್ತಾನೆ ಅದು ಹೇಗೆಂದರೆ:— ಈ ರಾಜರು ಮಹಾ ಚಂಚಲ ಮನಸ್ಸುಳ್ಳವರು, ಇವರನ್ನಾಶ್ರಯಿಸುವದಕ್ಕೆ ಆಗುವದಿಲ್ಲ ನಾವುಗಳು ದೊಡ್ಡದಾದ ಆಸೆವುಳ್ಳವರು ಹಾಗೂ ಇರಲಿ ಎಂದರೆ ಕೊಂಚಕಾಲದಮೇಲೆ ವೃದ್ಧಾಪ್ಯವು ಒಂದು ಶರೀರವನ್ನು ಕೆಡಿಸುತ್ತದೆ. ಮೃತ್ಯುವು ಆಯುಸ್ಸನ್ನೇ ತೆಗೆದುಕೊಳ್ಳುತ್ತದೆ ಇವುಗಳನ್ನು ನೋಡುವದರಲ್ಲಿ ವಿದ್ವಾಂಸನಾದವನಿಗೆ ತಪಸ್ಸುಮಾಡುವದಕ್ಕಿಂತಲೂ ಶ್ರೇಯಸ್ಕರವಾದದ್ದು ಯಾವದೂ ಇಲ್ಲ ಎಂದು ಸ್ನೇಹಿತನನ್ನು ಕುರಿತು ಹೇಳಿದನೆಂದು ತಾತ್ಪರ್ಯ. ॥೭೭॥

ಶ್ಲೋ॥ ಮಾನೇಮ್ಲಾಯಿನಿಖಂಡಿತೇಚವಸುನಿವ್ಯರ್ಥೇಪ್ರ
ಯಾತೇರ್ಥಿನಿಕ್ಷೀಣೇಬಂಧುಜನೇಗತೇಪರಿಜನೇನಷ್ಟೇ
ಶನೈರ್ಯೌವನೇ । ಯುಕ್ತಂಕೇವಲಮೇತದೇವಸು
ಧಿಯಾಂಯಜ್ಜಹ್ನುಕನ್ಯಾಪಯಃಪೂತಗ್ರಾವಗಿರೀಂ
ದ್ರಕಂದರತಟೀಕುಂಜೇನಿವಾಸಃಕ್ವಚಿತ್ ॥೨೮॥

ಟೀಕ-॥ ಮಾನೇ ಅಭಿಮಾನವು, ಮ್ಲಾಯಿನಿಸತಿ-ಗಳಿತವಾಗಿಹೋದಂ ಥಾದ್ದಾಗುತ್ತಿರಲಾಗಿ, ವಸುನಿ-ಧನವು, ಖಂಡಿತೇಸತಿ ನಾಶವಾಗುತ್ತಿರಲಾಗಿ, ಅರ್ಥಿನಿ-ಯಾಚಕಜನವು, ವ್ಯರ್ಥೇ-ವ್ಯರ್ಥವಾದದ್ದಾಗಿ, ಪ್ರಯಾತೇಸತಿ- ಹೊರಟುಹೋದದ್ದಾಗುತ್ತಿರಲಾಗಿ, ಬಂಧುಜನೇ-ಬಂಧುಜನಗಳು, ಕ್ಷೀಣೇ ಸತಿ-ನಾಶವಾದವರಾಗುತ್ತಿರಲಾಗಿ ಪರಿಜನೇ-ಸೇವಾಜನವು, ಗತೇಸತಿ-ಹೊ ರಟುಹೋದವರಾಗುತ್ತಿರಲಾಗಿ, ಯೌವ್ವನೇ- ಪ್ರಾಯವು, ಶನೈಃ- ಮೆಲ್ಲಗೆ, ಗತೇಸತಿ- ಕಳೆದುಹೋದದ್ದಾಗುತ್ತಿರಲಾಗಿ, ಸುಧಿಯಾಂ- ಪ್ರವೀಣನಾದ ಬುದ್ಧಿವುಳ್ಳವರಿಗೆ, ಏಕಂ-ಮುಖ್ಯವಾದ, ಯುಕ್ತಂ-ಯುಕ್ತವಾದ ಕಾರ್ಯವು, ಕಿಂ-ಯಾವುದೆಂದರೆ, ಕ್ವಚಿತ್-ಒಂದಾನೊಂದಾವ, ಜಹ್ನುಕನ್ಯಾಪಯಃ ಪೂತ ಗ್ರಾವಗಿರೀಂದ್ರ ಕಂದರಕುಟೀಕುಂಜೇನಿವಾಸಃ ಜಹ್ನುಕನ್ಯಾ- ಗಂಗಾನದಿ ಯ, ಪಯಃ-ಉದಕದಿಂದ, ಪೂತ-ಪರಿಶುದ್ಧವಾದ, ಗ್ರಾವ- ಪಾಷಾಣಗಳು ಳ್ಳ, ಗಿರೀಂದ್ರ-ಶ್ರೇಷ್ಠವಾದ ಪರ್ವತಗಳ, ಕುಟೀಕುಂಜೇ-ಗೃಹಸದೃಶವಾ ದ ಲತಾಮಂಟಪದಲ್ಲಿ, ವಾಸ-ನಿವಾಸವು ಅಥವಾ ತಪಸ್ಸುಮಾಡೋಣವು, ಶ್ರೇಯಃ-ನಿಶ್ರೇಯಸ್ಕರವಾದದ್ದು, ॥೨೮॥

ತಾತ್ಪರ್ಯ— ಮನುಷ್ಯನಿಗೆ ವೃದ್ಧಾಪ್ಯದಲ್ಲಿ ತಪಸ್ಸುಮಾಡುವುದೇ ಮುಖ್ಯವೆಂಬುದನ್ನು ಹೇಳುತ್ತಾನೆ. ಅದು ಹೇಗಂದರೆ;—ಮಾನವೆಂದರೆ ಅಭಿಮಾನವು ತಪ್ಪಿ ದ್ರವ್ಯವು ಖರ್ಚಾಗಿಹೋಗಿ ಯಾಚನಕ್ಕೆಬಂದ ಯಾ ಚಕಜನಗಳು ನಿರಾಸೆಮಾಡಿಕೊಂಡು ಹೋಗುತ್ತಿರಲಾಗಿ ತನಗೆ ಸಂಬಂಧ ವಾದ ಜನಗಳು ಸತ್ತುಹೋಗಿ ತನ್ನ ಭೃತ್ಯರಿಗೆ ತಿಂಗಳು ತಿಂಗಳಿಗೂ ವೇ ತನ ಕೊಡುವದಕ್ಕೆ ಇಲ್ಲವೆ ಸೇವಾಜನಗಳು ಹೊರಟು ಹೋಗುತ್ತಿರಲಾಗಿ ಯೌವನ ವಯಸ್ಸುಹೋಗಿ ವೃದ್ಧಾಪ್ಯಬಂದಮೇಲೆ ಎಲ್ಲಿಯಾದರು ಗಂಗಾ ನದೀತೀರದಲ್ಲಿರುವ ಬೆಟ್ಟದ ಪ್ರಾಂತದಲ್ಲಿರುವ ಲತಾಗೃಹಗಳಲ್ಲಿ ವಾಸಮಾ ಡುವದು ಉತ್ತಮವೆಂದು ತಾತ್ಪರ್ಯ. ॥೨೮॥

ಶ್ಲೋ॥ ರಮ್ಯಾಶ್ಚಂದ್ರಮರೀಚಯಸ್ತೃಣವತೀ ರಮ್ಯಾ
ವನಾಂತಸ್ಥಲೀರಮ್ಯಂಸಾಧುಸಮಾಗತಾಗತಸುಖಂ
ಕಾವ್ಯೇಷುರಮ್ಯಾಃಕಥಾಃ ॥ ಕೋಪೋಪಾಹಿತಬಾಷ್ಪ
ಬಿಂದುತರಳಂರಮ್ಯಂಪಿ ಪ್ರಿಯಾಯಾಮುಖಂ ಸರ್ವಂ
ರಮ್ಯಮನಿತ್ಯತಾಮುಪಗತೇಚಿತ್ತೇನಕಿಂಚಿತ್ಪುನಃ ॥

ಟೀಕು॥ ಚಂದ್ರಮರೀಚಯಃ-ಚಂದ್ರ-ಕಾಂದುವಿನ, ಮರೀಚಯಃ ಕಿರಣಗಳು, ರಮ್ಯಾಃ-ಮನೋಹರಗಳಾದವುಗಳು, ತೃಣವತೀ ಎಳೆಗರಿಕೆಗಳುಳ್ಳ, ವನಾಂತಸ್ಥಲೀ-ವನಮಧ್ಯ ಭೂಮಿಯು, ರಮ್ಯಾ- ಮನೋಹರವಾದದ್ದು, ಸಾಧುಗತಾಗತಸುಖಂ-ಸಾಧು-ಸಜ್ಜನರ, ಗತ ಸಹವಾಸದದಸೆಯಿಂದ, ಆಗತ- ಪ್ರಾಪ್ತವಾದ, ಸುಖಂ- ಸಂತೋಷವು, ರಮ್ಯಂ- ಮನೋಹರವಾದದ್ದು, ಕಾವ್ಯೇಷು-ಕಾವ್ಯಗಳಲ್ಲಿ, ಕಥಾಃ-ಕಥೆಗಳು, ರಮ್ಯಾಃ-ಮನೋಹರಗಳಾದವುಗಳು, ಕೋಪೋಪಾಹಿತಬಾಷ್ಪಬಿಂದು ತರಳಂ- ಕೋಪ-ಪ್ರಣಯ ಕೋಪದಿಂದ, ಉಪಾಹಿತ ಕೂಡಿಕೊಂಡಿರುವ, ಬಾಷ್ಪ- ಆನಂದಬಾಷ್ಪದಿಂದ, ತರಳಂ-ಚಂಚಲವಾದ, ಪ್ರಿಯಾಯಾಃ- ಪ್ರಾಣಪ್ರೇಯಸಿಯ, ಮುಖಂ-ವದನವು, ರಮ್ಯಂ ಮನೋಹರವಾದದ್ದು, ಸರ್ವಂ- ಸಮಸ್ತವು, ಅನಿತ್ಯತಾಂ- ನಾಶವನ್ನು, ಉಪಗತೇಸತಿ- ಹೊಂದಿದಂಥಾದ್ದಾಗುತ್ತಿರಲಾಗಿ, ಚಿತ್ತೇ-ಎಲೈ ಮನಸ್ಸೆ, ಕಿಂಚಿತ್ಪುನಃ-ಯಾವದುಂಟಾನೆ, ರಮ್ಯಂ-ಮನೋಹರವಾದದ್ದು, ನ-ಅಲ್ಲ, ರಮ್ಯಂ- ಮನೋಹರವಾದದ್ದು. ಬ್ರಹ್ಮ- ಬ್ರಹ್ಮವಸ್ತುವು, ॥೭೯॥

ತಾತ್ಪರ್ಯ—ಇದು ಮೊದಲು ಎರಡು ಶ್ಲೋಕಗಳಿಂದ ಸದಸದ್ವಸ್ತುಗಳ ವಿಚಾರವನ್ನು ಹೇಳುತಾನೆ. ಅದು ಹೇಗೆಂದರೆ;—ಚಂದ್ರಕಿರಣವು ದ್ಯಾನವನದ ಮಧ್ಯ ಪ್ರಣಯಕೋಪದಿಂದ ಕೂಡಿದ ಸ್ತ್ರೀಮುಖ ಸಾಧುಸಂಗದಿಂದ ಉಂಟಾದ ಸುಖ ಕಾವ್ಯದ ಕಥೆಗಳು ಇವುಗಳೆಲ್ಲವು ಮನೋಹರವಾದದ್ದೆಂದು ಇವುಗಳು ನಾಶವನ್ನು ಹೊಂದಿದಕಾರಣದಲ್ಲಿ ಬ್ರಹ್ಮನೊಬ್ಬನೇ ಸತ್ಯವಾದವನು ಆದ್ದರಿಂದ ಎಲೈ ಮನಸ್ಸೇ ಪರಬ್ರಹ್ಮನ ಉಪಾಸನೆ ಮಾಡಬೇಕೆಂದು ತಾತ್ಪರ್ಯ. ॥೭೯॥

ಶ್ಲೋ॥ ರಮ್ಯಂಹರ್ಮ್ಯತಲಂನಕಿಂವಸತಯೇಶ್ರಾವ್ಯಂನಗೇ
ಯಾದಿಕಂಕಿಂವಾಪ್ರಾಣಸಮಾಸಮಾಗಮಸುಖಂನೈ
ವಾಧಿಕಪ್ರೀತಯೇ । ಕಿಂತುಭ್ರಾಂತಪತಂಗಪಕ್ಷಪವ
ನವ್ಯಾಲೋಲದೀಪಾಂಕುರಚ್ಛಾಯಾಚಂಚಲಮಾಕ
ಲಯ್ಯಸಕಲಂಸಂತೋವನಾಂತಂಗತಾಃ ॥ ೮೦ ॥

ಟೀಕು॥ ಹರ್ಮ್ಯತಲಂ-ಹರ್ಮ್ಯ- ಉಪ್ಪರಿಗೆಗಳ, ತಲಂ- ಪ್ರದೇಶವು, ವಸತಯೇ ವಾಸಕ್ಕೋಸ್ಕರ, ರಮ್ಯಂ ಮನೋಹರವಾದದ್ದು, ನಕಿಂ-ಅಲ್ಲವೇ ಏನು. ಗೇಯಾದಿಕಂ ಗೇಯ ವೀಣಾಗಾನ ಮೊದಲಾದದ್ದು, ಶ್ರಾವ್ಯಂ ಕಿಂ-ಶ್ರೋತ್ರಮನೋಹರವಾದದ್ದಲ್ಲವೆ, ಪ್ರಾಣಸಮಾಸಮಾಗಮಸುಖಂ- ಪ್ರಾಣಪ್ರಿಯಳಾದ ಕಾಮಿನಿಯ ಸಮಾಗಮ - ಸಂಬಂಧದಿಂದ ಉಂಟಾದ, ಸುಖ ಸುಖವು, ಅಧಿಕಪ್ರೀತ್ಯೈ-ಅಧಿಕ-ಹೆಚ್ಚಾದ, ಪ್ರೀತ್ಯೈ-ವಿಶ್ವಾಸಕ್ಕೋಸ್ಕರ ನಭವತಿಕಿಂ-ಆಗುವದಿಲ್ಲವೇ ಏನು, ಕಿಂತು- ಮತ್ತೇನೆಂದರೋ, ಸಂತಃ-ಸತ್ಪುರುಷರು, ಏತತ್ಸರ್ವಂ-ಈ ಎಲ್ಲವನ್ನು, ಭ್ರಾಂತಪತಂಗಪಕ್ಷಪವನ ವ್ಯಾಲೋಲದೀಪಾಂಕುರಚ್ಛಾಯಾಚಂಚಲಂ-ಭ್ರಾಂತ- ಸಂಚರಿಸುತ್ತಿರುವ, ಪತಂಗ ಈಚಲು ಹುಳುವಿನ, ಪಕ್ಷ- ರೆಕ್ಕೆಗಳಿಂದ ಉಂಟಾದ, ಪವನ- ಗಾಳಿಯಿಂದ, ವ್ಯಾಲೋಲ-ಅಲ್ಲಾಡುತ್ತಿರುವ ದೀಪ- ದೀಪದ, ಛಾಯಾ- ನೆರಳಿನೋಪಾದಿಯಲ್ಲಿ (ಅಥವಾ ಕಾಂತಿಯೋಪಾದಿಯಲ್ಲಿ,) ಚಂಚಲಂ-ಚಪಲವಾದದ್ದೆಂದು, ಆಕಲಯ್ಯ- ತಿಳಿದು, ವನಾಂತಂ- ವನಮಧ್ಯಭಾಗವನ್ನು, ಗತಾಃ- ಹೊಂದಿದವರಾದರು, ॥೮೦॥

ತಾತ್ಪರ್ಯ — ಈ ಶ್ಲೋಕದಲ್ಲಿಯೂ ಮೊದಲು ಹೇಳಿದ ಅರ್ಥವನ್ನೇ ಭಂಗ್ಯಂತರದಿಂದ ಹೇಳುತ್ತಾನೆ. ಅದು ಹೇಗೆಂದರೆ:—ಮನುಷ್ಯನಿಗೆ ವಾಸಮಾಡುವದಕ್ಕೆ ಮಹಡಿಯು ಅನುಕೂಲವಾದದ್ದಲ್ಲವೆ ವೀಣಾ ಗಾನ ಮೊದಲಾದದ್ದು ಕಿವಿಗಳಿಗೆ ಕೇಳುವದಕ್ಕೆ ಆನಂದಕರವಾದದ್ದಲ್ಲವೆ ಸ್ತ್ರೀಯರುಗಳು ಪ್ರಣಯಕಲಹದಿಂದ ಬಾಷ್ಪೋದಕವನ್ನು ಬಿಡುತ್ತಾ ಇರುವ ಮುಖವು ಅತಿ ಸಂತೋಷವನ್ನು ಉಂಟುಮಾಡುವದಿಲ್ಲವೆ ಇವೆಲ್ಲವೂ ಹಾಗಿರಲಿ ಮತ್ತೇನೆಂದರೋ ಈ ಸಮಸ್ತವೂ ಈಚಲಹುಳುವು ದೀಪವನ್ನು ಆರಿಸುವದಕ್ಕೆ ಬಂದಕಾಲದಲ್ಲಿ ಅದರ ರೆಕ್ಕೆಯಿಂದ ಹುಟ್ಟಿದ ಗಾಳಿಯಿಂದ ತಲ್ಲಣಿ

ಸುತ್ತಲಿರುವ ದೀಪದ ನೆರಳಿನೋಪಾದಿಯಲ್ಲಿ ಅಥವಾ ದೀಪಕಾಂತಿಯೋ
ಪಾದಿಯಲ್ಲಿ ಅತಿ ಚಂಚಲವಾದದ್ದು ಎಂದು ವಿದ್ವಾಂಸರು ತಿಳಿದು ಪುಣ್ಯಾ
ರಣ್ಯ ಭೂಮಿಯಲ್ಲಿ ತಪಸ್ಸು ಮಾಡುವದಕ್ಕೆ ಹೋದರೆಂದು ಭಾವವು. ॥೮೦

## ನಿತ್ಯಾನಿತ್ಯವಸ್ತು ವಿಚಾರಸ್ಯಾವಾಪ್ತಿ.

## ಶಿವಾರ್ಚನ ವಿಧಿ ಪ್ರಾರಂಭವು.

ಶ್ಲೋ॥ ಆಸಂಸಾರಾತ್ತ್ರಿಭುವನಮಿದಂ ಚಿನ್ವತಾಂ ತಾತ ತಾದೃ
ಕ್ನೈವಾಸ್ಮಾಕಂ ನಯನಪದವೀಂ ಶ್ರೋತ್ರಮಾರ್ಗಂ
ಗತೋ ವಾ ॥ ಯೋಯಂ ಧತ್ತೇ ವಿಷಯಕರಿಣೀಗಾಢ
ಗೂಢಾಭಿಮಾನಕ್ಷೀಬಸ್ಯಾಂತಃಕರಣಕರಿಣಸ್ಸಂಯ
ಮಾನಾಯಲೀಲಾಂ ॥೮೧॥

ಟೀಕು॥ ತಾತ-ಎಲೈ ಮನಸ್ಸೆ ಕೇಳು, ಆಸಂಸಾರಾತ್-ಸಂಸಾರಕ್ಕೆ ಆದಿ
ಕಾಲ ಮೊದಲ್ಗೊಂಡು, ಇದಂ- ಈ, ತ್ರಿಭುವನಂ- ಮೂರುಲೋಕವನ್ನು,
ಚಿನ್ವತಾಂ-ಹುಡುಕುತ್ತಾ ಇರುವ, ಅಸ್ಮಾಕಂ- ನಮಗೆ, ತಾದೃಕ್ ಅಂಥಾ
ಮನುಷ್ಯನು, ನಯನಪದವೀಂವಾ-ನೇತ್ರಮಾರ್ಗವನ್ನು ಆಗಲಿ, (ಅಥವಾ
ದೃಷ್ಟಿಗೋಚರವನ್ನು ಆಗಲಿ) ಶ್ರೋತ್ರಮಾರ್ಗಂವಾ- ಶ್ರವಣಮಾರ್ಗವನ್ನು
ಆಗಲಿ, ನಗತಃ-ಹೊಂದಿದವನು ಆಗಲಿಲ್ಲ. ಯಃ- ಯಾವಮನುಷ್ಯನು, ವಿಷ
ಯಕರಿಣೀ ಗಾಢಗೂಢಾಭಿಮಾನಕ್ಷೀಬಸ್ಯಾಂತಃಕರಣಕರಿಣಃ - ವಿಷಯ-ಸ್ರ
ಕ್ಚಂದನಾದಿ ವಿಷಯಗಳೆಂಬುವ, ಕರಿಣೀ-ಹೆಣ್ಣಾನೆಗಳಲ್ಲಿ, ಗಾಢ ದೃಢವಾ
ದ, ಗೂಢ ಗೋಪ್ಯವಾದ, ಅಭಿಮಾನ-ಅತ್ಯಂತಾಸಕ್ತಿಯಿಂದ, ಕ್ಷೀಬ-ಮದಿ
ಸಿದ, ಅಂತಃಕರಣ ಅಂತಃಕರಣವೆಂಬುವ, ಕರಿಣಃ-ಆನೆಯ, ಸಂಯಮನಾ
ಯಲೀಲಾಂ-ಸಂಯಮ- ಬಂಧಿಸುವದರಲ್ಲಿ (ಅಥವಾ ಕಟ್ಟುವದರಲ್ಲಿ) ಆನಾ
ಯ - ರಜ್ಜುನಿರ್ಮಿತವಾದ ಬಲೆಯ, ಲೀಲಾಂ - ವಿಲಾಸವನ್ನು, ಧತ್ತೇ -
ಧರಿಸುತ್ತಾನೋ, ॥೮೧॥

ತಾತ್ಪರ್ಯ—ನಿತ್ಯಾನಿತ್ಯವಿಚಾರ ಪ್ರಸಕ್ತಾನು ಪ್ರಸಕ್ತಿಯಿಂದ ತ
ಪಸ್ಸಿಗೆ ಅತ್ಯಂತ ಅವಶ್ಯಕತ್ವವು ಹೇಳಲ್ಪಟ್ಟಿತು ಅದು ಯಾವವಿಧವೆಂದು
ಆಶಂಕ ಉಂಟಾದರೆ ಶಿವಾರ್ಚನ ವ್ಯತಿರೇಕವಾಗಿ ಮತ್ತಾವ ವಿಘ್ನವಾದ ತ

ವಸ್ತು ಇಲ್ಲವೆಂದು ಮನಸ್ಸಿನಲ್ಲಿ ಮಾಡಿಕೊಂಡು ಶಿವಾರ್ಚನೆಯನ್ನು ವರ್ಣಿಸಿ ಮಾಡುತ್ತಾನೆ. ಆ ಅರ್ಚನೆಯು ಎರಡು ವಿಧವಾದದ್ದು ಬಾಹ್ಯಾಭ್ಯಂತರಗಳಾಗಿ ವಿಧಿಸಲ್ಪಟ್ಟಿದೆ ಅದರಲ್ಲಿ ಆದ್ಯವಾದ ಬಾಹ್ಯವು ಬಹೂಪಕರಣ ಸಾಧ್ಯವಾದದ್ದು ಇದು ಬಹಿರ್ಮುಖವಾದದ್ದು ಇದನ್ನು ಅಮುಖ್ಯವೆಂದೆಣಿಸಿ ಆಭ್ಯಂತರ ಪೂಜೆಯನ್ನು ಹೇಳುತ್ತಾನೆ. ಅದು ಹೇಗೆಂದರೆ;— ಎಲಾ ಅಪ್ಪ ಕೇಳು! ಈ ಪ್ರಪಂಚಕ್ಕೆ ಸಂಸಾರದ ಆದಿಕಾಲದಿಂದಲೂ ನೋಡಿದ್ದರಲ್ಲಿ ಅಂಥಾ ಮನುಷ್ಯನನ್ನು ಕಣ್ಣಿನಿಂದಲೂ ಕಾಣಲಿಲ್ಲವಲ್ಲ ಕಿವಿಯಲ್ಲಿಯೂ ಕೇಳಲಿಲ್ಲ. ಯಾವ ಮನುಷ್ಯನು ಸ್ವಚ್ಛಂದನ ವಿಷಯಗಳೆಂಬುವ ಹೆಣ್ಣಾನೆಯಲ್ಲಿ ಅತ್ಯಂತ ಸಕ್ತಿಯುಳ್ಳ ಮನಸ್ಸೆಂಬುವ ಗಂಡು ಆನೆಯನ್ನು ಕಟ್ಟುವದಕ್ಕೆ ಮನೋನಿಗ್ರಹವೆಂಬುವ ಹಗ್ಗದ ಬಲೆ ಹಾಕಿಕಟ್ಟುವ ವಿಲಾಸವನ್ನು ಧರಿಸಿ ಇದ್ದಾನೋ ಅಂಥಾ ಮನುಷ್ಯನನ್ನು ನೋಡಲಿಲ್ಲ ಎಂಬುವ ಭಾವವು ಅತ್ರ ಈದೃಕ್ಪುರುಷಸ್ಯ ನಯನ ಶ್ರೋತ್ರಪಥವಿಷಯ ಸಂಬಂಧೇಪ್ಯಸಂಬಂಧೋಕ್ತ್ಯಾ ಸಂಬಂಧೇಪಿ ಅಸಂಬಂಧರೂಪಾತಿಶಯೋಕ್ತಿಃ ತಯಾಚ ಮನೋನಿಯಮನಸ್ಯ ಅತ್ಯಂತ ಆವಶ್ಯಕತ್ವರೂಪಂ ವಸ್ತು ವ್ಯಜ್ಯತ ಇತಿ ಅಲಂಕಾರೇಣ ವಸ್ತುಧ್ವನಿಃ || ತಥಾಚ ಕೇನಚಿದ್ಯೋಗೇನ ಮನೋನಿಯಮ್ಯ ತತ್ವಬ್ರಹ್ಮಾನಂದ ಸಾಧನಭೂತ ಅಂತರಂಗ ಶಿವಾರ್ಚನತತ್ಪರೋ ಅವಶ್ಯಂ ಕರ್ತವ್ಯ ಮಿತಿ ಗೂಢೋಯಮಭಿಪ್ರಾಯಃ || ತಥಾ ಅನ್ಯಾ ಧರ್ಮಸ್ಯ ಅನ್ಯತ್ರ ಸಂಬಂಧಾ ಸಂಭವಾತ್ ಅನಾಯಾಲೀಲಾಮಿವ ಇತ್ಯೌಪಮ್ಯಪರ್ಯವ ಸಾನಸಂಭವದ್ವಸ್ತು ಸಂಬಂಧರೂಪೋ ನಿದರ್ಶನಾಲಂಕಾರಃ. ಸಚೋಕ್ತರೂಪ ಕೇಣಾಂಗಾಂಗಿ ಭಾವೇನ ಸಂಕೀರ್ಯತೇ || ಮಂದಾಕ್ರಾಂತಾವೃತ್ತಂ. || ||೮೧||

ಶ್ಲೋ|| ಯದೇತತ್ಸ್ವಚ್ಛಂದಂ ವಿಹರಣಮಕಾರ್ಪಣ್ಯಮಶನಂ
ಸಹಾರ್ಯೈಸ್ಸಂವಾಸಶ್ಶ್ರುತಮುಪಶಮೈಕವ್ರತಫಲಂ
ಮನೋಮಂದಸ್ಪಂದಂ ಬಹಿರಪಿ ಚಿರಸ್ಯಾಪಿ ವಿಮೃಶನ್ನ
ಜಾನೇ ಕಸ್ಯೈಷಾ ಪರಿಣತಿರುದಾರಸ್ಯ ತಪಸಃ ||೮೨||

ಟೀಕು|| ಸ್ವಚ್ಛಂದಂ- ಸ್ವೇಚ್ಛೆಯಾದ, ವಿಹರಣಂ- ವಿಹಾರವು, ಅಕಾರ್ಪಣ್ಯಂ-ಪರಛಂದಾನು ವರ್ತನೆಯಿಲ್ಲದೆ ಇರುವ, (ಅಥವಾ ದೀನಭಾವವಿಲ್ಲದ) ಅಶನ-ಭೋಜನವು, ಆರ್ಯೈಸ್ಸಹ-ಸಜ್ಜನರೊಡನೆ, ಸಂವಾಸಃ-ಸಹವಾಸವು ಕೂಡ, ಶ್ರುತಂ- ಶಾಸ್ತ್ರಶ್ರವಣವು, ಉಪಶಮೈಕವ್ರತಫಲಂ- ಉಪಶಮ-ಶಾಂತಿಗೆ, ಏಕ-ಮುಖ್ಯವಾದ, ವ್ರತ-ನಿಯಮಕ್ಕೆ. ಫಲಂ-ಫಲವಾಗಿಯುಳ್ಳ, ಬಹಿರಪಿ ಬಹುವರ್ಷದಲ್ಲುಕೂಡ, ಮನಃ-ಮನಸ್ಸು, ಮಂದಸ್ಪಂದಂ-ಮಂದ- ಮೆಲ್ಲನೆ ಸ್ಪಂದಂ- ಚಲಿಸೋಣವು, ಏತತ್ಸರ್ವಂ- ಈ ಸಮಸ್ತವು, ಉದಾರಸ್ಯ-ಉತ್ಕೃಷ್ಟನಾದ, ಕಸ್ಯ-ಯಾವ, ಮಹತಃ-ಮಹಾತ್ಮನ, ತಪಸಃ-ತಪಸ್ಸಿನ, ಏಷಾ - ಈ ಪ್ರಕಾರವಾದ, ಪರಿಣತಿರ್ವಾ - ಪರಿಪಾಕವು ಆಗಲಿ, ವಿಮೃಶನ್ನಪಿ ನೋಡುತ್ತಾ ಇರುವನಾಗಿ, ನಜಾನೇ-ತಿಳಿಯಲಿಲ್ಲ, ||೮೨||

ತಾತ್ಪರ್ಯ—ತಪಸ್ಸು ಮಾಡುವ ಕ್ರಮವನ್ನು ಹೇಳುತ್ತಾನೆ. ಈ ತಪಸ್ಸು ಈಶ್ವರಾರ್ಚನೆಯೆಂದು ಯೋಚನೆಮಾಡಿದನು. ಅದು ಹೇಗೆಂದರೆ:—ಅರಣ್ಯದಲ್ಲಿ ಸ್ವಚ್ಛಂದವಾಗಿ ತಿರಿಗಿಕೊಂಡು ಪರಚಿತ್ತಾನು ವರ್ತನೆಯಿಲ್ಲದೆ ಕಂದಮೂಲಾದಿಗಳನ್ನು ಆಹಾರಮಾಡಿ ಯೋಗ್ಯರ ಸಹವಾಸದಲ್ಲಿ ಶಾಸ್ತ್ರಾದಿಗಳ ಶ್ರವಣಮಾಡುತ್ತಾ ಶಾಂತವಾಗಿರುವ ಈ ಎಲ್ಲವೂ ತಪೋವ್ರತನಿಯಮದ ಫಲವು ಮತ್ತು ಬಹುವರ್ಷವಾಗಿದ್ದ ಕಾಲದಲ್ಲು ಮನಸ್ಸು ಮೆಲ್ಲಗೆ ಬಹುಕಾಲಕ್ಕೆ ಚಲಿಸೋಣವು ಈ ರೀತಿಯಿಂದ ಸಮಾಧಿಯಲ್ಲಿರುವ ಮಹಾತ್ಮರ ತಪಃ ಪರಿಣತಿಯನ್ನು ನೋಡಿ ಕಂಡುಬರಲಿಲ್ಲ ಅಥವಾ ತಿಳಿಯಲಿಲ್ಲ ಅಂದರೆ ಮೇಲೆ ಹೇಳಿದರೀತ್ಯಾ ತಪಸ್ಸು ಮಾಡುವವನ್ನೇ ಕಾಣಲಿಲ್ಲವೆಂದು ಭಾವವು ||೮೨||

ಶ್ಲೋ|| ಜೀರ್ಣಾಏವಮನೋರಥಾಶ್ಚಹೃದಯೇಯಾತಂಚತ
ದ್ಯೌವನಂಹಂತಾಂಗೇಷುಗುಣಾಶ್ಚವಂಧ್ಯಫಲತಾಂ
ಯಾತಾಗುಣಜ್ಞೈರ್ವಿನಾ । ಕಿಂಯುಕ್ತಂಸಹಸಾ
ಭ್ಯುಪೈತಿಬಲವಾನ್ಕಾಲಃಕೃತಾಂತೋಕ್ಷಮೀಹಾಹಾಜ್ಞಾ
ತಂಮದನಾಂತಕಾಂಘ್ರಿಯುಗಳಂಮುಕ್ತ್ವಾಸ್ತಿನಾ
ನ್ಯಾಗತಿಃ || ೮೩ ||

ಟೀಕು॥ ಮನೋರಥಾಶ್ಚ-ಕೋರಿಕೆಗಳೂ ಕೂಡ, ಹೃದಯೇ-ಮನಸ್ಸಿನಲ್ಲಿಯೇ, ಜೀರ್ಣಾಏವ- ಜೀರ್ಣವಾದವುಗಳು, ಬಭೂವುಃ- ಆದವು, ತತ್- ಆ ಪೂರ್ವೋಕ್ತವಾದ, ಯೌವನಂಚ- ಯೌವನಕಾಲವೂ ಕೂಡ, ಯಾತಂ- ಕಳೆದು ಹೋಯಿತು, ಗುಣಾಶ್ಚ- ಸೌಶೀಲ್ಯಾಧಿ ಗುಣಗಳೂ ಕೂಡ, ಗುಣಜ್ಞೈಃ-ಗುಣಶಾಲಿಗಳಿಂದ, ವಿನಾ-ವಿನಾಯಿಸಿ. ವಂಧ್ಯಫಲತಾಂ- ಫಲದಾಯುಕಗಳು ಆಗದಿರುವವುಗಳಾಗಿ, ಯಾತಾಃ-ಹೋದವು, ಬಲವಾನ್-ಬಲಿಷ್ಟನಾದ ಕ್ರೂರಃ-ಕೋಪಿಷ್ಟನಾದ, ಕಾಲಃ-ಕಾಲಸ್ವರೂಪಿಯಾದ, ಕೃತಾಂತಃ ಯಮರಾಜನು, ಅಕ್ಷಮೀ-ಅತಿಕ್ರೂರನಾಗಿ, ಸಹಸಾ-ಜಾಗ್ರತೆಯಾಗಿ, ಅಭ್ಯುಪೈತಿ- ಎದುರಾಗಿ ಬರುತ್ತಾನೆ, ಯುಕ್ತಂ- ಯುಕ್ತವೇಸರಿ, ಕಿಂ- ಏನು ಮಾಡತಕ್ಕದ್ದು, ಹಾ-ಕಷ್ಟ, ಜ್ಞಾತಂ-ತಿಳಿಯಲ್ಪಟ್ಟಿತು, ಇದಾನೀಂ- ಈಗ, ಮದನಾಂತಕಾಂಘ್ರಿಯುಗಳಂ ಮದನ - ಮೀನಕೇತನನಾದ ಕಂದರ್ಪನಿಗೆ, ಅಂತಕ- ನಾಶಕರನಾದ ಶಂಭುವಿನ, ಅಂಘ್ರಿಯುಗಳಂ- ಪಾದಯುಗ್ಮವನ್ನು, ಮುಕ್ತ್ವಾ - ಬಿಟ್ಟು, ಅನ್ಯಾ - ಮತ್ತೊಂದಾದ, ಗತಿಃ - ಮೋಕ್ಷಮಾರ್ಗವು; ನಾಸ್ತಿ- ಇಲ್ಲ, ॥೮೩॥

ತಾತ್ಪರ್ಯ—ಈಶ್ವರನಪೂಜೆಯೇ ಮೋಕ್ಷದಾಯುಕನೆಂಬುವದನ್ನೆ ಈ ಶ್ಲೋಕದಲ್ಲಿ ಹೇಳುತ್ತಾನೆ. ಅದು ಹೇಗಂದರೆ;—ಹುಟ್ಟಿದ ಮನೋರಥಗಳು ಎಲ್ಲವು ಮನಸ್ಸಿನಲ್ಲಿಯೇ ಜೀರ್ಣಗಳಾದವು ಯೌವನ ಕಾಲವು ಹೋಯಿತು ಒಳ್ಳೆ ಗುಣಗಳೂಕೂಡ ಯೋಗ್ಯರ ಸಹವಾಸವಿಲ್ಲದೆ ನಿಷ್ಫಲಗಳಾಗಿ ಹೋದವು ಕಾಲಯಮಂಬುವ ಯಮನು ಎದುಗೊಳ್ಳುತ್ತಾನೆ. ಅಂದರೆ ಯಮರಾಜಧಾನಿಗೆ ಹೋಗುವಕಾಲವು ಸಮೀಪಿಸಿತು ಯಮನು ಕ್ರೂರವಾದವನು ಹಾ ಕಷ್ಟ ಇದು ಯುಕ್ತವೇಸರಿ ಏನುಮಾಡತಕ್ಕದ್ದು ಎಂದ ಹಂಬಲಿಸಿ ಜ್ಞಾಪಕಬಂತು ಎನ್ನುತ್ತಾನೆ. ಏನಂದರೆ ಈಗ ಮದನಾರಿಯಾದ ಈಶ್ವರನ ಚರಣಯುಗಳ ಧ್ಯಾನವಿನಾ ಬೇರೆಗತಿಯು ಇಲ್ಲವೆಂದು ಹೇಳಿದನು ಅಂದರೆ ಈಶ್ವರನ ಚರಣಯುಗಳ ಧ್ಯಾನಮಾಡಿದವರಿಗೆ ಯಾವ ಬಾಧೆ ಇಲ್ಲದೆ ಪರಮಗತಿಯುಂಟಾಗುವದೆಂದು ತಾತ್ಪರ್ಯ. ॥೮೩॥

ಶ್ಲೋ॥ ಮಹೇಶ್ವರೇವಾಜಗತಾಮಧೀಶ್ವರೇಜನಾರ್ದನೇವಾ
ಜಗದಂತರಾತ್ಮನಿ । ನವಸ್ತುಭೇದಪ್ರತಿಪತ್ತಿರಸ್ತಿ
ಮೇತಥಾಪಿಭಕ್ತಿಸ್ತರುಣೇಂದುಶೇಖರೇ ॥೮೪॥

ಟೀಕು॥ ಜಗತಾಂ-ಲೋಕಗಳಿಗೆ, ಅಧೀಶ್ವರೇ-ದೊರೆಯಾದ (ಅಥವಾ ಸ್ವಾಮಿಯಾದ) ಮಹೇಶ್ವರೇವಾ- ಶಂಭುವಿನಲ್ಲಿ ಆಗಲಿ, ಜಗದಂತರಾತ್ಮನಿ- ಜಗತ್-ಲೋಕಗಳಿಗೆ, ಅಂತರಾತ್ಮನಿ-ಶರೀರದ ಒಳಗೆವುಳ್ಳ, ಜನಾರ್ದನೇವಾ ವಿಷ್ಣುವಿನಲ್ಲಿ ಯಾಗಲಿ, ಮೇ ನನಗೆ, ವಸ್ತುಭೇದ ಪ್ರತಿಪತ್ತಿಃ- ವಸ್ತು-ಶಿವ ವಿಷ್ಣುಗಳೆಂಬುವಂಥ, ಭೇದ ಭಿನ್ನಜನಕವಾದ, ಪ್ರತಿಪತ್ತಿಃ- ಜ್ಞಾನವು, ನ- ಇಲ್ಲ. ತಥಾಪಿ- ಹಾಗಾದಾಗ್ಯೂ, ತರುಣೇಂದುಶೇಖರೇ- ತರುಣ- ಎಳೆತ, ಇಂದು-ಚಂದ್ರನೆ, ಶೇಖರೇ- ಶಿರೋಭೂಷಣವಾಗಿವುಳ್ಳ ಈಶ್ವರನಲ್ಲಿ. ಭಕ್ತಿಃ- ಭಕ್ತಿಯು, ಅಸ್ತಿ-ಇದೆ, ॥೮೪॥

ತಾತ್ಪರ್ಯ— ಈಶ್ವರನಿಗೂ ವಿಷ್ಣುವಿಗೂ ಭೇದವೆಲ್ಲವೆಂಬುವದನ್ನು ಹೇಳುತ್ತಾನೆ. ಅದು ಹೇಗೆಂದರೆ;-ಲೋಕಗಳಿಗೆ ಒಡೆಯನಾದ ಈಶ್ವರ ನಲ್ಲಿಯು ಲೋಕಗಳನ್ನೆಲ್ಲಾ ಹೊಟ್ಟೆಯಲ್ಲಿ ಇಟ್ಟುಕೊಂಡಿರುವ ವಿಷ್ಣುವಿ ನಲ್ಲಿಯು ನನಗೆ ಭೇದಜ್ಞಾನವಿಲ್ಲ ಹಾಗಾದಾಗ್ಯೂ ಚಂದ್ರಶೇಖರನಾದ ಈಶ್ವರನಲ್ಲಿಯೇ ಭಕ್ತಿಯು ನನಗಿದೆ ಆದ್ದರಿಂದಲೆ ಶಿವಚರಣಯುಗಳವೇ ಗತಿಎಂದು ಹೇಳಿದನು. ಇದರಿಂದ ಯಾರಭಾವನೆ ಯಾವರೀತಿಯಾಗಿರು ತ್ತೋ ಆ ರೀತಿಯಾಗಿ ಸ್ವಭಾವ ಹೋಗುತ್ತೆಂದು ಹೇಳಿದ ಹಾಗಾಯಿತು ವಂಶಸ್ಥ ವೃತ್ತಂ. ಜತೌತುವಂಶಸ್ಥ ಮುದೀರಿತಂ ಜರಾವಿತಿಲಕ್ಷಣಾತ್.

ಶ್ಲೋ॥ ಸ್ಫುರತ್ಸ್ಫಾರಜ್ಯೋತ್ಸ್ನಾಧವಳಿತತಲೆಕ್ವಾಪಿ
ಪುಲಿನೇಸುಖಾಸೀನಾಶ್ಶಾಂತಧ್ವನಿಷುರಜನೀಷುದ್ಯು
ಸರಿತಃ ॥ ಭವಾಭೋಗೋದ್ವಿಗ್ನಾಶ್ಶಿವಶಿವಶಿವೇತ್ಯು
ಚ್ಚವಚಸಃಕದಾಯಾಸ್ಯಾಮೋಂತರ್ಗತಬಹುಳಬಾ
ಷ್ಪಾಕುಲದಶಾಂ ॥೮೫॥

ಟೀಕು॥ ಶಾಂತಧ್ವನಿಷು-ಶಾಂತ ಉಪರತಗಳಾದ, ಧ್ವನಿಷು-ಶಬ್ದಗಳು ಳ್ಳ, ರಜನೀಷು-ರಾತ್ರಿಗಳಲ್ಲಿ, ಸ್ಫುರತ್ಸ್ಫಾರಜ್ಯೋತ್ಸ್ನಾಧವಳಿತತಲೇ ಸ್ಫು ರತ್-ಪ್ರಕಾಶಮಾನವಾದ, ಸ್ಫಾರ-ಹೆಚ್ಚಾದ, ಜ್ಯೋತ್ಸ್ನಾ-ಕೌಮುದಿಯಿಂದ, ಧವಳಿತ-ಶುಭ್ರವಾಗಿ ಮಾಡಲ್ಪಟ್ಟ ತಲೇ-ಪ್ರದೇಶಗಳುಳ್ಳ, ಕ್ವಾಪಿ- ಒಂದಾ ನೊಂದಾದ, ದ್ಯುಸರಿತಃ-ದೇವಗಂಗೆಯ, ಪುಲಿನೇ-ಮರಳುದಿಬ್ಬದಲ್ಲಿ ಸುಖಾ ಸೀನಾಃ-ಸುಖವಾಗಿ ಸುಖವಾಗೋಣ ಹೇಗೋಹಾಗೆ, ಆಸೀನಾಃ ಕೂತುಕೊಂಡಿ

ರುವರಾದ ಕಾರಣವೆ, ಭವ-ಭೋಗೋದ್ವಿಗ್ನಾಃ-ಭವ-ಸಂಸಾರದ, ಆಭೋಗ-ಅತಿಶಯದಿಂದ, ಉದ್ವಿಗ್ನಾಃ- ಭಯಪಟ್ಟ, ವಯಂ- ನಾವುಗಳು, ಶಿವ ಶಿವ ಶಿವೇತ್ಯುಚ್ಚ ವಚಸಃ - ಶಿವ ಶಿವ ಶಿವೇತಿ- ಶಿವ ಶಿವ ಶಿವ ಎಂದು, ಉಚ್ಚ - ಗಟ್ಟಿಯಾದ, ವಚನಃ ವಾಕ್ಯಗಳ್ಳುವರಾಗಿ, ಕದಾ-ಯಾವ ಕಾಲದಲ್ಲಿ, ಅಂತರ್ಗತ ಬಹುಳ ಬಾಷ್ಪಾಕುಲದಶಾಂ-ಅಂತರ್ಗತ-ಒಳಗೆ ಅಡಗಿರುವ, ಬಹುಳ- ಅಧಿಕವಾದ, ಬಾಷ್ಪ-ಆನಂದಬಾಷ್ಪದಿಂದ, ಆಕುಲ-ವ್ಯಾಪ್ತವಾದ, ದಶಾಂ-ಅವಸ್ಥೆಯನ್ನು, ಯಾಸ್ಯಾಮಃ-ಹೊಂದುತ್ತೇವೆ, ||೮೫||

ತಾತ್ಪರ್ಯ — ಈ ಶ್ಲೋಕದ ಮೊದಲು ಐದು ಶ್ಲೋಕದವರೆಗೂ ಶಾಂತಿರಸಾಭಿವ್ಯಂಜಕವಾದ ವಾಕ್ಯಗಳನ್ನು ಹೇಳುತ್ತಾನೆ. ಅದು ಹೇಗೆಂದರೆ;—ಪಕ್ಷಿಗಳು ಮೃಗಗಳು ಇವುಗಳ ಧ್ವನಿಗಳಿಲ್ಲದೆ ನಿಶ್ಶಬ್ದವಾಗಿರುವ ಒಂದಾನೊಂದು ದೇವಗಂಗೆಯ ತೀರಗಳಲ್ಲಿ ಸ್ವಚ್ಛವಾದ ಬೆಳದಿಂಗಳಿಂದ ಕೂಡಿರುವ ಮರಳು ದಿಬ್ಬಗಳಲ್ಲಿ ವಿಶ್ರಾಂತಿಸುಖವನ್ನು ಅನುಭವಿಸುತ್ತಾ ಸಂಸಾರವೆಂಬುವದು ಮಹಾ ಕಷ್ಟತರವಾದದ್ದೆಂದು ಯೋಚಿಸಿ ಶಿವ ಶಿವ ಶಿವ ಎಂದು ಗಟ್ಟಿಯಾಗಿ ಉಚ್ಚರಿಸಿ ಶಿವಧ್ಯಾನದಿಂದ ಅಂತರ್ಗತ ಆನಂದಪುಷ್ಪದಿಂದ ಕೂಡಿದವರಾಗಿ ನಾವುಗಳು ಯಾವಾಗ ಇರುತ್ತೇವೋ ಕಾಣಲಿಲ್ಲ ಎಂದು ಸಂಸಾರದಲ್ಲಿ ಕೇವಲವಿರಕ್ತನಾಗಿ ಪರಮೇಶ್ವರನ ಧ್ಯಾನಾಸಕ್ತಿಯನ್ನು ಹೇಳಿದನೆಂದು ತಾತ್ಪರ್ಯ. ||೮೫||

ಶ್ಲೋ|| ವಿತೀರ್ಣೇ ಸರ್ವಸ್ವೇ ತರುಣಕರುಣಾಪೂರ್ಣಹೃದಯಾ
ಸ್ಸ್ಮರಂತಸ್ಸಂಸಾರೇ ವಿಗುಣಪರಿಣಾಮಾಂ ವಿಧಿಗತಿಂ
ವಯಂ ಪುಣ್ಯಾರಣ್ಯೇ ಪರಿಣತಶರಚ್ಚಂದ್ರಕಿರಣಾಂ ತ್ರಿ
ಯಾಮಾಂ ನೇಷ್ಯಾಮೋ ಹರಚರಣಚಿಂತ್ಯೈಕಶರಣಾಃ||

ಟೀಕು|| ಸರ್ವಸ್ವೇ- ಸಮಸ್ತದ್ರವ್ಯವು, (ವಿತೀರ್ಣೇಸತಿ)- ದಾನಮಾಡಲ್ಪಟ್ಟದ್ದಾಗುತ್ತಿರಲಾಗಿ, ತರುಣಕರುಣಾಪೂರ್ಣಹೃದಯಾಃ- ತರುಣ- ಬಲಿತ (ಅಥವಾ ಹೆಚ್ಚಾದ, ) ಕರುಣಾ- ಅನುಕಂಪದಿಂದ, ಪೂರ್ಣ- ಅತ್ಯಂತವಾಗಿ ತುಂಬಿದ, ಹೃದಯಾಃ- ಮನಸ್ಸುಳ್ಳ, ಸಂಸಾರೇ- ಸಂಸಾರದಲ್ಲಿ, ವಿಗುಣಪರಿಣಾಮಾಂ ಪರಿಣಾಮದಲ್ಲಿ (ಅಥವಾ ಕಡೆಯಲ್ಲಿ) ಗುಣವಿಲ್ಲದೆ ಇರುವ, ವಿಧಿಗತಿಂ- ದೈವಗತಿಯನ್ನು, ಸ್ಮರಂತಃ- ಸ್ಮರಣೆ ಮಾಡುತ್ತಾ ಇರುವರಾಗಿ, ವಯಂ-ನಾವುಗಳು ಪುಣ್ಯಾರಣ್ಯೇ- ಪುಣ್ಯಕರವಾದ, ಅರಣ್ಯಭೂಮಿಯಲ್ಲಿ,

ಹರಚರಣ ಚಿಂತೈಕಶರಣಾಸ್ಸಂತಃ- ಹರ- ಈಶ್ವರನ, ಚರಣ- ಅಂಘ್ರಿಯು, ಚಿಂತಾ-ಯೋಚನೆಯು, ಅಥವಾ ಧ್ಯಾನವೆ, ಏಕಶರಣಾಃ-ಮುಖ್ಯಗತಿವುಳ್ಳವರಾಗಿ, ಪರಿಣತ ಶರಚ್ಚಂದ್ರಕಿರಣಾಃ-ಪರಿಣತ-ಹೆಚ್ಚಾದ, ಶರತ್- ಶರತ್ಕಾಲದಲ್ಲಿ ಹುಟ್ಟಿದ, ಚಂದ್ರ- ಸುಧಾಂಶುವಿನ, ಕಿರಣಾಃ- ಕಿರಣಗಳುಳ್ಳ. ತ್ರಿಯಾಮಾಂ-ರಾತ್ರಿಗಳನ್ನು. ಕದಾ-ಯಾವಾಗ, ನೇಷ್ಯಾಮಃ ಹೊಂದುತ್ತೇವೆ।೮೬॥

ತಾತ್ಪರ್ಯ—ಈ ಶ್ಲೋಕದಲ್ಲಿಯೂ ಶಾಂತಿಯನ್ನೇ ಹೇಳುತ್ತಾನೆ. ಅದು ಹೇಗೆಂದರೆ;—ಸಕಲ ದ್ರವ್ಯವನ್ನು ದಾನಮಾಡಿ ಹೆಚ್ಚಾದ ವ್ಯಾಮೋಹವುಳ್ಳ ಈ ಸಂಸಾರದಲ್ಲಿ ಕಡೇಭಾಗದಲ್ಲಿ ಒಳ್ಳೆ ಗತಿಯಿಲ್ಲವೆಂದು ದೈವಗತಿಯನ್ನು ಯೋಚಿಸಿ ಗ್ರಾಮವನ್ನು ಬಿಟ್ಟು ಪುಣ್ಯಾರಣ್ಯಕ್ಕೆ ಹೋಗಿ ಅಲ್ಲಿ ಈಶ್ವರನ ಪಾದಧ್ಯಾನಮಾಡುತ್ತ ಶರಚ್ಚಂದ್ರ ಚಂದ್ರಿಕೆಯಿಂದ ವ್ಯಾಪ್ತವಾದ ರಾತ್ರಿಕಾಲಗಳನ್ನು ಯಾವಾಗ ಕಳೆವೆವು. ಅಂದರೆ ನಿಶ್ಚಿಂತರಾಗಿ ತಪೋವನದಲ್ಲಿ ಪರಮೇಶ್ವರನ ಧ್ಯಾನಮಾಡುತ್ತಾ ಬೆಳದಿಂಗಳಿಂದ ಕೂಡಿದ ರಾತ್ರಿಗಳನ್ನು ಕಳೆಯುವವರು ಧನ್ಯರೆಂದು ತಾತ್ಪರ್ಯ. ॥೮೬॥

ಶ್ಲೋ॥ ಕದಾವಾರಾಣಸ್ಯಾಮಮರತಟಿನೀರೋಧಸಿವಸನ್
ವಸಾನಃಕೌಪೀನಂಶಿರಸಿನಿದಧಾನೋಽಂಜಲಿಪುಟಂ ॥ ಅ
ಯೇಗೌರೀನಾಥತ್ರಿಪುರಹರಶಂಭೋ ತ್ರಿನಯನಪ್ರ
ಸೀದೇತಿಕ್ರೋಶನ್ನಿಮಿಷಮಿವನೇಷ್ಯಾಮಿದಿವಸಾನ್ ॥

ಟೀಕು॥ ವಾರಾಣಸ್ಯಾಂ-ಕಾಶಿಯಲ್ಲಿ, ಅಮರತಟಿನೀರೋಧಸಿ ಅಮರತಟಿನೀ-ದೇವಗಂಗೆಯು, ರೋಧಸಿ-ಗಟ್ಟದಲ್ಲಿ (ಅಥವಾ ತೀರದಲ್ಲಿ,) ಕೌಪೀನಂ-ಕೌಪೀನವನ್ನು, ವಸಾನಃ-ಧರಿಸಿಕೊಂಡವನಾಗಿ, ಅಹಂ-ನಾನು, ಶಿರಸಿ-ತಲೆಯಲ್ಲಿ, ಅಂಜಲಿಪುಟಂಯಥಾತಥಾ - ಕೈಗಳನ್ನು ಜೋಡಿಸಿಕೊಳ್ಳೋಣ ಹೇಗೋಹಾಗೆ (ಅಥವಾ) ಅಂಜಲಿಪುಟಂ ಯಥಾತಥಾ-ಅಂಜಲಿ-ಬೊಗಸೆಯು, ಪುಟಂಯಥಾತಥಾ- ಪ್ರದೇಶಗಳುಳ್ಳೋಣ ಹೇಗೋಹಾಗೆ, ಅಯೇ- ಎಲೈ, ಗೌರೀನಾಥ-ಗೌರೀಕಾಂತನೆ, ತ್ರಿಪುರಹರ-ತ್ರಿಪುರಸಂಹಾರಕನೆ, ತ್ರಿನಯನ-ಮೂರು ಕಣ್ಣುಗಳುಳ್ಳವನೆ, ಶಂಭೋ-ಪರಮೇಶ್ವರನೆ, ಪ್ರಸೀದ- ಪ್ರಸನ್ನನಾಗು, ಇತಿ- ಹೀಗೆಂದು, ಕ್ರೋಶನ್- ದೈನ್ಯದಿಂದ ಕೂಗುತ್ತಾ ಇರುವನಾಗಿ, ದಿವಸಾನ್- ದಿನಗಳನ್ನು, ನಿಮಿಷಮಿವ - ಕ್ಷಣಕಾಲದೋಪಾದಿಯಲ್ಲಿ, ಕದಾ ಯಾವಾಗ, ನೇಷ್ಯಾಮಿ-ಕಳೆಯುತ್ತೇನೆ ।೮೭।

ತಾತ್ಪರ್ಯ— ಈ ಶ್ಲೋಕದಲ್ಲೂ ಶಿವನವಂದನೆ ಹೇಳುತ್ತಾನೆ. ತಾನು ಕಾಶೀಕ್ಷೇತ್ರದಲ್ಲಿ ಗಂಗಾನದಿಯು ಗಟ್ಟಿನಲ್ಲಿ ವಿರಕ್ತಭಾವದಿಂದ ಕೌಪೀನಮಾತ್ರ ಧಾರಣೆ ಮಾಡಿಕೊಂಡು ದಿಗಂಬರನಾಗಿ ಎರಡು ಕರಗಳಂ ಜೋಡಿಸಿ ತಲೆಯಮೇಲೆ ಇಟ್ಟುಕೊಂಡು ಗೌರೀನಾಥ ತ್ರಿನಯನ ತ್ರಿಪುರಹರ ಶಂಭೋ ಎಂದೊರಲುತ್ತಾ ಅಥವಾ ಮೊರೆಇಡುತ್ತಾ ಯಾವಾಗ ದಿವಸಗಳನ್ನು ನಿಮಿಷವೋಪಾದಿಯಲ್ಲಿ ಕಳೆಯುತ್ತೇನೋ ಅಂದರೆ ವಿರಕ್ತನಾಗಿ ಕಾಶಿಯಲ್ಲಿ ಗಂಗಾತೀರದಲ್ಲಿ ಕೌಪೀನಮಾತ್ರ ಧಾರಣೆ ಮಾಡಿಕೊಂಡು ಕೈಗಳಂ ಜೋಡಿಸಿಕೊಂಡು ಈಶ್ವರನನ್ನು ಮೊರೆಯಿಡುವದು ಉತ್ತಮವೆಂದು ತಾತ್ಪರ್ಯ. ॥೮೭॥

ಶ್ಲೋ॥ ಸ್ನಾತ್ವಾಗಾಂಗೈಃಪಯೋಭಿಃಶುಚಿಕುಸುಮಫಲೈರ
ರ್ಚಯಿತ್ವಾವಿಭೋತ್ವಾಂಧ್ಯೇಯೇಧ್ಯಾನಂನಿವೇಶ್ಯ
ಕ್ಷಿತಿಧರಕುಹರಗ್ರಾವಪರ್ಯಂಕಮೂಲೇ । ಆತ್ಮಾರಾ
ಮಃಫಲಾಶೀಗುರುವಚನರತಸ್ತ್ವತ್ಪ್ರಸಾದಾತ್ಸ್ಮರಾ
ರೇದುಃಖಂಮೋಕ್ಷ್ಯೇಕದಾಹಂಸಮಕರಚರಣೇಪುಂಸಿ
ಸೇವಾಸಮುತ್ಥಂ ॥ ೮೮ ॥

ಟೀಕು ॥ ಗಾಂಗೈಃ- ಗಂಗಾಸಂಬಂಧವಾದ, ಪಯೋಭಿ - ಜಲಗಳಿಂದ, ಸ್ನಾತ್ವಾ- ಸ್ನಾನಮಾಡಿ, ಹೇವಿಭೋ- ಎಲೈಸ್ವಾಮಿ, ಶುಚಿಫಲಕುಸುಮೈಃ- ಶುಚಿ- ಪರಿಶುದ್ಧವಾದ, ಫಲ-ಫಲಗಳಿಂದಲು, ಕುಸುಮೈಃ-ಪುಷ್ಪಗಳಿಂದಲೂ, ತ್ವಾಂ-ನಿನ್ನನ್ನು. ಅರ್ಚಯಿತ್ವಾ-ಪೂಜಿಮಾಡಿ, ಧ್ಯೇಯೇ- ಧ್ಯಾನಮಾಡುವದಕ್ಕೆ ಯೋಗ್ಯವಾದ ನಿನ್ನ ಚರಣಾರವಿಂದದಲ್ಲಿ, ಧ್ಯಾನಂ- ಸ್ಮರಣೆಯನ್ನು, ನಿವೇಶ್ಯ-ಇರಿಸಿ, ಕ್ಷಿತಿಧರಕುಹರಗ್ರಾವಪರ್ಯಂಕಮೂಲೇ- ಕ್ಷಿತಿಧರ- ಪರ್ವತಗಳ, ಕುಹರ- ಸಂದಿಗಳಲ್ಲಿ, (ಅಥವಾ ಬಿಲಗಳಲ್ಲಿ) ಇರುವ, ಗ್ರಾವ- ಪಾಷಾಣಗಳೆಂಬುವ, ಪರ್ಯಂಕ-ಮಂಚಗಳ, ಮೂಲೇ- ಕೋಣದಲ್ಲಿ, ಫಲಾಶೀ-ಫಲಾದಿಗಳನ್ನು, ಅಶನಮಾಡುವವನಾಗಿ, ಅಹಂ- ನಾನು, ಆತ್ಮಾರಾಮಃಸನ್- ಆತ್ಮಧ್ಯಾನಪರನಾಗಿ, ಗುರುವಚನರತಃ-ಗುರುವಚನ-ಗುರುಗಳವಾಕ್ಯದಲ್ಲಿ, ಆಸಕ್ತನಾಗಿ, ಸ್ಮರಾರೇ ಎಲೈಪರಮೇಶ್ವರನೆ, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದದೆಸೆಯಿಂದ, ಸಮಕರಚರಣೇ-ಸಮಕರ- ಮಕರರೇಖೆಯಿಂದಕೂಡಿದ, ಚರ

ಣೇ-ಪಾದಗಳುಳ್ಳ, ಪುಂಸಿ-ಪುರುಷನಲ್ಲಿ, ಸೇವಾಸಮುತ್ಥಂ ಸೇವಾ- ಸೇವೆಯಿಂದ, ಸಮುತ್ಥಂ-ಹುಟ್ಟಿದಂಥ, ದುಃಖಂ-ದುಃಖವನ್ನು, ಕದಾ- ಯಾವಾಗ, ಮೋಕ್ಷ್ಯೇ- ಬಿಡುತ್ತೇನೆ, ||೮೭||

ತಾತ್ಪರ್ಯ— ಈ ಶ್ಲೋಕದಲ್ಲಿಯೂ ಪರಮೇಶ್ವರನಲ್ಲಿ ಧ್ಯಾನ ಭಕ್ತಿ ಇವುಗಳನ್ನು ಹೇಳುತ್ತಾನೆ. ಅದು ಹೇಗೆಂದರೆ:— ಗಂಗಾನದಿಯ ಉದಕದಿಂದ ಸ್ನಾನಮಾಡಿ ಶುಚಿರ್ಭೂತನಾಗಿ ಪರಿಶುದ್ಧವಾದ ಕುಸುಮಗಳಿಂದಲು ಫಲಗಳಿಂದಲು ನಿನ್ನನ್ನು ಪೂಜೆಮಾಡಿ ಧ್ಯಾನಮಾಡುವದಕ್ಕೆ ಯೋಗ್ಯವಾದ ನಿನ್ನ ಚರಣಾರವಿಂದದಲ್ಲಿ ಮನಸ್ಸನ್ನು ಇಟ್ಟು ಧ್ಯಾನಿಸುತ್ತಾ ಫಲಾಹಾರಗಳನ್ನು ಮಾಡಿ ಆತ್ಮಾರಾಮನಾಗಿ ಅಂದರೆ "ರಮಂತೇಯೋಗಿನೋನಂತೇ ಸತ್ಯಾನಂದೇಚಿದಾತ್ಮನಿ" ಎಂಬುವ ಶ್ರುತಿಪ್ರಮಾಣದಿಂದ ಸತ್ಯಾನಂದ ಸ್ವರೂಪನಾಗಿಯೂ ಚಿನ್ಮಯನಾಗಿಯೂ ಇರುವ ಪರಮಾತ್ಮನ ಧ್ಯಾನಪರನಾಗಿ ಗುರೂಪದೇಶದ ವಾಕ್ಯದಲ್ಲಿ ಆಸಕ್ತಿ ಇಟ್ಟು ಬೆಟ್ಟಗಳ ಸಂದುಗಳಲ್ಲಿರುವ ವಿಸ್ತಾರವಾದ ಕಲ್ಲುಗಳಲ್ಲಿ ಶಯನ ಮಾಡಿಕೊಂಡು ವಿಹರಿಸುತ್ತ ಮಹಾಪುರುಷರ ಸೇವೆಯನ್ನು ಅಂದರೆ ರಾಜಸೇವೆಯನ್ನು ಮಾಡುವದರಿಂದ ಉಂಟಾಗುವ ದುಃಖವನ್ನು ಯಾವಾಗ ಬಿಡುತ್ತೇನೋ ಎಂದನು ಅಂದರೆ ರಾಜಸೇವೆ ಮಾಡದೆ ಅರಣ್ಯದಲ್ಲಿ ಶಿವಧ್ಯಾನಮಾಡುತ್ತಾ ತಪಸ್ಸು ಮಾಡುವದು ಹೇಳಿದನೆಂದು ತಾತ್ಪರ್ಯ. ಸಾಮುದ್ರಿಕಶಾಸ್ತ್ರೇ || ಮಕರೋಮತ್ಸ್ಯರೇಖಾಚಮೀನರೇಖಾಕೃತಿಃಪದೇ|| ಮಹಾಧನೀಮಹಾಭೋಗೀದಾತಾಪರೇ ಧೂರ್ಜಯೀರ್ವಚೇತಿಲಕ್ಷಣಾತ್ || ||೮೮||

ಶ್ಲೋ|| ಏಕಾಕೀನಿಸ್ಪೃಹಶ್ಶಾಂತಃಪಾಣಿಪಾತ್ರೋದಿಗಂಬರಃ |
ಕದಾಶಂಭೋಭವಿಷ್ಯಾಮಿಕರ್ಮನಿರ್ಮೂಲನಕ್ಷಮಃ||೮೯||

ಟೀಕು|| ಹೇಶಂಭೋ-ಎಲೈ ಈಶ್ವರನೆ, ಅಹಂ ನಾನು, ಏಕಾಕೀ- ಒಬ್ಬನಾಗಿ, ನಿಸ್ಪೃಹಃ - ಆಶಾರಹಿತನಾದವನಾಗಿ, ಶಾಂತಃ - ಶಾಂತಚಿತ್ತನಾಗಿ, ದಿಗಂಬರಃ-ದಿಕ್- ದಿಕ್ಕುಗಳೇ, ಅಂಬರಃ- ವಸ್ತ್ರವುಳ್ಳವನಾಗಿ, ಪಾಣಿಪಾತ್ರಃ- ಕರಪಾತ್ರೆಯುಳ್ಳವನಾಗಿ, ಕದಾ-ಯಾವಾಗ, ಕರ್ಮನಿರ್ಮೂಲನಕ್ಷಮಃ-ಕರ್ಮ- ವ್ಯಾಪಾರದ, ನಿರ್ಮೂಲನ-ನಾಶದಲ್ಲಿ ಕ್ಷಮಃ- ಸಮರ್ಥನಾದವನು, ಭವಿಷ್ಯಾಮಿ-ಆಗುತ್ತೇನೆ. ||೮೯||

ತಾತ್ಪರ್ಯ—ಈ ಶ್ಲೋಕದಲ್ಲಿ ತಪಸ್ಸು ಮಾಡುವದು ಉತ್ತಮವೆಂದು ಹೇಳುತ್ತಾನೆ. ಅದು ಹೇಗೆಂದರೆ:—ಎಲೈ ಪರಮೇಶ್ವರನೆ ಈ ಸಂಸಾರ ಬಾಧೆಯಿಲ್ಲದೆ ಅಂದರೆ ದಾರಾಪುತ್ರಾದಿಗಳು ಇಲ್ಲದೆ ಒಬ್ಬನೆ ಆಗಿ ಪ್ರಪಂಚದ ಆಶೆಯನ್ನು ಬಿಟ್ಟು ದಿಗಂಬರನಾಗಿ ಕರತಲ ಭಿಕ್ಷೆಮಾಡಿಕೊಂಡು ಕರ್ಮ ನಿರ್ಮೂಲವಮಾಡಿಕೊಂಡು ಯಾವಾಗ ನಿನ್ನ ಚರಣಧ್ಯಾನದಲ್ಲಿ ಇರುತ್ತೇನೋ ಆಗ್ಯೆ ಧನ್ಯನಾಗುವೆನು ಅಂದನು. ಅಂದರೆ ಈರೀತಿಯಾಗಿರುವವರು ಕೃತಾರ್ಥರಾಗುತ್ತಾರೆ. ಸರ್ವರೂ ಶಿವಧ್ಯಾನಪರರಾಗಿರಬೇಕೆಂದು ತಾತ್ಪರ್ಯ.

ಶ್ಲೋ॥ ಪಾಣಿಂಪಾತ್ರಯತಾಂನಿಸರ್ಗಶುಚಿನಾಭೈಕ್ಷ್ಯೇಣಸಂ
ತುಷ್ಯತಾಂ ಯತ್ರಕ್ವಾಪಿನಿಷೀದತಾಂಬಹುತೃಣಂ
ವಿಶ್ವಂಮುಹುಃಪಶ್ಯತಾಂ । ಅತ್ಯಾಗೇಪಿತನೋರಖಂ
ಡಪರಮಾನಂದಾವಬೋಧಸ್ಪೃಶಾ ಮಧ್ವಾಕೋಪಿ
ಶಿವಪ್ರಸಾದಸುಲಭಸ್ಸಂಪತ್ಸ್ಯತೇಯೋಗಿನಾಂ॥೯೦॥

ಟೀಕು॥ ಪಾಣಿಂ-ಹಸ್ತಪ್ರದೇಶವನ್ನು, ಪಾತ್ರೀಯತಾಂ-ಅಶನಸಾಧನ ಪಾತ್ರೆಗಳನ್ನಾಗಿ, ಮಾಡಿಕೊಳ್ಳುವ, ನಿಸರ್ಗಶುಚಿನಾ ನಿಸರ್ಗ-ನೈಜವಾಗಿ, ಶುಚಿನಾ-ಶುದ್ಧವಾದಂಥ, ಭೈಕ್ಷ್ಯೇಣ-ಭಿಕ್ಷಾಪದಾರ್ಥದ ಸಮುದಾಯದಿಂದ (ಅಥವಾ ಭಿಕ್ಷಾನ್ನಸಮುದಾಯದಿಂದ) ಸಂತುಷ್ಯತಾಂ-ಪರಿತೋಷವನ್ನು ಹೊಂದುವ, ಯತ್ರಕ್ವಾಪಿ-ಎಲ್ಲಿ ಆದಾಗ್ಯೂ, ಅಂದರೆ ಸ್ಮಶಾನಾರಣ್ಯಗಳಲ್ಲಿ ಎಲ್ಲಿಯಾದರೂ, ನಿಷೀದತಾಂ-ವಿಶ್ರಾಂತಿ ಸುಖವನ್ನನುಭವಿಸುವ, ಮುಹುಃ-ಬಾರಿಬಾರಿಗೂ, ವಿಶ್ವಂ-ಜಗತ್ತನ್ನು, (ಅಥವಾಪ್ರಪಂಚವನ್ನು) ತೃಣಂ-ಹುಲ್ಲನ್ನಾಗಿ, ಪಶ್ಯತಾಂ-ಭಾವಿಸುತ್ತಿರುವ, (ಅಥವ ನೋಡುತ್ತಿರುವ) ತನೋಃ-ಶರೀರದ ಅತ್ಯಾಗೇಪಿ-ದೇಹಸಂಬಂಧ ಶೂನ್ಯತ್ವಭಾವದಲ್ಲಿಯೂ, ದೇಹನಾಶವಲ್ಲಿಯೂ, ಅಖಂಡಪರಮಾನಂದಾವಬೋಧಸ್ಪೃಶಾಂ-ಅಖಂಡ ಅವಿಚ್ಛಿನ್ನವಾದ, ಪರಮಾನಂದ-ಬ್ರಹ್ಮಾನಂದದ, ಅವಬೋಧ-ಅನುಭವವನ್ನು, ಸ್ಪೃಶಾಂ-ಸ್ಪರ್ಶಮಾಡುತ್ತಿರುವ (ಅಥವಾ ಅನುಭವಿಸುತ್ತಲಿರುವ) ಯೋಗಿನಾಂ-ಧ್ಯಾನತತ್ಪರರಾದಂಥಾ ಯೋಗಿಗಳಿಗೆ, ಶಿವಪ್ರಸಾದಸುಲಭಃ-ಶಿವ-ಈಶ್ವರನ, ಪ್ರಸಾದ-ಅನುಗ್ರಹದಿಂದ, ಸುಲಭಃ-ಸುಖದಿಂದ ಹೊಂದುವುದಕ್ಕೆ ಯೋಗ್ಯವಾದ, ಕ್ವಾಪಿ-ಅನಿರ್ವಾಚ್ಯವಾದ, ಅಧ್ವಾ-ಮೋಕ್ಷಮಾರ್ಗವು, ಸಂಪತ್ಸ್ಯತೇ-ಸಂಪ್ರತಿ ಪನ್ನವಾಗಿ ಇದೆ, ಅಥವಾ ಅನುಕೂಲವಾದದ್ದಾಗಿದೆ

ತಾತ್ಪರ್ಯ—ಈರೀತಿ ಯೋಗಿಜನಗಳಿಗೆ ಶಿವಾನುಗ್ರಹದಿಂದ ಮೋಕ್ಷಮಾರ್ಗವು ಅತಿಸುಲಭವಾಗಿ ಪ್ರಾಪ್ತವಾಗುವದೆಂದು ಹೇಳುತ್ತಾನೆ. ಅದು ಹೇಗೆಂದರೆ;—ಕರತಲಗಳನ್ನು ಭಿಕ್ಷಾಪಾತ್ರಗಳನ್ನಾಗಿ ಮಾಡಿಕೊಂಡು (ಅಂದರೆ) ಕರತಲಗಳಲ್ಲಿ ಯಾಚನೆಮಾಡಿ ಯಾಚಿತ ಪದಾರ್ಥವನ್ನು ಕರಪಾತ್ರೆಯಲ್ಲಿಯೇ ಆಹಾರ ಮಾಡುತ್ತಾ ಶುಚಿಯಾದ ಭಿಕ್ಷಾಪದಾರ್ಥದಿಂದಲೆ ಸಂತೋಷವನ್ನು ಹೊಂದುತ್ತಾ ಸ್ಮಶಾನಾರಣ್ಯಗಳೆಂಬ ಭೇದವಿಲ್ಲದೆ ವಿಶ್ರಾಂತಿಸುಖವನ್ನು ಅನುಭವಿಸುತ್ತಾ ಪರಿದೃಶ್ಯಮಾನವಾದ ಜಗತ್ತನ್ನು (ಅಥವಾ) ಪ್ರಪಂಚವನ್ನು ಹುಲ್ಲಿನಂತೆ ನೋಡುತ್ತಾ ದೇಹಾವಸಾನದಲ್ಲಿಯೂ ಕೂಡ ಅಖಂಡ ಶಿವಾನಂದವನ್ನು ಅನುಭವಿಸುತ್ತಾಯಿರುವ ಯೋಗಿಜನಗಳಿಗೆ ಒಂದಾನೊಂದಾದ ಶಿವಾನುಗ್ರಹದಿಂದ ಲಭ್ಯವಾದ ಮೋಕ್ಷಮಾರ್ಗವು ಸಿದ್ಧವಾಗಿ ಇರುತ್ತದೆ ಎಂದು ಭಾವವು ||೯೦||

## ಅವಧೂತ ಚರ್ಯಾರಂಭವು.

ಶ್ಲೋ|| ಕೌಪೀನಂಶತಖಂಡಜರ್ಝರತರಂ ಕಂಥಾಪುನಸ್ತಾ
ದೃಶೀನೈಶ್ಚಿಂತ್ಯಂನಿರಪೇಕ್ಷಭೈಕ್ಷ್ಯಮಶನಂನಿದ್ರಾಸ್ಮ
ಶಾನೇವನೇ | ಸ್ವಾತಂತ್ರ್ಯೇಣನಿರಂಕುಶಂವಿಹರಣಂ
ಸ್ವಾಂತಂಪ್ರಶಾಂತಂಸದಾಸ್ಥೈರ್ಯಂಯೋಗಮಹೋ
ತ್ಸವೇಪಿಚಯದಿತ್ರೈಲೋಕ್ಯರಾಜ್ಯೇನಕಿಂ ||೯೧||

ಟೀಕೆ|| ಶತಖಂಡಜರ್ಝರತರಂ-ಶತಖಂಡ-ನೂರು ತುಂಡುಗಳಿಂದ, ಜರ್ಝರತರಂ - ಅತ್ಯಂತಜೀರ್ಣವಾದ, ಕೌಪೀನಂ ಕೌಪೀನವು, ಕಂಥಾಪುನಃ-ಕಂತೆಯಾದರೋ, ತಾದೃಶೀ-ಅಂಥಾದ್ದಾಗಿಯೇ ಇರುವದಾಗಿಯೂ, ನೈಶ್ಚಿಂತ್ಯಂ-ಯೋಚನೆ ಇಲ್ಲದ ಇರುವ, ಭೈಕ್ಷ್ಯಂ-ಭಿಕ್ಷಾಸಮೂಹದಪದಾರ್ಥದ, ಅಶನಂ ಭೋಜನವು, ಸ್ಮಶಾನೇ-ಸ್ಮಶಾನದಲ್ಲಿಯಾಗಲಿ, ವನೇ-ವನದಲ್ಲಿಯಾಗಲಿ, ನಿದ್ರಾ-ನಿದ್ರೆಯು, ನಿರಂಕುಶಂಯಥಾತಥಾ- ನಿರರ್ಗಳವಾಗೋಣಹೇಗೋಹಾಗೆ, ಸ್ವಾತಂತ್ರ್ಯೇಣ-ಪರಛಂದಾನುವರ್ತನೆ ಇಲ್ಲದೆ (ಅಥವಾ ಸ್ವತಂತ್ರದಿಂದ) ವಿಹಾರವಾಡುವದು, ಸದಾ-ಯಾವಾಗಲು, ಪ್ರಶಾಂತಂ-ಹೆಚ್ಚಾದ ಶಾಂತಿಗುಣವು, ಯೋಗಮಹೋತ್ಸವೇಪಿ-ಯೋಗ- ಆತ್ಮಧ್ಯಾನಯೋಗವೆಂಬುವ, ಮಹಾ- ಅಧಿಕವಾದ, ಉತ್ಸವೇಪಿ- ಸಂತೋಷದಲ್ಲಿಯೂಕೂಡ.

ಸ್ಥೈರ್ಯಂಯದಿ ಸ್ಥಿರತ್ವವಿರುವವಾದರೆ, ತ್ರೈಲೋಕ್ಯರಾಜ್ಯೇನ-ತ್ರಿಲೋಕಾಧಿಪತಿತ್ವದಿಂದ, ಕಿಂ-ಏನುಪ್ರಯೋಜನ, ॥೯೧॥

ಶಿವಾರ್ಚನ ಪದ್ಧತಿಸ್ಸಮಾಪ್ತಾ.

ತಾತ್ಪರ್ಯ—ಈಶ್ವರಾರ್ಚನೆಗೆ ಮೋಕ್ಷೋಪಯೋಗ್ಯ ಪರಿಶುದ್ಧಭಾವ ಫಲಕತ್ವಾದತ್ಯಾಗೇಪಿತನೋರಖಂಡ ಪರಮಾನಂದಾವಬೋಧ ಸ್ಪೃಶಾಮಿತ್ಯುಪಕ್ರಮ್ಯ ಇಮಾಸೀಂತಾವ ದವಧೂತಚರ್ಯಾಮಾಹ-ಅಂದರೆ ಅವಧೂತಚರ್ಯವನ್ನು ಹೇಳುತ್ತಾನೆ. ಅದು ಹೇಗಂದರೆ;—ಶತಛಿದ್ರವಾದ ಕೌಪೀನವು ಮತ್ತು ಹೊದ್ದುಕೊಳ್ಳುವ ಬಂತೆಯೂ ಸಹ ಉಳ್ಳವನಾಗಿ ಭಿಕ್ಷಾಹಾರವನ್ನು ಮಾಡಿಕೊಂಡು ಸ್ಮಶಾನಾರಣ್ಯಗಳಲ್ಲಿ ಎಲ್ಲಿಯಾದರು ನಿದ್ರಮಾಡುತ್ತಾ ಯಾವಾಗ್ಯೂ ಯೋಗದಲ್ಲಿಯೆ ಬುದ್ಧಿ ಇಟ್ಟುಕೊಂಡು ಶಾಂತಮನಸ್ಕನಾಗಿ ಸ್ವತಂತ್ರನಾಗಿರುವ ಮಹಾಯೋಗಿಗೆ ತ್ರಿಲೋಕಾಧಿಪತ್ಯದಿಂದ ಏನೂ ಪ್ರಯೋಜನವಿಲ್ಲವೆಂದು ಭಾವವು. ಅಂದರೆ ದೇಶಾಭಿಮಾನಬಿಟ್ಟು ಕೇವಲ ಶಾಂತಿಯಿಂದ ಆತ್ಮಾನುಸಂಧಾನದಲ್ಲಿಇರುವ ಮಹಾಪುರುಷನಿಗೆ ತ್ರಿಲೋಕಾಧಿಪತ್ಯದಲ್ಲು ಪ್ರಯೋಜನವಿಲ್ಲವೆಂದು ತಾತ್ಪರ್ಯ. ॥೯೧॥

ಶ್ಲೋ॥ ಬ್ರಹ್ಮಾಂಡಂಮಂಡಲೀಮಾತ್ರಂ ಕಿಂಲೋಭಾಯ
ಮನಸ್ವಿನಃ। ಶಫರೀಸ್ಫುರಿತೇನಾಬ್ಧಿಃಕ್ಷುಬ್ಧೋನಖಲು
ಜಾಯತೇ ॥೯೨॥

ಟೀಕು। ಬ್ರಹ್ಮಾಂಡಂ - ಈ ಬ್ರಹ್ಮಾಂಡವು, ಮಂಡಲೀ ಮಾತ್ರಂ - ಮಂಡಲಾಕಾರವಾಗಿ ಮಾಡಲ್ಪಟ್ಟ, ಬಿಂಬಮಾತ್ರ ಅಥವಾ ಗುಂಡಾಗಿರುವ ರೇಖೆಯು, ಏತತ - ಇದು, ಮನಸ್ವಿನಃ - ಬುದ್ಧಿಶಾಲಿಗೆ, ಲೋಭಾಯ- ಆಸೆಗೋಸ್ಕರ, ಭವತಿ- ಆಗುತ್ತದೆಯೋ ಏನು ನಭವತಿ- ಆಗುವದಿಲ್ಲ, ಶಫರೀಸ್ಫುರಿತೇನ- ಶಫರೀ- ಮತ್ಸ್ಯದ, ಸ್ಫುರಿತೇನ- ಸ್ಫುರಣೆಯಿಂದ. (ಅಥವಾ ಲಂಘನದಿಂದ) ಅಬ್ಧಿಃ- ಸಮುದ್ರವು, ಕ್ಷುಬ್ಧಃ - ಕ್ಷೋಭಿಸಲ್ಪಡತಕ್ಕದ್ದು, ನಜಾಯತೇಖಲು- ಆಗುವದಿಲ್ಲವಷ್ಟೆ, ॥೯೨॥

ತಾತ್ಪರ್ಯ—ಈ ಶ್ಲೋಕದಲ್ಲಿ ತ್ರಿಲೋಕಾಧಿಪತಿತ್ವವು ತುಚ್ಛವಾದದ್ದೆಂದು ಹೇಳುತ್ತಾನೆ. ಅದು ಹೇಗಂದರೆ;—ಗೋಲಾಕಾರವಾದ ಬಿಂಬರೇಖೆಯೋಪಾದಿಯಲ್ಲಿರುವ ಈ ಬ್ರಹ್ಮಕಟಾಹವು ಕೂಡ ಬುದ್ಧಿಶಾಲಿಯಾ

ದ ಯೋಗಪುರುಷನಿಗೆ ಅಸೆಗೋಸ್ಕರವಾಗಿ ಆಗುವದಿಲ್ಲ. ಯೋಗಿಯು ಬ್ರಹ್ಮಾಂಡವನ್ನೆ ಲಕ್ಷೀಕರಿಸುವದಿಲ್ಲ ಅದು ಯುಕ್ತವೇ ಸರಿ ಹೇಗೆಂದರೆ ನೀರಿನಿಂದ ಮೋಲಕ್ಕಹಾರ ವ ಕಾಲದಲ್ಲಿ ಮೀನುಗಳ ದೆಸೆಯಿಂದ ಸಮುದ್ರವು ಉಕ್ಕಿ ಅಲ್ಲಕಲ್ಲೋಲವಾಗುವದಿಲ್ಲ. ಹಾಗೆಯೇ ಬ್ರಹ್ಮಾಂಡಗೋಳ ವೆ ತೃಣವಾಗಿ ಕಾಣುವವನಿಗೆ ಅದರಲ್ಲಿ ಒಂದುಕಡೆ ಮೂಲೆಯಲ್ಲಿ ಅಡಗಿರುವ ಈ ಲೋಕಗಳನ್ನು ಆಶೆಮಾಡುವದುಂಟೆ? ಇಲ್ಲ ಎಂಬುಭಾವವು. ದೃಷ್ಟಾಂತಾಲಂಕಾರ || ||೯೭||

ಶ್ಲೋ|| ಮಾತರ್ಲಕ್ಷ್ಮಿ ಭಜಸ್ವ ಕಂಚಿದಪರಂ ಮತ್ಕಾಂಕ್ಷಿಣೀ ಮಾ
ಸ್ಮ ಭೂರ್ಭೋಗೇಷು ಸ್ಪೃಹಯಾಳವಸ್ತವ ವಶೇ ಕಾ ನಿ
ಸ್ಪೃಹಾಣಾಮಸಿ | ಸದ್ಯಃಸ್ಯೂತಪಲಾಶಪತ್ರಪುಟಿ
ಕಾಪಾತ್ರೈಃ ಪವಿತ್ರೀಕೃತೈರ್ಭಿಕ್ಷಾವಸ್ತುಭಿರೇವ ಸಂಪ್ರ
ತಿ ವಯಂ ವೃತ್ತಿಂ ಸಮೀಹಾಮಹೇ ||೯೮||

ಟೀಕು|| ಹೇಮಾತಃ. ಎಲೈ ತಾಯಿಯು, ಹೇಲಕ್ಷ್ಮಿ-ಐಶ್ವರ್ಯ ಲಕ್ಷ್ಮಿಯೇ, ತ್ವಂ - ನೀನು, ಕಂಚಿದಪರಂ - ಮತ್ತೊಬ್ಬ ಮನುಷ್ಯನನ್ನು, ಭಜಸ್ವ - ಹೊಂದು, ಮತ್ಕಾಂಕ್ಷಿಣೀ - ನನ್ನನ್ನು ಅಪೇಕ್ಷಿಸುವಳು, ಮಾಭೂಃ - ಆಗಬೇಡ, ಭೋಗೇಷು- ವಿಷಯಾದಿ ಭೋಗಗಳಲ್ಲಿ, ಸ್ಪೃಹಯಾಳವಃ - ಇಚ್ಛೆವುಳ್ಳನರು, ತವ - ನಿನ್ನ, ವಶೇ - ಸ್ವಾಧೀನದಲ್ಲಿ, ಸಂತಿ- ಇದ್ದಾರೆ, ತ್ವಂ- ನೀನು. ನಿಸ್ಪೃಹಾಣಾಂ- ಆಸೆಯಿಲ್ಲದ ನಮ್ಮಗಳಿಗೆ. ಕಾ- ಯಾರು, ಅಸಿ- ಆಗಿಯಿದ್ದೀ, ಸದ್ಯಃ- ತತ್ಕಲಕ್ಷಣದಲ್ಲಿ, ಸ್ಯೂತಪಲಾಶಪತ್ರಪುಟಿಕಾಪಾತ್ರೈಃ- ಸ್ಯೂತ - ಕೂಡಿಸಲ್ಪಟ್ಟ (ಅಥವಾ ಹಚ್ಚಲ್ಪಟ್ಟ) ಪಲಾಶಪತ್ರ- ಮುತ್ತುಗ ದೆಲೆಯ, ಪುಟಿಕಾ ತಳಪ್ರದೇಶವೆಂಬುವ, ಪಾತ್ರೈಃ - ಪಾತ್ರೆಯಲ್ಲಿ, ಪವಿತ್ರೀಕೃತೈಃ- ಪರಿಶುದ್ಧಗಳಾಗಿ ಮಾಡಲ್ಪಟ್ಟ, ಭಿಕ್ಷಾವಸ್ತುಭಿರೇವ, ಭಿಕ್ಷಮಾಡಿದ ಪದಾರ್ಥಗಳಿಂದಲೇನೆ, ಸಂಪ್ರತಿ- ಈಗ, ವಯಂ- ನಾವುಗಳು, ವೃತ್ತಿಂ- ವರ್ತನೆಯನ್ನು, ಅಥವಾ ಜೀವನವನ್ನು, ಈ ಹಾಮಹೇ- ಇಚ್ಛೈಸುತ್ತೇವೆ. (ಅಥವಾ) ಹೊಂದುತ್ತೇನೆ, |೯೮|

ತಾತ್ಪರ್ಯ—ವೈರಾಗ್ಯದ ರೀತಿಯನ್ನು ಹೇಳುತ್ತಾನೆ. ಅದು ಹೇಗೆಂದರೆ;—ಎಲೈ ಐಶ್ವರ್ಯಲಕ್ಷ್ಮಿಯೆ ನೀನು ನಮಗಿಂತಲು ಅನ್ಯವಾದ

ಮನುಷ್ಯನನ್ನು ಹೊಂದು ನಮ್ಮನ್ನು ಹೊಂದಬೇಡ ಕಾಮಭೋಗಾದಿಗ ಳಲ್ಲಿ ಇಚ್ಛೆವುಳ್ಳ ಜನಗಳು ನಿನಗೆ ವಶವಾಗಿ ಇದ್ದಾರೆ, ನಮಗೆ ನೀನು ಯಾ ರಾಗಿದ್ದೆ. ನಿನ್ನನ್ನು ನಾವು ಆಶ್ರಯಿಸುವರಲ್ಲ, ನಾವು ಪಲಾಶಪತ್ರದ ದೊನ್ನೆ ಯಲ್ಲಿ ಪರಿಶುದ್ಧವಾದ ಭಿಕ್ಷೆಮಾಡಿದ ಪದಾರ್ಥದಿಂದಲೆ ತೃಪ್ತಿಯನ್ನು ಹೊಂದುತ್ತಲಿದ್ದೇವೆ ನಮಗೆ ನಿನ್ನ ಅನುಗ್ರಹದಿಂದ ಆಗಬೇಕಾದದ್ದು ಏ ನೂ ಇರುವದಿಲ್ಲ ಎಂದು ಭಾವವು. ||೯೩||

ಶ್ಲೋ|| ಮಹಾಶಯ್ಯಾ ಪೃಥ್ವೀ ವಿಪುಲಮುಪಧಾನಂ ಭುಜಲತಾ
ವಿತಾನಂ ಚಾಕಾಶಂ ವ್ಯಜನಮನುಕೂಲೋಯಮನಿಲಃ
ಶರಚ್ಚಂದ್ರೋ ದೀಪೋ ವಿರತಿವನಿತಾಸಂಗಮುದಿತ
ಸ್ಸುಖೀ ಶಾಂತಶ್ಶೇತೇ ಮುನಿರತನುಭೂತಿರ್ನೃಪ ಇವ ||

ಟೀಕು || ಪೃಥ್ವೀ - ಭೂಮಿಯು, ಮಹಾಶಯ್ಯಾ - ಮಹಾ - ಅಧಿಕವಾದ ಶಯ್ಯಾ - ಹಾಸಿಗೆಯು, ವಿಪುಲಮುಪಧಾನಂ - ವಿಪುಲಂ - ವಿಸ್ತಾರವಾದ, ಉಪಧಾನಂ - ತಲೆದಿಂಬು, ಭುಜಲತಾ - ಲತಾಸದೃಶವಾದ ಭುಜಗಳು, ಆಕಾ ಶಂಚ ಅಂತರಿಕ್ಷವು ಕೂಡ, ವಿತಾನಂ - ಮೇಲಕಟ್ಟು, ಅಥವಾ ಉಪರಿಭಾದ ನವು, ಅನುಕೂಲಃ - ಸುಖಕರವಾದ, ಅಯಂ - ಈ, ಅನಿಲಃ - ವಾಯುವು (ಅಥವಾ ಘಾಳಿಯು) ವ್ಯಜನಂ - ಬೀಸಣಿಗೆಯು, ದೀಪಃ - ದೀಪವು, ಶರ ಚ್ಚಂದ್ರಃ - ಶರತ್ - ಶರತ್ಕಾಲದಲ್ಲಿ ಹುಟ್ಟಿದ, ಚಂದ್ರಃ - ಚಂದ್ರನು, ವಿರತಿ ವನಿತಾಸಂಗಮುದಿತಃ - ವಿರತಿ - ವಿರಕ್ತಿಯೆಂಬುವ, ವನಿತಾ - ಸ್ತ್ರೀಯು, ಸಂಗ - ಸಂಬಂಧದಿಂದ, ಮುದಿತಃ - ಸಂತುಷ್ಟನಾದ, ಸುಖೀ - ಸುಖವುಳ್ಳ ಶಾಂತಃ - ಪರಮಶಾಂತನಾದ, ಮುನಿಃ - ಕಶ್ಚಿದ್ಯೋಗೀಶ್ವರನು, ಅತನು ಭೂತಿಃ - ಅತನು - ಅಧಿಕವಾದ, ಭೂತಿಃ - ಐಶ್ವರ್ಯವುಳ್ಳ, ನೃಪ ಇವ - ರಾಜ ನೋಪಾದಿಯಲ್ಲಿ, ಶೇತೇ - ಸುಖವಾಗಿ ಮಲಗಿ ಇದ್ದಾನೆ ||೯೪||

ತಾತ್ಪರ್ಯ—ಈ ಶ್ಲೋಕದಲ್ಲಿ ಯೋಗೀಶ್ವರನಿಗೆ ಸಾರ್ವಭೌಮ ಸಾ ಮ್ಯವನ್ನು ಹೇಳುತ್ತಾನೆ. ಅದು ಹೇಗಂದರೆ;—ಯೋಗೀಶ್ವರನಿಗೆ ಅಂದ ರೆ ವಿರಾಗಿಪುರುಷನಿಗೆ ಭೂಮಿಯೇ ದೊಡ್ಡದಾದ ಹಾಸಿಗೆಯು, ತೋಳುಗ ಳೇ ಮೃದುವಾದ ತಲೆದಿಂಬು, ಆಕಾಶವೇ ಮೇಲುಹೊದ್ದಿಕೆ, ಅಖಂಡ ಬ್ರ ಹ್ಮಾಂಡದಲ್ಲಿ ಬೀಸುವ ಗಾಳಿಯೇ ಬೀಸಣಿಗೆ, ಶರತ್ಕಾಲದಲ್ಲಿ ಹುಟ್ಟಿದ ನಿ ರ್ಮಲನಾದ, ಚಂದ್ರನೆ ದೀಪವು ಹೀಗೆ ಇರಲು ಯೋಗಿಯು ಉಪರತಿಅಂದ

ರೆ ಉಪಶಾಂತಿಯೆಂಬುವ ಸ್ತ್ರೀಸಂಬಂಧದಿಂದ ಹುಟ್ಟಿದ ಸಂತೋಷವುಳ್ಳ ವನಾದ್ದರಿಂದಲೇ ಅತಿಶಾಂತನಾಗಿ ಹೆಚ್ಚಾದ ಐಶ್ವರ್ಯವುಳ್ಳ ರಾಜನೋಪಾದಿಯಲ್ಲಿ ಸಂತೋಷದಿಂದ ಮಲಗಿಕೊಂಡು ಇದ್ದಾನೆ, ಸುಖದಿಂದ ವಿಹರಿಸಿಕೊಂಡು ಇದ್ದಾನೆಂದು ಭಾವವು. ॥ ರೂಪಕಸಂಕೀರ್ಣೋ ಯಮುಪಮಾಲಂಕಾರಃ ॥ ತಥಾ ಉಪಮಾನಾನ್ನೃಪಾದುಪಮೇಯಸ್ಯ ಮುನೇರವಿಚ್ಛಿನ್ನಶಯ್ಯಾದಿ ಸಂಪನ್ನತ್ವೇನಾಧಿಕ್ಯಪ್ರತೀತೇರ್ವ್ಯತಿರೇಕೋವ್ಯಂಜತಇತ್ಯಲಂಕಾರೇಣಾಲಂಕಾರಧ್ವನಿಃ. ॥೯೦॥

ಶ್ಲೋ॥ ಭಿಕ್ಷಾಶೀಜನಮಧ್ಯಸಂಗರಹಿತಸ್ಸ್ವಾಯತ್ತಚೇಷ್ಟ
ಸ್ಸದಾಹಾನಾದಾನವಿರಕ್ತಮಾರ್ಗನಿರತಃಕಶ್ಚಿತ್ತಪ
ಸ್ವೀಸ್ಥಿತಃ ॥ ರಥ್ಯಾಕೀರ್ಣವಿಶೀರ್ಣಜೀರ್ಣವಸನ
ಸ್ಸಂಪ್ರಾಪ್ತಕಂಥಾಸನೋನಿರ್ಮಾನೋನಿರಹಂಕೃತಿ
ಶ್ಶಮಸುಖಾಭೋಗೈಕಬದ್ಧಸ್ಪೃಹಃ ॥೯೧॥

ಟೀಕು ॥ ಭಿಕ್ಷಾಶೀ - ಭಿಕ್ಷಾನ್ನವನ್ನು ಭೋಜನ ಮಾಡುತ್ತಲಿರುವ, ಜನಮಧ್ಯಸಂಗರಹಿತಃ ಜನ- ಪ್ರಜೆಗಳ, ಮಧ್ಯ- ಮಧ್ಯಪ್ರದೇಶದ, ಸಂಗ- ಸಂಬಂಧದಿಂದ, ರಹಿತಃ - ಬಿಡಲ್ಪಟ್ಟ, ಕಿಂತು - ಮತ್ತೇನೆಂದರೋ, ಸದಾ- ಸರ್ವಕಾಲದಲ್ಲು, ಸ್ವಾಯತ್ತಚೇಷ್ಟಃ - ಸ್ವಾಯತ್ತ - ತನ್ನ ಅಧೀನವಾದ, ಚೇಷ್ಟಃ - ವ್ಯಾಪಾರಗಳುಳ್ಳ, ತಥಾ - ಹಾಗೆ, ಹಾನಾದಾನವಿರಕ್ತಮಾರ್ಗನಿರತಃ- ಹಾನಾದಾನ - ಪರಿತ್ಯಾಗಸ್ವೀಕಾರಗಳಲ್ಲಿ, ವಿರಕ್ತ - ನಿಸ್ಪೃಹವಾದ ಮಾರ್ಗ- ದಾರಿಯಲ್ಲಿ, ನಿರತಃ ಆಸಕ್ತನಾದ, ತಥಾ - ಹಾಗೆಯೇ, ರಥ್ಯಾಕೀರ್ಣವಿಶೀರ್ಣಜೀರ್ಣವಸನಃ - ರಥ್ಯಾ - ರಥಮಾರ್ಗದಲ್ಲಿ, ಆಕೀರ್ಣ- ಅನಾದರದಿಂದ ನಿಕ್ಷಿಪ್ತವಾದ, ವಿಶೀರ್ಣ - ಸೀಳಿ ಇರುವ, ಜೀರ್ಣ - ಅತಿ ಹಳೆಯ ದಾದ, ವಸನಃ- ವಸ್ತ್ರವುಳ್ಳ, ಸಂಪ್ರಾಪ್ತಕಂಥಾಸನಃ- ಸಂಪ್ರಾಪ್ತ- ಹೊಂದಲ್ಪಟ್ಟ, ಕಂಥಾ - ವಸ್ತ್ರವೆ, ಆಸನಃ - ಆಸನವಾಗಿವುಳ್ಳವನಾದ ಕಾರಣವೆ, ನಿರ್ಮಾನಃ - ಹೋದಂಥಾಮಾನವುಳ್ಳ, ನಿರಹಂಕೃತಿಃ- ಅಹಂಕಾರ ಶೂನ್ಯನಾದ, ಶಮಸುಖಾಭೋಗೈಕಲಬ್ಧಸ್ಪೃಹಃ- ಶಮ- ಶಾಂತಿಯಿಂದ ಉಂಟಾದ, ಸುಖ- ಸುಖದ, ಆಭೋಗ- ಅನುಭವದಲ್ಲಿ, ಏಕ- ಮುಖ್ಯವಾಗಿ ಲಬ್ಧ- ಹೊಂದಲ್ಪಟ್ಟ, ಸ್ಪೃಹಃ - ಇಚ್ಛೆಯುಳ್ಳ, ಕಶ್ಚಿತ್- ಒಬ್ಬಾನೊಬ್ಬನಾದ, ತಪಸ್ವೀ- ಯೋಗಿಯೂ, ಸ್ಥಿತಃ- ಇದ್ದಾನೆ. ॥೯೧॥

ತಾತ್ಪರ್ಯ — ಈ ಶ್ಲೋಕದಲ್ಲಿ ಯೋಗಿಯ ರೀತಿಯನ್ನು ಹೇಳುತ್ತಾನೆ ಅದು ಹೇಗೆಂದರೆ;— ಯೋಗಿ ಜನಗಳು ದೊಡ್ಡ ರಾಜಬೀದಿಯಲ್ಲಿ ಚೂರು ಚೂರುಗಳಾಗಿ ಅಲ್ಲಲ್ಲಿ ಬಿದ್ದಿರುವ ಬಟ್ಟೆ ತುಂಡುಗಳನ್ನು ಕೂಡಿಸಿ ಒಂದು ಕಂತೆವಸ್ತ್ರವನ್ನು ಹೊದೆದುಕೊಂಡು ಮನೆಮನೆಗಳಲ್ಲಿ ಭಿಕ್ಷ ಮಾಡಿದ ಅನ್ನವನ್ನು ಭೋಜನಮಾಡಿ ಜನಸಂಘವನ್ನು ಬಿಟ್ಟು ಸ್ವೇಚ್ಛೆಯಿಂದ ಏಕಾಂತದ ಕಡೆ ಸಂಚಾರಮಾಡುತ್ತಾ ಪ್ರಪಂಚದ ಆಶೆಯಿಂದ ದೂರದಲ್ಲಿ ಶಾಂತಿಸುಖವನ್ನು ಅನುಭವಿಸುತ್ತಾ ಇರುತ್ತಾರೆಂದು ಭಾವವು ॥ ಸ್ವಭಾವೋಕ್ತ್ಯಲಂಕಾರಃ ॥೯೫॥

ಶ್ಲೋ॥ ಚಾಂಡಾಲಃ ಕಿಮಯಂ ದ್ವಿಜಾತಿರಥವಾ ಶೂದ್ರೋಽಥ ಕಿಂ
ತಾಪಸಃ ಕಿಂ ವಾ ತತ್ತ್ವವಿವೇಕಪೇಶಲಮತಿರ್ಯೋಗೀ-
ಶ್ವರಃ ಕೋಽಪಿ ಕಿಂ ॥ ಇತ್ಯುತ್ಪನ್ನವಿಕಲ್ಪಜಲ್ಪಮುಖ
ರೈರಾಭಾಷ್ಯಮಾಣಾ ಜನೈರ್ನ ಕ್ರುದ್ಧಾಃ ಪಥಿ ನೈವ
ತುಷ್ಟಮನಸೋ ಯಾಂತಿ ಸ್ವಯಂ ಯೋಗಿನಃ ॥೯೬॥

ಟೀಕಾ॥ ಅಯಂ-ಪರಿದೃಶ್ಯಮಾನನಾದವನು, ಚಂಡಾಲಃ ಕಿಂ-ಚಂಡಾಲನೋ ಅಥವಾ ಹಾಗಲ್ಲದೆ ಹೋದರೆ, ದ್ವಿಜಾತಿಃ ಕಿಂ - ಬ್ರಾಹ್ಮಣನೇ ಅಥವಾ ಹಾಗಲ್ಲದೆ ಹೋದರೆ, ಶೂದ್ರಃ ಕಿಂ-ಶೂದ್ರನೇ ಯೇನೋ, ತಾಪಸಃ ಕಿಂ ತಪಸ್ವಿಯೋ ಯೇನೋ, ಅಥವಾ ಹಾಗಲ್ಲದೆಹೋದರೆ, ತತ್ತ್ವವಿವೇಕಪೇಶಲಮತಿಃ ತತ್ತ್ವ-ಬ್ರಹ್ಮತತ್ತ್ವದ, ವಿವೇಕ ವಿವೇಚನೆಯಲ್ಲಿ, ಪೇಶಲ-ಆಸಕ್ತವಾದ ಮತಿಃ- ಬುದ್ಧಿಯುಳ್ಳಂಥ, ಕೋಽಪಿ- ಅನಿರ್ವಾಚ್ಯನಾದ, ಅಥವಾ ಒಬ್ಬಾನೊಬ್ಬನಾದ, ಯೋಗೀಶ್ವರಃ ಕಿಂ - ಯೋಗೀಶ್ವರನೋ. ಇತಿ - ಹೀಗೆಂದು, ಉತ್ಪನ್ನವಿಕಲ್ಪಜಲ್ಪಮುಖರೈಃ- ಉತ್ಪನ್ನ- ಹುಟ್ಟಿದಂಥ, ವಿಕಲ್ಪ- ಪರ್ಯಾಯಗಳ, ಜಲ್ಪ- ಹೇಳೋಣದರಿಂದ, ಮುಖರೈಃ - ಶಬ್ದಾಯಮಾನಗಳಾಗಿ ಮಾಡಲ್ಪಟ್ಟ, ಜನೈಃ- ಜನಗಳಿಂದ, ಅಭಾಷ್ಯಮಾಣಾಃ- ಹೇಳಲ್ಪಟ್ಟ, ಯೋಗಿನಃ- ಯೋಗಿಜನಗಳು, ಪಥಿ - ಮಾರ್ಗದಲ್ಲಿ, ಅಕ್ರುದ್ಧಾಃ ಸಂತಃ - ಕೋಪವಿಲ್ಲದೆ ಇರುವರಾಗಿ, ನೈವತುಷ್ಟಮನಸಃ ಸಂತಃ- ಸಂತುಷ್ಟಮನಸ್ಸುಳ್ಳವರಾಗಿಯೂ ಇಲ್ಲದೆ, ಸ್ವಯಂ- ತಾವು, ಯಾಂತಿ - ಹೋಗುತ್ತಾರೆ. ॥೯೬॥

ತಾತ್ಪರ್ಯ—ಯೋಗೀಶ್ವರರಿಗೆ ಜನಗಳು ಮಾಡುವ ನಿಂದಾಸ್ತುತಿಗಳಿಂದ ಹರ್ಷಾಮರ್ಷಗಳು ಇರುವವಿಲ್ಲವೆಂಬುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ ಅದು ಹೇಗೆಂದರೆ:—ಯೋಗಿಜನಗಳನ್ನು ನೋಡಿ ಊರಜನ

ಗಳು ಇವನು ಚಂಡಾಲನೋ ಅಥವಾ ಬ್ರಾಹ್ಮಣನೋ ಅಲ್ಲದೆ ಶೂದ್ರನೋ ಅಥವಾ ತತ್ತ್ವವಿಚಾರಪರನಾದ ಯೋಗೀಶ್ವರನೋ ಹೀಗೆಂದು ಉತ್ಕೃಷ್ಟತ್ವಾಪಕೃಷ್ಟತ್ವವನ್ನು ಕಲ್ಪನೆಮಾಡಿ ಜನಜನಿತವಾಗಿ ಆಡುತ್ತಾಯಿರುವ ಮಾತುಗಳನ್ನು ಕೇಳಿ ಯೋಗೀಶ್ವರರು ಈ ಮಾತುಗಳಲ್ಲಿ ಹರ್ಷಪರಿತಾಪಗಳನ್ನು ಹೊಂದದೆ ದೊಡ್ಡಬೀದಿಯಲ್ಲಿ ತಮ್ಮಿಷ್ಟಕ್ಕೆ ತಾವೇ ತೂಷ್ಣೀಂಭಾವದಿಂದ ಹೊರಟು ಹೋಗುತ್ತಿರುವರು. ಯೋಗಿಜನಗಳಿಗೆ ಮಾನಾಭಿಮಾನಗಳಲ್ಲಿಯೂ ಕಾಂಚನ ಲೋಷ್ಟಗಳಲ್ಲಿಯೂ ಸಮವಾದ ಬುದ್ಧಿ ಇರುವದೆಂದು ಭಗವದ್ಗೀತೆಯಲ್ಲಿ ಹೇಳಿರುವದರಿಂದ ಭಿನ್ನಜ್ಞಾನ ಶೂನ್ಯದ್ವಾರಾ ಅಖಂಡ ಪರಬ್ರಹ್ಮಜ್ಞಾನದಲ್ಲಿ ಆಸಕ್ತರಾಗಿರುತ್ತಾರೆಂದು ಭಾವವು ||೯೬||

ಶ್ಲೋ|| ಹಿಂಸಾಶೂನ್ಯಮಯತ್ನಲಭ್ಯಮಶನಂಧಾತ್ರಾಮರು
ತ್ಕಲ್ಪಿತಂವ್ಯಾಳಾನಾಂಪಶವಸ್ತೃಣಾಂಕುರಭುಜಸ್ತು
ಷ್ಟಾಸ್ಸ್ಥಲೀಶಾಯಿನಃ || ಸಂಸಾರಾರ್ಣವಲಂಘನಕ್ಷ
ಮಧಿಯಾಂವೃತ್ತಿಃಕೃತಾಸಾನೃಣಾಂತಾಮನ್ವೇಷಯ
ತಾಂಪ್ರಯಾಂತಿನತತಂಸರ್ವೇಸಮಾಪ್ತಿಂಗುಣಾಃ ||

ಟೀಕು|| ಹಿಂಸಾ- ಪರಹಿಂಸಾದಿಗಳಿಂದ, ಶೂನ್ಯಂ - ರಹಿತವಾದ, ಅಯತ್ನಲಭ್ಯಂ-ಅಯತ್ನ- ಪ್ರಯತ್ನವಿಲ್ಲದೆ, ಲಭ್ಯಂ- ಪ್ರಾಪ್ತವಾದ, ಅಶನಂ ಅನ್ನವು, ವ್ಯಾಳಾನಾಂ- ಸರ್ಪಗಳಿಗೆ, ಧಾತ್ರಾ- ವಿಚಿತ್ರಸೃಷ್ಟಿಕರ್ತನಾದ ಬ್ರಹ್ಮನಿಂದ, ಮರುತ್- ವಾಯುವಾಗಿ, ಕಲ್ಪಿತಂ- ಉಂಟುಮಾಡಲ್ಪಟ್ಟಿತು, ಪಶವಃ- ಗೋವು ಮೊದಲಾದವುಗಳು, ತೃಣಾಂಕುರಭುಜಸ್ಸಂತಃ- ತೃಣ- ಹುಲ್ಲುಗಳ, ಅಂಕುರ- ಚಿಗುರುಗಳನ್ನು, ಭುಜಃಸಂತಃ - ಭುಂಜಿಸುವವುಗಳಾಗಿ ಅಥವಾ ತಿನ್ನುವುಗಳಾಗಿ, ತುಷ್ಟಾಃ - ಸಂತುಷ್ಟವಾದಂಥಾವುಗಳಾದ ಕಾರಣವೆ, ಸ್ಥಲೀ- ವಿಶಾಲವಾದ ಪ್ರದೇಶದಲ್ಲಿ, ಶಾಯಿನಃ- ಮಲಗಿಕೊಳ್ಳುವವುಗಳು, ಭವಂತಿ - ಆಗುತ್ತವೆ, ಸಂಸಾರಾರ್ಣವಲಂಘನಕ್ಷಮಧಿಯಾಂ- ಸಂಸಾರ- ಸಂಸಾರವೆಂಬುವ, ಅರ್ಣವ- ಸಮುದ್ರವನ್ನು, ಲಂಘನ- ದಾಟೋಣದರಲ್ಲಿ, ಕ್ಷಮ- ಸಮರ್ಥವಾದ, ಧಿಯಾಂ - ಬುದ್ಧಿವುಳ್ಳ, ನೃಣಾಂ- ಮನುಷ್ಯರಿಗೆ, ಸಾ-ಆ ಪ್ರಸಿದ್ಧವಾದ, ವೃತ್ತಿಃ- ಜೀವನವು, ಕೃತಾ- ಮಾಡಲ್ಪಟ್ಟಿತು, ತಾಂ- ಅಂಥಾ ವೃತ್ತಿಯನ್ನು, ಅನ್ವೇಷಯತಾಂ- ಹುಡುಕುತ್ತಲಿರುವ ಮನುಷ್ಯರ, ಅಥವಾ ಯೋಗಿಗಳ, ಸರ್ವೇ- ಸಮಸ್ತವಾದ, ಗುಣಾಃ

ಸತ್ವರಜಸ್ತಮೋಗುಣಗಳು, ಸತತಂ - ಯಾವಾಗಲು, ಸಮಾಪ್ತಿಂ - ನಾಶವನ್ನು, ಪ್ರಯಾಂತಿ- ಹೊಂದುತ್ತವೆ ॥೯೭॥

ತಾತ್ಪರ್ಯ—ಈ ಶ್ಲೋಕದಲ್ಲಿ ಪರಹಿಂಸೆಯಿಲ್ಲದೆ ಜೀವನವನ್ನು ಹೇಳುತ್ತಾನೆ. ಅದು ಹೇಗೆಂದರೆ;—ವಿಚಿತ್ರ ಸೃಷ್ಟಿಕರ್ತನಾದ ಬ್ರಹ್ಮನು ಪರರಿಗೆ ಯಾವವಿಧವಾದ ಹಿಂಸೆಯೂ ಇಲ್ಲದೆ ಪ್ರಯತ್ನವಿಲ್ಲದೆ ಅಲಭ್ಯವಾಗಿಯೂ ಇರುವ ವಾಯುವನ್ನು ಸರ್ಪಗಳ ಆಹಾರಕ್ಕೋಸ್ಕರವೂ ಗೋವುಗಳಿಗೋಸ್ಕರ ಒಳ್ಳೆಯಹುಲ್ಲನ್ನೂ ಸೃಷ್ಟಿಸಿದ್ದಾನೆ ಸರ್ಪಗಳು ವಾಯ್ವಾಹಾರವನ್ನು ಮಾಡಿಕೊಂಡು ಸುಖವಾಗಿವೆ. ಗೋವು ಮೊದಲಾದ ಪಶುಗಳು ಚಿಗುರುಹುಲ್ಲನ್ನು ಆಹಾರವಮಾಡಿಕೊಂಡು ವಿಶಾಲವಾದ ಪ್ರದೇಶಗಳಲ್ಲಿ ಮಲಗಿಕೊಂಡು ಸುಖಿಸುತ್ತವೆ. ಸಂಸಾರ ಸಮುದ್ರವನ್ನು ದಾಟಬೇಕೆಂಬುವರಿಗೆ ಅಂದರೆ ಜನನಮರಣ ಪ್ರವಾಹಾದಿಗಳಿಗೆ ಸಿಕ್ಕದೆ ಶಾಶ್ವತವಾದ ಮೋಕ್ಷವನ್ನು ಹೊಂದಲಪೇಕ್ಷೆಯುಳ್ಳ ಜನಗಳು ಆ ಪ್ರಸಿದ್ಧವಾದ ತೃಣಾಂಕುರವೂಯು ಭಿಕ್ಷಾವೃತ್ತಿಯು ಇದ್ದೇಯಿದೆ ಅಂಥಾವೃತ್ತಿಯನ್ನು ಹುಡುಕುವ ಸತ್ವರಜಸ್ತಮೋಗುಣಗಳು ಸಮಾಪ್ತಿಯನ್ನು ಹೊಂದುತ್ತವೆ. ಆ ಗುಣಪ್ರಕೃತಿಯೇ ಇಲ್ಲದೆಹೋಗಿ ಮುಕ್ತರಾಗುತ್ತಾರೆಂದು ಭಾವವು.

ಶ್ಲೋ॥ ಗಂಗಾತೀರೇಹಿಮಗಿರಿಶಿಲಾಬದ್ಧಪದ್ಮಾಸನಸ್ಯಬ್ರಹ್ಮ
ಧ್ಯಾನಾಭ್ಯಾಸನವಿಧಿನಾಯೋಗನಿದ್ರಾಂಗತಸ್ಯ ॥ ಕಿಂ
ತೈರ್ಭಾವ್ಯಂಮಮಸುದಿವಸೈರ್ಯತ್ರತೇನಿರ್ವಿಶಂ
ಕಾಃಕಂಡೂಯಂತೇಜರಠಹರಿಣಾಸ್ಸ್ವಾಂಗಮಂಗೇ
ಮದೀಯೇ ॥ ೯೮ ॥

ಟೀಕು ॥ ಗಂಗಾತೀರೇ · ಗಂಗಾನದಿಯ, ತೀರೇ- ದಡದಲ್ಲಿ ಹಿಮಗಿರಿಶಿಲಾಬದ್ಧಪದ್ಮಾಸನಸ್ಯ- ಹಿಮಗಿರಿ- ಹಿಮವತ್ಪರ್ವತದ, ಶಿಲಾ- ಕಲ್ಲುಗಳಲ್ಲಿ ಬದ್ಧ - ಮಾಡಲ್ಪಟ್ಟ, (ಅಥವಾ ಕಟ್ಟಲ್ಪಟ್ಟ) ಪದ್ಮಾಸನಸ್ಯ - ಪದ್ಮರೂಪವಾದ ಆಸನ ಬಂಧವುಳ್ಳ, ಬ್ರಹ್ಮಧ್ಯಾನಾಭ್ಯಸನವಿಧಿನಾ- ಬ್ರಹ್ಮ- ಪರಬ್ರಹ್ಮನ, ಧ್ಯಾನ- ಚಿಂತನೆಯು, ವಿಧಿನಾ- ವಿಧಾನದಿಂದ, ಯೋಗನಿದ್ರಾಂ-ನಿದ್ರೆಯನ್ನು, ಗತಸ್ಯ- ಹೊಂದಿರುವ ಯೋಗಿಯಾದ ನನಗೆ, ತೈಃ- ಅಪೂರ್ವೋಕ್ತಗಳಾದ, ಸುದಿವಸೈಃ- ಒಳ್ಳೆದಿವಸಗಳಿಂದ, ಕಿಂಭಾವ್ಯಂ- ಆಗತಕ್ಕದ್ದೇನು

ಇದೆ, ಯತ್ರ - ಯಾವ ಗಂಗಾತೀರದಲ್ಲಿ, ಜರಠಹರಿಣಾಃ - ಜರಠ - ಮುದಿಯಾದ, ಹರಿಣಾಃ- ಜಿಂಕೆಗಳು, ಮದೀಯೇ- ನನ್ನ ಸಂಬಂಧವಾದ, ಅಂಗೇ- ಶರೀರಾವಯದಲ್ಲಿ, ಸ್ವಾಂಗಂ- ತನ್ನ ಅವಯವವನ್ನು, ಯತ್ರ-ಯಾವಕಾಲದಲ್ಲಿ ಕಂಡೂಯಂತೇ ತಿಕ್ಕುತ್ತ ದೆಯೋ, ತೇನ-ಅದರಿಂದ, ಭಾವ್ಯಂ-ಆಗತಕ್ಕದ್ದು.

ತಾತ್ಪರ್ಯ— ಈ ಶ್ಲೋಕದಲ್ಲಿ ಯೋಗಮಾರ್ಗವನ್ನು ಹೇಳುತ್ತಾನೆ ಅದು ಹೇಗೆಂದರೆ; —ಹಿಮವತ್ಪರ್ವತದಲ್ಲಿ ಗಂಗಾನದಿಯ ದಡದಲ್ಲಿ ಪರಿಶುದ್ಧವಾದ ಕಲ್ಲಿನಮೇಲೆ ಕೂತುಕೊಂಡು ಯೋಗಾಭ್ಯಾಸದಿಂದ ಆನಂದಪಡುವ ನನಗೆ ಈ ದಿನಗಳಿಂದ ಏನು ಆಗತಕ್ಕದ್ದು? ಏನೂ ಇಲ್ಲ. ಯಾವ ಕಾಲದಲ್ಲಿ ಗಂಗಾನದಿಯ ದಡದಲ್ಲಿ ಯೋಗಭ್ಯಾಸಬಲದಿಂದ ಆನಂದವಾಗಿ ಇರುವ ಕಾಲದಲ್ಲಿ ಮುದಿಜಿಂಕೆಗಳು ತಮ್ಮಗಳ ಮೈಯಲ್ಲಿರುವ ನವೆಯನ್ನು ಹೋಗಲಾಡಿಸಿ ಕೊಳ್ಳುವದಕ್ಕೋಸ್ಕರ ತಮ್ಮಮೈಯನ್ನು ನನ್ನ ಮೈರೆಗೆ ತಿಕ್ಕುತ್ತದೆಯೊ ಆ ದಿವಸಗಳಿಂದ ನನಗೆ ಆಗಬೇಕಾಗಿದೆ. ಅಂದು ಯಾವಾಗ್ಗೆ ಬ್ರಹ್ಮಾನುಸಂಧಾನ ಯೋಗಾನಂದವನ್ನು ಅನುಭವಿಸುತ್ತಾನೆಯೋ ಅದು ಸುದಿನಗಳೆಂದು ಹೇಳಿದನೆಂದು ಭಾವವು. ॥೯೭॥

ಶ್ಲೋ॥ ಪಾಣಿಃಪಾತ್ರಂಪವಿತ್ರಂಭ್ರಮಣಪರಿಗತಂಭೈಕ್ಷಮಕ್ಷಯ್ಯಮನ್ನಂ
ವಿಸ್ತೀರ್ಣಂವಸ್ತ್ರಮಾಶಾದಶಕಮಚಪಲಂತಲ್ಪಮಸ್ವಲ್ಪಮುರ್ವೀ ।
ಯೇಷಾಂನಿಸ್ಸಂಗತಾಂಗೀಕರಣಪರಿಣತಸ್ವಾಂತಸಂತೋಷಿಣಸ್ತೇ
ಧನ್ಯಾಸ್ಸಂನ್ಯಸ್ತದೈನ್ಯವ್ಯತಿಕರನಿಕರಾಃಕರ್ಮನಿರ್ಮೂಲಯಂತಿ॥೯೮॥

ಟೀಕು॥ ಪವಿತ್ರಂ- ಪರಿಶುದ್ಧವಾದ, ಪಾಣಿಃ - ಹಸ್ತಗಳೆಂಬುವಂಥ, ಪಾತ್ರಂ- ಪಾತ್ರವು, ಭ್ರಮಣಪರಿಗತಂ- ಭ್ರಮಣ - ಸಂಚಾರದಿಂದ, ಪರಿಗತಂ- ಪ್ರಾಪ್ತವಾದಂಥ, ಭೈಕ್ಷಂ - ಭಿಕ್ಷಾನ್ನಮೂಹವೆಂಬುವ, ಅಕ್ಷಯ್ಯಂ- ನಾಶರಾಹಿತ್ಯವಾದ, ಅನ್ನಂ - ಅನ್ನವು, ಆಶಾದಶಕಂ - ಆಶಾ - ದಿಕ್ಕುಗಳ, ದಶಕಂ- ದಶಕವು, ವಿಸ್ತೀರ್ಣಂ - ವಿಶಾಲವಾದ, ವಸ್ತ್ರಂ- ಆಚ್ಛಾದನವು, ಅಸ್ವಲ್ಪಂ-ಅಧಿಕವಾದ, ಅಚಪಲಂ-ಅಲ್ಲಾಡದೆ ಇರುವ, ಉರ್ವೀ-ಭೂಮಿಯು ತಲ್ಪಂ- ಹಾಸಿಗೆಯು, ಯೇಷಾಂ- ಯಾರುಗಳಿಗೆ, ನಿಸ್ಸಂಗತ- ಸಂಗರಾಹಿತ್ಯವನ್ನು, ಅಂಗೀಕರಣ- ಅಂಗೀಕಾರದಿಂದ, ಪರಿಣತ-ಪರಿಪಕ್ವವಾದ, ಸ್ವಾಂತ- ಮನಸ್ಸಿನಿಂದ, ಸಂತೋಷಿಣಃ- ಸಂತೋಷಿಸುತ್ತಲಿರುವ, ಸಂನ್ಯಸ್ತದೈನ್ಯವ್ಯತಿಕರನಿಕರಾಃ - ಸಂನ್ಯಸ್ತ - ಬಿಡಲ್ಪಟ್ಟ, ದೈನ್ಯ- ದೀನತ್ವದ, ವ್ಯತಿಕರ- ವ್ಯತ್ಯಾಸಗಳ, ನಿಕರಾಃ- ಸಮುದಾಯಗಳುಳ್ಳ, ತೇಧನ್ಯಾಃ- ಆ ಕೃತಾರ್ಥರಾದ ಪುರುಷರು, ಕರ್ಮನಿರ್ಮೂಲಯಂತಿ - ಕರ್ಮ - ವಾಸನಾಬದ್ಧಸಂ

ಸಾರರೂಪವಾದ ವ್ಯಾಪಾರಗಳನ್ನು, ನಿರ್ಮೂಲಯಂತಿ - ನಾಶಪಡಿಸುವಂ
ಥವರಾಗುತ್ತಾರೆ ॥೯೯॥

ತಾತ್ಪರ್ಯ—ಪೂರ್ವ ಶ್ಲೋಕಾರ್ಥವನ್ನೇ ಭಂಗ್ಯಂತರದಿಂದ ಹೇಳು
ತ್ತಾನೆ. ಅದು ಹೇಗೆಂದರೆ;—ಯೋಗಿಜನಗಳಿಗೆ ಪರಿಶುದ್ಧವಾದ ಹಸ್ತ
ಗಳೇ ಭೋಜನ ಪಾತ್ರಗಳು ಭಿಕ್ಷಾಪದಾರ್ಥ ಸಮುದಾಯವೇ ಆಹಾರವು
(ಅಂದರೆ ಅನ್ನವು) ದಶದಿಕ್ಕುಗಳೇ ವಿಶಾಲವಾದ ವಸ್ತ್ರಗಳು, ಅಖಂಡ ಭೂ
ಮಂಡಲವೇ ದೊಡ್ಡದಾಗಿಯೂ ಅಚಂಚಲವಾಗಿಯೂ ಇರುವ ಹಾಸಿಗೆಯು
ಹೀಗೆ ಯಾರ ಅಂತರಂಗವು ಇದ್ದು, ಜನಸಂಗರಾಹಿತ್ಯದಲ್ಲಿ ಮನಸ್ಸುಳ್ಳವರಾ
ಗಿ ದೈನ್ಯವೃತ್ತಿಯನ್ನು ಬಿಟ್ಟ ಯಾವ ಮಹಾಪುರುಷರು ಇರುತ್ತಾರೋ
ಅಂಥಾ ಮಹಾಪುರುಷರೇ ಜನನ ಮರಣರೂಪವಾದ ಸಂಸಾರ ಕರ್ಮವನ್ನು
ನಾಶಪಡಿಸಿಕೊಂಡು ಮೋಕ್ಷಗಾಮಿಗಳಾಗುತ್ತಾರೆಂದು ಭಾವವು. ॥೯೯॥

ಶ್ಲೋ॥ ಮಾತರ್ಮೇದಿನಿತಾತಮಾರುತಸಖೇತೇಜಸ್ಸುಬಂಧೋ
ಜಲಭ್ರಾತರ್ವ್ಯೋಮನಿಬದ್ಧಏವಭವತಾಮಂತ್ಯಃಪ್ರ
ಣಾಮಾಂಜಲಿಃ । ಯುಷ್ಮತ್ಸಂಗವಶೋಪಜಾತಸು
ಕೃತಸ್ಫಾರಸ್ಫುರನ್ನಿರ್ಮಲಜ್ಞಾನಾಪಾಸ್ತಸಮಸ್ತ
ಮೋಹಮಹಿಮಾಲೀಯೇಪರಬ್ರಹ್ಮಣಿ ॥೧೦೦॥

ಟೀಕು । ಮಾತಃ- ತಾಯಿಯಾದ, ಹೇಮೇದಿನಿ- ಎಲೈ ಭೂದೇವಿಯೇ
ತಾತ - ತಂದೆಯಾದ, ಹೇಮಾರುತ - ಎಲೈ ವಾಯುವೆ, ಹೇಸಖೇ - ಎಲೈ
ಸ್ನೇಹಿತನಾದ, ತೇಜ - ಎಲೈ ತೇಜಸ್ಸೆ, ಅಥವಾ ಅಗ್ನಿಯೇ, ಸುಬಂಧೋ-
ಸಮೀಪದ ಬಂಧುವಾದ, ಹೇ ಜಲ - ಎಲೈ ಜಲವೆ, (ಅಥವಾ ಉದಕವೆ)
ಭ್ರಾತಃ - ಸಹೋದರನಾದ, ಹೇ ವ್ಯೋಮ - ಎಲೈ ಅಂತರಿಕ್ಷವೆ, ಭವತಾಂ-
ನಿಮ್ಮಗಳಿಗೆ, ಅಂತ್ಯಃ- ಕಡೆಯದಾದ, ಪ್ರಣಾಮಾಂಜಲಿಃ- ಪ್ರಣಾಮ-ನಮ
ಸ್ಕಾರದ, ಅಂಜಲಿಃ- ಬೊಗಸೆಯು. ನಿಬದ್ಧಏವ, ಕಟ್ಟಲ್ಪಟ್ಟಿತು, (ಅಥವಾ
ಮಾಡಲ್ಪಟ್ಟಿತು) ಯುಷ್ಮತ್ಸಂಗವಶೋಪಜಾತಸುಕೃತಸ್ಫಾರಸ್ಫುರನ್ನಿರ್ಮ
ಲಜ್ಞಾನಾಪಾಸ್ತಸಮಸ್ತಮೋಹಮಹಿಮಾ- ಯುಷ್ಮತ್- ನಿಮ್ಮಗಳ, ಸಂಗ
-ಸಂಬಂಧದ, ವಶ- ಸ್ವಾಧೀನದ ದೆಸೆಯಿಂದ, ಉಪಜಾತ- ಹುಟ್ಟಿದ, ಸುಕೃತ-
ಪುಣ್ಯದಿಂದ, ಸ್ಫಾರ- ಹೆಚ್ಚಾದ, ಸ್ಫುರತ್- ಪ್ರಕಾಶವಾದ, ನಿರ್ಮಲ- ನಿಷ್ಕ
ಲ್ಮಷವಾದ (ಅಥವಾ( ಕಳಂಕರಹಿತವಾದ, ಜ್ಞಾನ- ಸುಜ್ಞಾನದಿಂದ, ಅಥವಾ

ಮೋಕ್ಷೈಕಬುದ್ಧಿಯಿಂದ, ಅಪಾಸ್ತ- ಹೋಗಲಾಡಿಸಲ್ಪಟ್ಟ, ಸಮಸ್ತ- ಅಶೇಷವಾದ, ಮೋಹ-ಪುತ್ರದಾರಾದಿ ಈಷಣತ್ರಯವಾದ ಭ್ರಾಂತಿಯು, ಮಹಿಮಾ ಮಹಾತ್ಮ್ಯವುಳ್ಳ, ಅಹಂ-ನಾನು, ಪರಬ್ರಹ್ಮಣಿ, ಅದ್ವೈತಪರಬ್ರಹ್ಮನಲ್ಲಿ, ಲೀಯೇ- ಅಡಿಗಿಕೊಳ್ಳುತ್ತೇನೆ, ಅಥವಾ ಲೀನವಾಗುತ್ತೇನೆ ||೧೦೦||

ತಾತ್ಪರ್ಯ—ಈ ಶ್ಲೋಕದಲ್ಲಿ ಪಂಚಭೂತಗಳನ್ನು ಸಂಬೋಧನೆ ಮಾಡಿ ಹೇಳುತ್ತಾನೆ: ಅದು ಹೇಗೆಂದರೆ:- ಮಾತೃವಾದ ಭೂದೇವಿಯೇ ತಂದೆಯಾದ ವಾಯುವೇ ಸ್ನೇಹಿತನಾದ ಅಗ್ನಿಯೆ ಸಮೀಚೀನಬಂಧುವಾದ ಉದಕವೆ ಸಹೋದರನಾದ ಆಕಾಶವೆ ; ಕೇಳಿ! ನಿಮ್ಮಗಳಿಗೆ ಇದೆ ಕಡೆಯ ಸಾರಿಯಾದ ಪ್ರಣಾಮಾಂಜಲಿಯು ನನ್ನಿಂದ ಮಾಡಲ್ಪಟ್ಟಿದೆ ನಿಮ್ಮಗ ಸಂಬಂಧದಿಂದ ನನಗೆ ಹುಟ್ಟಿದ ಹೆಚ್ಚಾದ ಸುಕೃತದಿಂದ ನಿರ್ಮಲವಾಗಿ ಮಾಡಲ್ಪಟ್ಟ ಸುಜ್ಞಾನದಿಂದಹೋಗಲಾಡಿಸಲ್ಪಟ್ಟಪುತ್ರೇಷಣಾದಿರೂಪವಾದ ಮೋಹವುಳ್ಳವನಾಗಿ ಜ್ಞಾನಾನಂದ ಸ್ವರೂಪಿಯಾದ ಅದ್ವೈತ ಪರಬ್ರಹ್ಮನಲ್ಲಿ ಜೀವಬ್ರಹ್ಮರ ಐಕ್ಯಾನುಸಂಧಾನದಿಂದ ಅಡಗಿಕೊಳ್ಳುತ್ತೇನೆ. ಅಂದರೆ ದೇಹವು ಪೃಥಿವ್ಯಪ್ತೇಜೋವಾಯ್ವಾಕಾಶಾದಿಗಳಿಂದ ಹುಟ್ಟಿ ಆಯಾ ಇಂದ್ರಿಯ ಕಾರ್ಯಗಳನ್ನು ಮಾಡುತ್ತವೆ. ಇಂಥಾ ಮಹಾಭೂತಸಂಸರ್ಗದಿಂದ ಸುಜ್ಞಾನವುಳ್ಳವನಾಗಿ ಪುತ್ರದಾರಾದಿ ಮೋಹಗಳನ್ನು ತ್ಯಜಿಸಿ ಬ್ರಹ್ಮಾನುಸಂಧಾನದಿಂದ ಜೀವನ್ಮುಕ್ತನಾಗುತ್ತೇನೆಂದು ಹೇಳಿದ ಭಾವವು. ಈ ಶ್ಲೋಕದಲ್ಲಿ ಪಂಚಭೂತಗಳಲ್ಲಿಯೂ ಮಾತಾಪಿತ್ರಾದ್ಯ ಭೇದೋಪಚಾರಕಲ್ಪನೆಯ ದೆಸೆಯಿಂದ ರೂಪಕಾಲಂಕಾರಃ. ಈ ರೂಪಕಾಲಂಕಾರೋಕ್ತಿತವಾದ ಕಾವ್ಯಲಿಂಗಾ ಲಂಕಾರೋವ್ಯಜ್ಯತ ಇತ್ಯಲಂಕಾರೇಣ ಅಲಂಕಾರಧ್ವನಿಃ. ||೧೦೦||

## ಇತಿ ಶ್ರೀಭರ್ತೃಹರಿ ಸುಭಾಷಿತೇ ನೀತಿ ಶೃಂಗಾರ ವೈರಾಗ್ಯ ಶತಕೇ ಸಂಜೀವಿನೀ ಟೀಕಾ

ಶ್ಲೋ|| ಸುಭಾಷಿತಸ್ಯಗ್ರಂಥಸ್ಯ | ಮಾಗಡೀ ಪುರವಾಸಿನಾ ||
ಕೃತಾಸಂಜೀವಿನೀಟೀಕಾ | ಕೃಷ್ಣೇನಜಯತಾಂಸದಾ ||೧||

# ಸಂಪೂರ್ಣವು.